ಸಗರಪುತ್ರರಂ ಕಂಡು—"ಇದೇಂ ಗಳಾ ! ನಿಮ್ಮಮ್ಮನಪ್ಪ ಸಗರಚಕ್ರವರ್ತಿಗೆ ಚಿತ್ತ್ರಯೆಂಬ ನೆಲದಿಂ ಕೆಳಗೆ ಸಾಮ್ಯಮುಂಟೆ ? ಕರಮುಕ್ಕಿರ್ದಿರ್ ನಿಮಗೆ ಮೇಗಿಲ್ಲೆಂದು ಕೆಳಗನತಿಕ್ರಮಿಸಿ[1] ದೊಡೆ ಕೆಳಗುಂ ನಿಮ್ಮಂ ತಲೆಕೆಳಗುಮಾಡುಗುಂ" [2]ಎಂದೊಡಱ ನುಡಿದೊಡೆ ಅವರ್ ಮುನಿ(ಳಿ)ದಿಂತೆಂದರ್—

ಕಂ|| ಸಂತತಲವಣಾಂಬುಧಿ [3]ಪ |
ರ್ಯಂತಂ [4]ಧರೆ ಬೀಡು ಭವನವಾಸಿ[5]ಗ ವಾನ ||
ವ್ಯಂತರ ಲೋಕಂಗಳಿವೇ |
ನೆಂತುಂ ಬೆಸ[6] ಗೆಯ್ವುದುಂಟು ಚಕ್ರಿಗೆ ಬಗೆಯಾ || ೩೭ ||

ವ|| ನೀನಾತ[7] ನಾಳ್ಕಿಯುಳವಿನಿತೆಂಬುದು ನಿನ್ನ ಬಾೞ್ವಿಯೊಳಾದಿನಿತೆ ಯೆಂದು ನುಡಿದೆ ಯಕ್ಕುಂ ಎನೆ ನಾಗ[9] ರಾಜಂ ಕಡುಮುನಿದು ಇವಂದಿರ ಗರ್ವಮಿಂತಲ್ಲ[11] ದುಡಿಯುದೆಂದು ತನ್ನ ದೃಷ್ಟಿ ವಿಷದಿಂದಱುವತ್ತುಸಾಸಿರ್ವರುಮು[12] ನೊರ್ವೋದಲೆ ಭಸ್ಮಮಪ್ಪಂತು ಮಾ (ನೋ) ಡಿ ಪೋದಂ—ಇತ್ತ ಸಗರರಾಜಂ ಮುನ್ನ ತನ್ನ ಬಾಣಸಿಗನೊರ್ವಂಗನಸಾನಕಾಲದೊಳ್ ಪಂಚ ನಮಸ್ಕಾರಮಂ [13]ಪೇೞ್ದೊಡವನಾ ಪಂಚನಮಸ್ಕಾರಮುಂ ಕೆಯ್ಕೊಂಡ ಸಮಾಧಿಯ ಫಲದಿಂ ಸ್ವರ್ಗದೊಳ್ ಸುಪ್ರಭನೆಂಬ ದೇವನಾಗಿ ಪುಟ್ಟಿರ್ದವಧಿಜ್ಞಾನದಿಂ ತನ್ನ ಮುನ್ನಿನ[14] ಭವದಂದ ಮುಮಂ, ಸಗರಂ ತನಗೆ[15] ಗೆಯ್ದುಪಕಾರದಿನಾದ ತನ್ನಂದಮುಮಂ ಅಱಿದಾತಂಗೆ ಪ್ರತ್ಯುಪ ಕಾರಮಂ ಮಾೞ್ಪೆನೆಂದು ಬಗೆದಱದು ಈಗ[16] ಳಾತಂಗೆ ಮಕ್ಕಳ [17] ಸಾವಿನೊಳ್ ಮಹಾದುಃಖ [18] ಮೆಯ್ದಿದಪ್ಪುದಱ ನೀಯವಸರದೊಳಾತನಂ ಪ್ರತಿಬೋಧಿಸಿ ದುಃಖಮನಾಱಸುವೆನೆಂದು ದೇವಲೋಕದಿಂ ಬಂದು ಪಾರ್ವನಾಗಿ ಸಗರರಾಜನ ಮನೆಯ ಬಾಗಿಲೊಳ್[19] ನಿಂದು ಕೆಯ್ಯೊಳ್ ತೊವಲಂ ಪಿಡಿ"ದನ್ಯಾಯಮನ್ಯಾಯ"[20]ಮೆಂದು ಗ್ಘಡಿಸಿ ಪುಯ್ಯಲಿಡುವುದುಮಾ ಪುಯ್ಯಲನರಸಂ

---

ಸಹಾಯರೊಳ್ ನುಡಿಯುವೇೞ್ವುದಱಂ ಚಕ್ರಿಯೊಳಪ್ರಿಯನಾಗಿ ಹಿತಮಪ್ಪುದಂ ನೆಗೞ್ವೆನೆಂದಿರ್ಪಿನಂ — ಇತ್ತಕುಮಾರರೊಂದುದೆವಸಂ ಸಗರಚಕ್ರವರ್ತಿಯಲ್ಲಿಗೆ ವಂದೆಮಗೆ ಬೆಸನಂ ಬೆಸಸುವುದೆಂದೆನೆ 'ಕೈಲಾಸದೊಳ್ ಭರತೇಶನುಂ ಮಾಡಿಸಿದ ರತ್ನಮಯಪ್ರತಿಮೆಗಳ್ಗೆ ನಿಮ್ಮ ಬಲ್ಲಂದದೊಳ್ ಕಾಪಂ ಮಾಡಿ' ಎಂದೊಡೆ ಅವರ್ ವಂದು ಕೈಲಾಸದ ಬಳಸಿಯಗೞಂ ಮಾಡುವರಂ ಮಣಿಕೇತು ದೃಷ್ಟಿವಿಷಭುಜಂಗನಾಗಿ ಕೃತಕದೊಳವರಂ ಭಸ್ಮಂಮಾಡಿದೊಡೆ

---

(1) ದೊಡೆ ನಿಮ್ಮಂತಲೆ (ಕ) (2) ಎಂದೊಡೆ ಅದರ್ (ಕ) (3) ಪರಿ| ಯಂತಂ (ಗ) (4) ವರೆ (ಗ) (5) ವಾಸಿವಾನಬ್ಯಂತರಿಗರಲೋಕದೊಳದೆಂತು (ಕ) ವ್ಯತರಲೋಕಗಳಿದೆಂ (ಗ) ಲೋಕಂಗಳಮೆಂತುಂ (ಘ) (6) ಗೆಯ್ವುನಾಡು (ಕ) (7) ನಳ್ಪಿಯುಳವಿಯನಿತೆಂಬುದು (ಕ) ನಿನ್ನ ಬಾೞ್ಕೆಯಿಂದಿನಿತೆ (ಕ,ಗ) (8) ಈ ಭಾಗವು ಕಪ್ರತಿಯಲ್ಲಿ (ತುಟಿತ) (9) ನಾಗರಾಜಂಡುಳಿದಿವರ (ಘ) (10) ಗರ್ಭ(ಕ) (11) ದುೞಯು(ಕ) (12) ನೊಡನೆ ಭಸ್ಮಮಾಗೆ (ಕ) (13) ಪೇೞ್ದು ಸಮಾಧಿಯಂ ಕೂಡಿದವನಾನಮಸ್ಕಾರಫಲದಿಂ (ಕ) ಮಾಡಿದೊಡನಾಸಮಾಧಿಯ ಫಲ (ಘ) (14) ಭವಮುನರಿದಂದ (ಕ) (15) ಗೆಯ್ದುಪಕಾರದಿನಾದ ತನ್ನಂದಮುಮನಱಿದುಮಾತಂಗೆ ಪ್ರತ್ಯುಪ ಕಾರಂಗೆಯ್ವೆ ನೀಗಳಾತನಮಕ್ಕಳ(ಘ) ಗೆಯ್ದುಪಕಾರದಂದಮಯನಱಿದಾತಂಗೆ ಪ್ರತ್ಯುಪಕಾರಮನೇನಂ ಮಾೞ್ಪೆ ನೆಂದು ಬಗೆದೞದೀಗಳಾತಂಗೆ ಮಕ್ಕಳ (ಕ) (16) ಳಾತನ (ಖ) (17) ಸಾವಿನೊಳತಿದುಃಖ (ಕ) (18) ಮಪ್ಪು ದೀಪದದೊಳಾತನಂ ಸಂಬೋಧಿಸಿ (ಕ) (19) ನಿಂದು ತೊವಲಂ (ಕ) (20) ಮೆಂದು ಪುಯ್ಯ (ಕ,ಗ)

ಕೇಳ್ದು [1]ಕರೆಯಲಟ್ಟಿದೊಡೆ ಬಂದು ಮುಂದೆ[2] ನಿಂದಿರ್ದನಂ "ಇದೇನನ್ಯಾಯಂ" ಎನೆ "ನೀನಾರಯ್ಯ ಲಾಪೂರ್ಡೆನ್ನ ಪುಯ್ಯಲಂ ಪೇೞ್ವೆಂ" ಎನೆ "ಆನಾರಯ್ಯ[3] ಲಾಱ[3]ನೆಂಬಂತೆನಗರಿದುಂ ಪಿರಿದುವಿಲ್ಲಂ ಜಡೆ ಪೇೞ್, ಆರಯ್ದು ಕೊಟ್ಟಪೆಂ" ಎಂದೊಡಾ ಪಾರ್ವನಿಂತೆಂದಂ—

ಚಂ|| ಬಿಡದತಿಭಕ್ತಿಯಿಂ ಪರಸಿ ದೇವತೆ[4]ಗಳ್ಗೆ ನಿತಾನುಮಂದದಿಂ |
ಪಡೆದೆನಪೂರ್ವನಂ ಮಗನ[5] ನೊರ್ವನನಾಂ ಕರವೊಂದಿದಱ್ಕಱಿಂ ||
ನಡೆಪಿದೆನಾತನಂ [6]ಮುಡಿಪಿದಂ [7]ಜವನಿಂ ಪೆಱತೇನೊ ಚಕ್ರಿ ನೀಂ |
ತಡೆದಿರದೆನ್ನ ಪುತ್ರನಸುವಂ ಪಡೆವೀವುದು ನೆಟ್ಟನೆಂಬುವಂ || ೩೮ ||

ವ || [8]ಎನೆ ಕೇಳ್ದು ತಾನಾರಯ್ವೆನೆಂದುದರ್ಕಮಾತನ ಬೇಡಿದನಾಚಾರ[9]ಕ್ಕಮರಸಂ ಬೆಕ್ಕಸಂಬಟ್ಟು ನಿಲೆ, ಚಿತ್ರವಿದನೆಂಬ ಪೆರ್ಗಡೆಯೆಂಗುಂ "ಎಲೆ[10] ಪಾರ್ವಾ ಕೇಳ್ ನಿನ್ನ ಮಗನ ಪ್ರಾಣಮುಂ ನಾವು ಬೇೞ್ದಾದೊಡಂ ಪಡೆದಿತ್ತಪೆವು, ಕರಮರಿಯವುಂ ಪಿರಿಯವುಮಪ್ಪ ಹೋಮದ್ರವ್ಯಂಗಳೆಲ್ಲಮೆಮ್ಮಲ್ಲಿಯೊಳವು[11] ಉೞಿಕೆಯಪ್ಪುವನಿ[12]ನ್ನೊಂದೆರಡನಾಗುಮಾಡಿ ತರ್ಪುದು-ಎಂದೊಡೆ " ಅವಾವುವು ? " ಎಂದೊಡೆ ಎಂದುಂ ತಮ್ಮೊಕ್ಕಲೊಳಗಾರುಂ ಸಾಯದರ ಮನೆಯ ಪುಲ್ಲಂ ಕಿರ್ಚುಮಂ ತರ್ಪುದು " ಎಂದೊಡಾಮಾತಿನಂದಮನಱಿದಂತೆ ಗೆಯ್ವೆ[13]ನೆಂದು ಪೋಗಿ " ಪೊೞಲೊಳಗೆಲ್ಲಮಾರೈದು ಬಂದೆ ನಂತಪ್ಪುವನೆಲ್ಲಿಯುಂ ಪಡೆಯೆಂ " ಎಂದೊಡೆ ಅರಸನೆಂಗುಂ " ಎಲೆ[14] ಪಾರ್ವಾ, ಒರ್ವರುಂ ಸಾಯದೊಕ್ಕಲ ಮನೆಯ ಪುಲ್ಲಂ ಕಿರ್ಚುಮನೆಂತು ಪಡೆಯ[15]ಲ್ಬಾರದುನುಂ ಬಗೆದಂತೆ ಪೋದ ಪ್ರಾಣಮನಾರ್ಗಂ [16]ಪಡೆಯಲ್ಬಾರದೆಂಬುದನೆ [17]ಬಗೆವೆಯಲ್ಲಾ :—

---

ಆದ[18]ನಾರು ಮರಸಂಗಱಿ ಪ[19]ಲಣ್ಮದಿರೆ ತಾನೆ ಪಾರ್ವನ ವೇಷದೊಳ್ [20]ಬಂದು ಸಗರರಾಜನ ಮನೆಯ ಬಾಗಿಲೊಳ್ ನಿಂದು ತೊಪಲಂ ಪಿಡಿದು "ಅನ್ಯಾಯಮನ್ಯಾಯ" ಮೆಂದು ಪುಯ್ಯಲಿಟ್ಟೊ(ರ್ದೊ)ಡಾ ಪುಯ್ಯಲನರಸಂ ಕೇಳ್ದು ಬೞಿಯಟ್ಟಿದೊಡೆ ಬಂದು

---

(1) ಬೞಿಯಟ್ಟಿಬರಿಸಿದೊಡೆ (ಛ) (2) ನಿಂದವನಂ (ಕ) ನಿಂದೊಡಸಿದೇನನ್ಯಾಯ (ಜ) (3) ಲಾರದಂತೆನಗರಿದುಂ ಬಲ್ಲಿತ್ತು ಮಿಲ್ಲಾರೈದುತಿರ್ದುವೆಂ ಪೇೞ್ದೆಂದೊಡಾಪಾರ್ವ (ಕ) ಬಳಿತ್ತುವಿಲ್ಲಾ (ಗ) (4) ಗಳ್ಗೆತಾನು (ಕ) ಳ್ಗೆನತಾನು (ಗ,ಜ) (5) ನಾಂಭರದಿಂಕರಮೊಂದಿ (ಕ) ನಾಂಕರಮೊಂದಿ (ಜ) ನೊರ್ವನಾಂಕರಮೊಂದಿ (ಛ) ನಾಂಭರದಿಂಕರ (ಟ) (6) ಮುಡಿಪಿ (ಖ) (7) ಮೃತ್ಯುಪೆರ (ಕ,ಜ) (8) ಕೇಳ್ದು (ಕ) ಕೇಳ್ದುತಾನಾರೈದುತಿರ್ದುವೆಂ (ಗ) (9) ಕ್ಕಂ ಬೆಕ್ಕಸಂ ಬಟ್ಟಿರ (ಛ) ಕ್ಕಂಬೆಕ್ಕಸಮಾಗಿರೆ (ಕ) (10) ಪಾರ್ವಾ ನಿನ್ನ ಮಗನ ಪ್ರಾಣಮುಂ ಬೇೞ್ದಾದೊಡಮಿತ್ತ (ಕ) ಬೇೞ್ಪೊಡಂ (ಛ) ಬೇಳಪ್ಪಡಂ (ಗ) (11) ವಿಳಿಯುವಪ್ಪು (ಕ,ಟ) ವಿಳಿಕೆಯಪ್ಪ (ಗ) ವರಿಕೆಯಪ್ಪು (ಛ) (12) ವೊಂದೆರಡಂ ತರ್ಪು (ಕ) (13) ನೆಂದೇ ಪೊೞಲೊಳಗಾರೈದು ಬಂದಪೆನೆಂದು ಪೋಗಿಯಂತಪ್ಪು (ಕ) ನೆಂದುಪೋಗಿ ಪೊೞಲೊಳಗೆಲ್ಲಾರೈದು ಬಂದೆನಂತಪ್ಪುವ (ಗ) ನೆಂದುಪೊೞಲೊಳಗಾರೈದುಬಂದಪೆನೆಂದು ಪೋಗಿ ಮಂತಪ್ಪುವ (ಜ) (14) ಪಾರ್ವಾತಮ್ಮೊಕ್ಕಲೊಳಾರುಂಸಾಯ (ಗ) (15) ಯಲಾಗದಂತೆ (ಕ,ಟ) ಯ್ಯಲ್ಬಾರದಂತೆ (ಛ) (16) ತರಲ್ಬಾ (ಖ,ಗ,ಛ) (17) ಬಗೆಯಲಾಗದೆ (ಕ,ಟ) (18) ನಾರಂ ಮರಸಂಗ (ಕ) (19) ಲಮ್ಮದಿರೆ (ಕ,ಜ) (20) ಬಂದು ಸಾರ್ವನಾಗಿ ನಗರ (ಕ,ಜ)

[ * ಇಲ್ಲಿಂದ ಮುಂದೆ ಪಾಠಾಂತರವಿಲ್ಲ ]

ಕಂ|| ಪುಟ್ಟಿದೊಡೆ ಸಾವುಮಂ[1] ತೊಡ |
ವುಟ್ಟ ತಗುಳ್ದೊಡನೆ ನ ಡೆಯಲಿರ್ದಪುದದು ತಾಂ ||
ಮುಟ್ಟುವುದುಂ ಚೋದ್ಯಮೆ ಬಾ |
ಯ್ವಿಟ್ಟುಮ[3]ಬಿಲ್ದಱವುಗೆಟ್ಟು ದುಃಖಂಬಡದಿರ್" || ೩೯ ||

ವ|| ಎಂ[4]ದೊಡಾ ಪಾರ್ವನೆಂಗುಂ— ದುಃಖಮುಂ ಕುತ್ತಮುಂ .ತಮ್ಮನೆಯ್ದ್ದ[5]ನ್ನೆವರಂ ಸೈರಿಪವರ್ ಒಳರ್ಐ[6]ದಿದಾಗಳಾರುಂ ಸೈರಿಸಲಾಱರೆ? ಎಂದೊಡರಸಂ ಮತ್ತೆಯಿಂತೆಂದಂ—

[7]ಪಿ-ಅಕ್ಕ|| ಅಱವು ದುಃಖದೊಳ್ ಸೈರಿಸ[8]ಲಾಪ್ಪುದೆ, ಶೌಚದ ಪಂವು ತಾಂ ಪರವಧುವಿಂ |
[9]ಗೆಱಗದಿಪ್ಪುದೆ, ಕಲಿತನಂ ಪೊ[10]ಣರ್ದು ಕು[11]ಸಿಯದಿಪ್ಪುದೆ, ಪಾೞ ಯೊಳ್ಪಂ||
[12]ನೆಱೆಯಲಾಪ್ಪುದೆ, ದುಃಖಮುಂ ಪೆಱರ ಪೆಂಡಿರುಂ ಪೊ[13]ಣರ್ದಲ್ಲಿ
ಕಜ್ಜ ಮು[14]ಮಿಲ್ಲದಂ |
ದಱವಿನೊಳ್ಪಂ ಶೌಚದ ಪೆಂಪು ಕಲಿತನದಳ[15]ವು ಮೆಂತೆಸೆಯ ಲಾರ್ಕುಂ ||೪೦||

ವ|| ಎಂದು ಮತ್ತಮೆಂತಾನುಂತೆಱ[16]ದಿಂ ಗುಣಂಗಳಗ್ಗಳಿಕೆಯುಮಂ, ಅಧ್ರುವಮಪ್ಪ ಮನುಷ್ಯಭವ[17]ದೇೞದಿಕೆಯುಮನರಸಂ ಪೇೞುತ್ತುಮಿರೆ ಪಾರ್ವನೆಂಗುಂ— "ದುಃಖದೊಳ್ ಸೈರಿಸುವುದೆಂ[18]ದು ನಿಮ್ಮ ಪೇೞ್ದ ಧರ್ಮಶ್ರವಣಮೆನಗೆಯೊ [19]ನಿಮಗಮುಕ್ಕುಮೇ? ಪೇೞ" ಪೆಂದೊಡರಸ "ನೆನಗೆ ಮು[20]ನ್ನ" ಮೆಂದೊಡಂತಪ್ಪೊಡೆಂದು ನಿನ್ನಱುವತ್ತುಸಾಸಿರ್ವರ್ ಮ[21]ಕ್ಕಳಿಲ್ಲಮೊರ್ವೊದಲೆ 'ಸತ್ತರೆನೆ, ಸಂಸಾರ[22]ದಂದಮುಂತಾಗಲಕ್ಕುಮದೇಂ ಚೋದ್ಯ'ಮೆಂದು ಮತ್ತಮನಿತ್ಯತೆಯಂ ಪೇೞು[23]ತ್ತುಮಿರ್ಪನ್ನೆಗಂ— ಇತ್ತ ಭಗೀರ[24]ಥಂ ಗಂಗೆಯ ನೀರಂ ಕೈಲಾಸಪರ್ವತಕ್ಕೆ ಬರೆ[25]ತಿರ್ದಿ ಪರಿಯಿಸಿ ತಂದಲ್ಲಿ ತಮ್ಮಯ್ಯಂ[26]ದಿರಂ ಕಾಣದೆ ಸತ್ತ ಪ್ರಪಂಚ[27]ಮಂ ಕೇಳ್ದಱದು ದುಃಖೋದ್ರೇಕದಿಂ ಮುಗುೞ್ದು ಬಂದು ಪೊೞಲನೆಯ್ದಿ ವಾಹನದಿನಿೞದು ಮುಸುಕಿಟ್ಟು ಕಣ್ಣನೀರ್ ನೆಗೆಯೆ ಶೋಕರಸಮೊಗೆಯೆ ಪಾಲ್ಗೊಳ್ವ ಕೆಯ್ಗೆ ಜೆ[28]ಟ್ಟಿಯ ಗಾಳಿ ಬರ್ಪಂತಾನುಂ, ತಾವರೆಗೊಳಕ್ಕೆ ಮಂಜು ಬರ್ಪಂತಾನುಂ, ಕಣ್ಗೆ ಪೊಗೆ ಬರ್ಪಂತಾನುಂ ತ[29]ಳಿರ್ತಮರಕ್ಕೆ ಕಾೞ್ಕಿರ್ಚು ಬರ್ಪಂತಾನುಂ, ಬಂದು ಪೊೞಲಂ ಪೊಕ್ಕು ತಮ್ಮಯ್ಯಂದಿರ

(1) ಮಂದೊಡ (ಕ,ಖ) ಸಾಉಮುಂತೊ(ದೊ)ಡ (ಗ,ಜ) (2) ನಡೆಉತಿರ್ದ (ಜ) (3) ಕನಲ್ದರಿ (ಕ,ಗ,ಜ,ಟ) (4) ಎಂಬುದಾ (ಖ) (5) ದನ್ನೆಗಂ (ಕ,ಗ,ಟ) (6) ಐದಿದೊಡಾರ್ಸೈರಿಸುವರೆಂದೊಡ ರಸನಿಂತೆಂದಂ (ಕ,ಜ) ಐದಿದೊಡಾರ್ಗಂಸೈರಿಸಲ್ಬಾರದೆಂ (ಚ) (7) ಅಕ್ಕರ (ಖ) ವೃತ್ತ (ಕ,ಚ,ಗ) (8) ಪ್ಪುದೆ ಚೌಚ (ಖ) ಪ್ಪುದೆಶಉಚ (ಗ) (9) ಗಳಿಪದಿ (ಖ) (10) ಪೊಣರ್ದಲ್ಲಿ (ಕ,ಟ,ಜ) (11) ಕುಸಿಯದೆ ತಱಸಂಪು ಪಾೞ (ಖ) (12) ನೆಱ ಪಲಾಪ್ಪುದೆ (ಚ) (13) ಪೊರ್ದ (ಕ,ಜ) (14) ಮದಲ್ಲ (ಖ) ಮಿಲ್ಲವರಿ (ಜ) (15) ಉಮಿಂತೆ (ಖ) ದೊಳವು (ಗ) (16) ತೆಱದಗುಣದ (ಕ,ಜ) (17) ದೇಳ್ಗೆಯಂ (ಗ) (18) ದೆಂದೀ ಪೇೞ್ದ (ಕ,ಜ,ಟ) ದೆಂದುನೀಮುಂಪೇೞ್ದ (ಚ) ದೆಂದುನಿನ್ನೀಪೇೞ್ದ (ಗ) ನಿನ್ನಪೇೞ್ದ (ಖ) (19) ನಿಮಗೆ ಮಕ್ಕು (ಕ, ಜ) ನಿನಗೆಯೋ (ಗ) ನಿನಗೆಯುಮಕ್ಕು (ಚ) (20) ಮಕ್ಕುಮೆನೆಯಂತಪ್ಪೊಡೆ ನಿನ್ನ (ಕ, ಜ, ಟ) (21) ಮಕ್ಕಳುಮೊದನಳಿದರೆಂ (ಕ) ಮಕ್ಕಳುಮೊಡನೆ ಸತ್ತರ್ (ಗ) ಮಕ್ಕಳುಮೊಡನಳಿದ (ಚ) ಮಕ್ಕಳುಂ ಮೊದಲ (ಟ) (22) ದಂದಮಂತೆಯ (ಕ, ಟ) ದಂದಮಿಂತಕ್ಕು (ಚ) (23) ಉತ್ತಿರ್ಪನ್ನೆಗಂ (ಕ) (24) ರಥಿ (ಕ) (25) ತಿರ್ದಿತಂದಲ್ಲಿ (ಖ) (26) ಯ್ಯಂಗಳಂ (ಗ) (27) ಮನರಿದು (ಗ) (28) ಜ್ಯೇಷ್ಠಗಾಳಿ (ಖ) ಘಾಳಿ (ಗ) (29) ತಳ್ತಿರ್ದ (ಗ)

ಸಾವನಱುಪುತ್ತುಂ ಚಕ್ರವರ್ತಿಯ ಸಮಸ್ತ ಪರಿವಾರಜನಂಗಳ ನೆರವಿಯ ಮನಂಗಳೆಂಬ ಮನೆಗಳಂ ದುಃಖಮೆಂಬುರಿವ ಕೊಳ್ಳಿಯೊ[1]ಳಂ ಸುಡುತ್ತುಂ ಪುಯ್ಯಲಿಡುತ್ತುಮರಮನೆಗೆ ಬಂದು ಸಭಾಮಧ್ಯದೊಳ್ ಸಿಂಹಾ[2]ಸನಾರೂಢನಾಗಿರ್ದವಷ್ಟಂಭದಿಂ ಪಾರ್ವಂಗೆ ಧರ್ಮಶ್ರವಣಮಂ ಪೇೞುತ್ತುಮಿರ್ದ ಚಕ್ರವ[3]ರ್ತಿಯ ನೆಯ್ದೆ ವಂದು "ದೇವಾ, ಬಿನ್ನಪಂ ಅವಧಾರಿಸುವುದು. ಇಂದು ನಾಗರಾಜ[4]ನಿಂ ದೇವರ ಮಕ್ಕಳಱುವತ್ತುಸಾಸಿರ್ವರುಮೊರ್ಮೊದಲೊಳೆ ಸತ್ತರ್. ಅವರೊಡನಾನುಂ ಬೆಸಕ್ಕೆ ಬೇೞೆ[3] ಪೋಗಿ ಬರ್ದುಂಕಿದೆ'' ನೆಂದು ಪೇೞ್ದು ಮತ್ತಂ ಮೆಯ್ಯನಿಕ್ಕಿ ಶೋಕಂಗೆಯ್ಯುತ್ತಿರೆ—

ಕಂ|| ಅರಸಿಯರುಂ ಪರಿಜನಮುಂ |
ಪುರಜನಮುಂ ಬಂಧುವರ್ಗಮುಂ [5]ಕೇಳ್ದು ಕರಂ ||
[6]ಪಿರಿದುಂ ದುಃಖಂಗೆಯ್ಯು |
ತ್ತಿರೆ ಪೊೞಲೊಳಗೊಗೆದು [7]ದಂದು ಕ[8]ಲ್ಲೋಲರವಂ || ೪೧ ||

ಅಳವಲ್ಲದೊಗೆದ ದುಃಖಾ |
ನಳನಿಂದಂ ಬೆಂದು ನೊಂದು ಬಂದು ಧರಿತ್ರೀ ||
ತಳನಾಥನ ಬಳಸಿಯು ಮಿ |
[9]ರ್ದೊಳಱೆ ಸುಖಂ ಪೆೞ[10]ಱೆ ಪೋಗೆ ದುಃಖಂಗೆಯ್ವರ್ || ೪೨ ||

[11]ಹಾ ! ಸಕಳ ಚಕ್ರವರ್ತೀ |
ಭಾಸುರ[12]ಕೀರ್ತೀ ದಿನೇಶ [13]ಮೂರ್ತೀ ದಿವ್ಯಾ ||
ಭಾಸರ್ ಸಿನ್ನಾತ್ಮಜ ರಿಂ |
[14]ತೀ ಸಾವೆಯ್ದುಲ್ಕೆ ತಕ್ಕುದೇ [15]ಧರಣಿಪತೀ || ೪೩ ||

ಹಾ ! ನವನಿಧಿಗಧಿನಾಥಾ ; |
ಭಾನುನಿಭಾ ! ನಿನಗೆ ಪುಟ್ಟಿಯುಂ [16]ದುಷ್ಟಕೃತಾಂ ||
ತಾನನಮನೆಯ್ದಿದರ್ ಪೆಱ |
ತೇನೆಂ[17]ಬುದೊ ಮಾರಿ [18]ಕಣ್ಗೆ ಮಾನಸವಾೞಂ || ೪೪ ||

(1) ಯಿಂ (ಖ) (2) ಸನ ಮಸ್ತಕಸ್ಥಿತ (ಕ) (3) ರ್ತಿಗೆ ದೇವಾ ಬಿನ್ನಪಮಿಂದು (ಖ) (4) ನಿಂ ನಿನ್ನಱು ವತ್ತುಸಾಸಿರ್ವರ್ ಮಕ್ಕಳು ಮೊಡನೆ ಬೆಸಂದಪ್ಪಿದರಾನವರ ಬೆಸದಿಂಪೋಗಿ (ಗ) ಮಕ್ಕಳುಮೊಡಂ ಬೆಸಂದಪ್ಪಿದ ರಾನಿಂತು (ಟ) (5) ಪೇೞ್ದವರುಂ (ಖ) (6) ಭರದಿಂ ಶೋಕಂ (ಕ,ಜ) (7) ದಲ್ಲ (ಕ, ಜ) ದಲ್ಲಿ (ಗ, ಖ) (8) ಲ್ಲಾಳ (ಟ) ಲ್ಲೋಳ (ಖ) (9) ದೊರ್ಜಲೆ (ಜ) ದೊರ್ಳಳೆ (ಕ) ದೊರ್ಳರಿ( ಖ) (10) ರೆ (ಕ, ಜ) (11) ಶ್ಲೋಕ (ಗ) (12) ಕೀರ್ತಿನಿ (ಗ,ಜ) (13) ಮೂರ್ತಿನಿ (ಗ,ಜ) (14) ದೀ (ಕ) (15) ಮನುಜ (ಖ) (16) ಕಷ್ಟಕರಮೃತ್ಯುವಿನಾ (ಕ) ಕರಮೃತ್ಯುವಿನಾ (ಜ) (17) ಬೆನೊ (ಖ) (18) ಕಾಣ್ಕೆ (ಜ) ಕಾಣೆ (ಗ) ಕಾಯ್ಗೆಮಾನಸವಾಳಂ (ಟ)

ಕಂ|| ಹಾ ! ವಿಖ್ಯಾತ ನರೇಂದ್ರಾ ! |
ದೇವರ್ ಮೆಯ್ಗಾವು ನಿನಗೆ [1]ಪುಟ್ಟಿದರಂ ನೀಂ ||
ಕಾವುದು ತಕ್ಕುದವಂದಿರ್ |
ಸಾವುದು[2]ಮಾಮಿಂತು ನೋವು[3]ದುಂ ತಕ್ಕುದೆ ಪೇಟಿ || ೪೫ ||

ವ || ಎಂದರಸನಂ ಮೂದಲಿಸುತ್ತುಮರಸಿಯರೆಲ್ಲಂ ತಂತಮ್ಮ ಮಕ್ಕಳಂದಚೆಂದಂಗಳಂ ನೆನೆನೆನೆದು—

ರಗಳೆ–ಹಾ ! ನಯನಮನೋಹರ ರೂಪರಿರಾ | ಹಾ ! ನರಪ[4]ಕುಲೋಜ್ಜ್ವಲ ದೀಪರಿರಾ ||೧||
ಹಾ ! ನಿರತಿಶಯೋತ್ತಮ ತೇಜರಿರಾ | ಹಾ ! ನಿರುಪಮಗುಣವಿಭ್ರಾಜರಿರಾ ||೨||
*ಹಾ ! ಸುಜನಮನೋಹರ ಭವ್ಯರಿರಾ | ಹಾ ! ಸಕಳಧರಾತಳ ಸೇವ್ಯರಿರಾ ||೩||
ಹಾ ! ಸಿಂಹ ಪರಾಕ್ರಮ[5]ಯುಕ್ತರಿರಾ | ಹಾ ! ಸಿಂಹಸುವಿಷ್ಟರ ಭಕ್ತರಿರಾ ||೪||
ಹಾ ! ದಿವಿಜಕುಮಾರ ವಿಳಾಸರಿರಾ | [6]ಹಾ ! ದನುಜರಿಪುಪ್ರತಿಭಾಸರಿರಾ ||೫||
ಹಾ ! ವಿಸ್ಮಯಕರ[7]ಭುಜ ಶೌರ್ಯರಿರಾ | ಹಾ ! ವಿಜಯಕರೋನ್ನತ ವೀರ್ಯರಿರಾ ||೬||
[8]ಹಾ ! ಸಮ್ಯಗ್ದರ್ಶನಯುಕ್ತರಿರಾ | ಹಾ ! ಜಿನಪದಕಮಳಸುಭಕ್ತರಿರಾ ||೭||
ಹಾ ! ಚಕ್ರಿಗೆ ಕರಮೆ [9]ವಿನೀತರಿರಾ | ಹಾ ! ಚತುರ[10]ಸ್ತ್ರೀಜನನೂತರಿರಾ ||೮||
ಹಾ ! ಸಕಲಧರೇಶನ ಪುತ್ರರಿರಾ | ಹಾ ! ಸರಸಿಜದಲನಿಭನೇತ್ರರಿರಾ ||೯||
ಹಾ ! ಸರ್ವ[11]ಧರಾವರ ಸೇವ್ಯರಿರಾ | +ಹಾಸುಜನಮನೋ[12]ಹರ ಭವ್ಯರಿರಾ ||೧೦||
ಹಾ ! ವಿಕ್ರಮ ಗರ್ವವ್ಯಾಳರಿರಾ | ಹಾ ! ವಿಸ್ತೃತ ಶಾಸ್ತ್ರ[13]ಕ್ರಿಯಾಳರಿರಾ ||೧೧||
ಹಾ ! ನೃಪಕುಲ ವಿದಿತಸುವೃತ್ತರಿರಾ | ಹಾ ! ನಗವರಸನ್ನಿಭಚಿತ್ತರಿರಾ ||೧೨||
†ಹಾ ! ಸೊಗಯಿಪ[14]ರೂಪಿನ ಕಲಿಗಳಿರಾ | ಹಾ ! [15]ಸಕಳೋರ್ವಿಗೆ ಬಲ್ಲಾಳ್ಗಳಿರಾ ||೧೩||
ಹಾ ! [16]ಸುರಸುಂದರಸನ್ನಿಭ ವಪುಗಳಿರಾ | ಹಾ ! ಸಂತತಶೌರ್ಯಹತರಿಪುಗಳಿರಾ ||೧೪||
|| ೪೬ ||

(1) ಉಟ್ಟಿರ್ದಪ (ಗ) (2) ನಾಮಿಂತು (ಗ) (3) ದೇಂಧರಣಿಪತೀ (ಗ) (4) ಕಳಾಪಯದೀಪ (ಖ) * ಈ ಪಾದ (ಖ, ಗ, ಚ,) ಪ್ರತಿಗಳಲ್ಲಿಲ್ಲ (5) ಶಕ್ತರಿ (ಖ) (6) ಇದು (ಕ, ಘ, ಚ) ಪ್ರತಿಗಳಲ್ಲಿಲ್ಲ ಹಾ ಪರಮಕುಲೋಜ್ಜ್ವಲದೀಪರಿರಾ (ಖ) (7) ದಿವಿಜಕುಲೋನ್ನತ (ಚ) (8) ಈ ಎರಡುಪಾದಗಳೂ (ಕ,ಖ,ಗ) ಗಳಲ್ಲಿಲ್ಲ. ದಿವಿಶೆಯರೋನ್ನತ (ಗ) (9) ವಿನೂತ (ಕ,ಜ) (10) ಹೃಜ್ಜನರಿರಾ (ಖ) (11) ಸಕಳಧರಾತಳ (ಗ) (12) ಗತ (ಖ) +ಇದು (ಕ,ಗ) ಪ್ರತಿಗಳಲ್ಲಿಲ್ಲ (13) ವಿಳಾಸರಿರಾ (ಖ) ಕಳಾಪರಿರಾ (ಟ) (14) ಪಕಲಿಗಳಿರಾ ಇದಾದಮೇಲೆ (ಗ) ದಲ್ಲಿ ಸಮ್ಯಗ್ದರ್ಶ ಎಂಬ ಪಾದ ಇದೆ (15) ಸಕಳಾವನಿನೆಗಟ್ಟ (ಕ,ಖ) (16) ಸುರನಿಭ (ಕ)

† ಈ ನಾಲ್ಕು ಪಾದಗಳೂ ಒಂದು ಕಂದವಾಗಿದೆ.

ಹಾ ! ಸೊಗಯಿಪಕಲಿಗಳಿರಾ |
ಹಾ ! ಸಕಳಾವನಿಗೆ ನೆಗಟ್ಟ ಬಲ್ಲಾಳ್ಗಳಿರಾ ||
ಹಾ ! ಸುರನಿಭ ವಪುಗಳಿರಾ |
ಹಾ ! ಸಂತತ ಶೌರ್ಯ[1]ಪ್ರತಾಪ ಹತರಿಪುಗಳಿರಾ || ೪೬ ||
(ಕ, ಗ, ಖ, ಜ)

(1) ಸಮಧಿಹತ (ಖ)

ವ|| ಎಂದಿಂತು ವಿಪ್ರಳಾಪಂ[1]ಗೆಯ್ವರುಂ, ಮೂರ್ಛೆವೋದರುಂ, [2]ಸಾಪಂ ಬೀೞ್ವರುಂ, [3]ದೆಸೆಯಂ ನೋೞ್ಪರುಂ, ವಿಕಳರಾದವರುಂ, ಪುಯ್ಯಲಿಡುವರುಂ, ಬಾಯಂ ಬಿಡುವರುಂ,[4]ದುಃಖಂ ಬಡುವರುಂ, ತಮ್ಮಂ ತಾವೆ ಪೊಯ್ಪುಟ್ವರುಂ, ಬಿದಿಯಂ ಬಯ್ವರುಂ, ಬೞಲ್ದು ಬೀೞ್ವರುಂ, [5]ಬಿೞ್ದು ಪೊರಳ್ವರುಂ,[6] ಚಕ್ರಿಯ ಕಾಲಮೇಲೆ [7]ಕವಿದೞ್ವರುಂ, ಚಕ್ರಿಯ ಮುಖಮಂ ನೋೞ್ಪರು ಮಾಗಿ ಸುಜಾತಿಯಪ್ಪ ಮಾಣಿಕ್ಯಮೆಂತುಂ ಕಿರ್ಚಿ[8]ನೊಳಗಿರ್ದುಂ ಬೆಳಗುವಂತೆ ತನ್ನ ಬಳಸಿಯುಂ ಬಂದು ದುಃಖಂಗೆಯ್ವರ ನಡುವಿರ್ದುಂ ಧರ್ಮ[9]ಕಥಾಶ್ರವಣದಿಂ ನಿಶ್ಚಳ[10]ನಾಗಿರ್ದರಸನಂ ಕಂಡಿದೇ ನೀಯರಸಂ ಮರವಾನಿಸನೊ ? ಮೇಣ್[11]ಲೆಪ್ಪದರಸನೊ ? ಪೇೞಿಂ ಇಂತಪ್ಪ ಮಹಾ ದುಃಖದೊ[12]ಳಮಿಂತುಸಿರದಿರ್ಪಿರವಿದೇನೆಂದು ಸಭೆಯೊಳಿರ್ಪವರ್[13]ನುಡಿಯುತ್ತುಮಿರೆ ಚಿತ್ರವಿದ ನೆಂಬ ಪೆರ್ಗಡೆ[14]ಕೇಳ್ದರಸನ ಮನದ ದುಃಖದಳಪಿಯಂ ನಿಮಗೆ[15]ತೋಱದಪೆಂ ನೋಡಿಮೆಂದು ಸಿದ್ಧಾರ್ಥಮೆಂಬ ಬಿಳಿಯ[16]ಸಾಸಿವೆಗಳಂ ನೀರೊಳ್ ನಾಂದಿ ತರಿಸಿ ಯರಸನ ಮೆಯ್ಯ[17]ಮೇಗ ಣಿಂದಿೞಿಯೆ ಸುರಿಯೆ ಕಾಯ್ದೋಡಿನೊಳಿಕ್ಕಿ[18]ದೆಳ್ಳಿನಂತೆ ಛಿಳಿಛಿಳಿಲೆಂದರಲ್ದು ಸಿಡಿದು ಪೊ(ಪೋ)ಗೆ ಕಂಡಿರೆ ದುಃಖಾಗ್ನಿ[19]ಯೊಳಿರ್ದಮೆಯ್ಯ[20]ಬೆಂಕೆ ಮತ್ತಮರಸಿಯರ್ಗೋರೋರ್ವ ಮಕ್ಕಳ ದುಃಖ ಮರಸಂಗೆ ಅಱುವತ್ತುಸಾಸಿರ್ವರ್ ಮಕ್ಕಳ ದುಃಖ[21]ಮೊರ್ವರ್ಗಂಗೆ ಸಾಮಾನ್ಯಮಲ್ಲದುಮನಱುವಿನ ಪೆಂಪಿನೊಳ್ ಸೈರಿಸಿರ್ಪನೆಂದೊಡವರೆಲ್ಲಂ ಚೋದ್ಯಂಬಟ್ಟು ಕದಪಿನೊಳ್ ಕೆಯ್ಯನಿಟ್ಟು ಬೆಱ [22]ಗಾಗಿರ್ಪಿನಮಾ ಪಾರ್ವಂ—

ಕಂ|| ಇನ್ನಿರಲಾಗದು ತೋಱುವೆ ।
ನೆನ್ನಂದಮನೆಂದು ಕಟಕ [23]ಕಟಿಸೂತ್ರಾದ್ಯ ||
ತ್ಯನ್ನತದಿವ್ಯಾಭರಣಯು ।
ತೋನ್ನತ ಸುರರೂಪನಾಗಿ ಸೊಗಯಿಸಿ ನಿಂದಂ || ೪೭ ||

ವ|| [24]ನಿಂದು, "ಚಕ್ರಿ ಕೇಳಾ, ನಿನ್ನ ಮುನ್ನಿನ ಬಲವರ್ಧನನೆಂಬ ಬಾಣಸಿಗನೆ[25]ನಾ ನೆನ್ನಂತ್ಯಕಾಲದೊಳ್ ನೀಂ [26]ಪೇೞ್ದ ಪಂಚನಮಸ್ಕಾರಮುಂ ಕೇಳ್ದು ಕೆಯ್ಕೊಂಡ ಸಮಾಧಿಯ

---

(1) ಗೆಯ್ಯುತ್ತುಂ(ಕ,ಜ,ಟ) (2–3) (ಖ) (4) (ಗ) (5) (ಕ,ಟ,ಜ) (6) ಅರಸನ (ಗ,ಚ) (7) ಕವಿ ದಿರ್ದರುಂ (ಗ) ಕವಿದುಬೀೞ್ವರುಂ (ಕ) (ಜ) (8) ದೊಳಗಾಗಿಯುಂ (ಕ) ಗೊಳಾಗಿಯುಂ (ಗ) ನೊಳಗಾಗಿ(ಚ) (9) ಕಥನದಿಂ (ಚ) (10) ನಾಗಿರ್ದೊಡಿದೇನರಸಂ (ಕ) ಡವೇ ನರಸಂಮರವಾಯ್ಕೋಡಿ (ಟ) (11) (ಖ) (12) ಳಿಂತಪ್ಪರೆಂಬುದೇನೆಂ(ಕ) ಳಿಂತುಸೈರಿಸಿರ್ದಪನೇ(ಗ) ಳಿಂತಪ್ಪುದೇ (ಶ) (13) ನುಡಿಯುಮಿರೆಪೆರ್ಗಡೆ(ಖ) (14) ಕೇಳ್ದುಮರಸನದುಃಖದ (ಗ,ಚ,ಜ) (15) ತೋಱುವಪ್ಪೆಂ (ಕ) (16) ಸಾಸವಿಗಳಂ ನಾಂದಿ ತಂ(ಕ,ಗ,ಜ) ಸಾಸಿವೆಗಳಂ ತರಿಸಿಯರಸನ (ಖ) (17) ಮೇಲಿೞಿಯೆಸುರಿ (ಕ,ಗ,ಚ) (18) ದೆಳ್ಳಿನಂತೆ ಸಿಡಿಲ್ದು (ಕ, ಜ, ಟ) ನಂತೆ ಛಳಿಚ್ಛಳಿಲೆಂದು (ಚ) (19) ಯೊಳಾದ (ಕ,ಟ) (20) ಬೆಂಕೆಯನರಸಿಯರ್ಗೋರೋರ್ವ (ಚ,ಜ) ನರ ಸಿಯರೊಳೊರ್ವರ್ಗೊರ್ವಮಕ್ಕಳ ದುಃಖ (ಗ) (21) ದುಃಖಕ್ಕಂಸಾಮಾನ್ಯಮಲ್ತುಮಱುವಿನ (ಕ) ದುಃಖಸಾ ಮಾನ್ಯಮಲ್ಲಱುವಿನ (ಗ) ದುಃಖಂಸಾಮಾನ್ಯಮೆ ಮತ್ತಱುವಿನ (ಚ) (22) ಗಾಗಿರ್ದೊಡಾ ಪಾರ್ವಂ (ಗ) ಗಾಗಿ ರ್ದಾಗಳಾ ಪಾರ್ವಂ (ಗ) ಗಾಗಿರ್ದಾಗಳು ಪಾರ್ವಂ (ಚ)·ಗಾಗಿರ್ದರ್ ಅರಸಂಗೆ ಶೋಕಾನಲನಳುರ್ದುಕೊಳೆ ನಿರ್ವೇಗತ್ರಯುಪರಾಯಣನಾಗಿ || ತನುಬಳಲುಂ ವಿಳಾಸದಳವುಂ (ಜ) (23) ಕಟಿಸೂತ್ರಗಣಾದ್ಯುನ್ನತ (ಚ) (24) ನಿಂದೆಲೆ ಚಕ್ರಿಕೇಳ್ ನಿನ್ನ ಬಲವರ್ಧ (ಕ) (25) ನಂದೆನ್ನಂತ್ಯ (ಗ) (26) ನೀಂ ಪಂಚನಮಸ್ಕಾರಮಂ ಪೇೞ್ದು ಸಮಾಧಿಯಿಂ ಕೂಡಿದೆಯುಪ್ಪುದಱಿಂ ದೇವಲೋಕದೊಳೆ ಪುಟ್ಟಿ ನಿನ್ನೀದುಃಖಮನಱುದಾರಿಸುವ (ಕ) ಪೇಳ್ದುಕೆಯ್ಕೊಂಡ ಸಮಾಧಿಯ ಫಲ.

ಫಲದಿಂದೆ ಕೂಡಿದೆಯಪ್ಪುದಱಿಂದೆ ಆನುಮಾ ಸಮಾಧಿಯ ಫಲದಿಂದೆ ದೇವಲೋಕದೊಳ್ ಸುಪ್ರಭನೆಂಬ ದೇವನಾಗಿ ಪುಟ್ಟಿರ್ದು ನಿನಗಿಂತಪ್ಪ ದುಃಖಮಾದುದನವಧಿಯಿನಱಿದದನಾಱು ಸುವೆನೆಂದು ಬಂದೆಂ. ಇನ್ನು ಪಾಯಮುಮಂ, ಸಂಸಾರದಪಾಯಮುಮಂ, ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ನಣ್ಪೆಯುಮಂ ಕಂಡೆನಿನ್ನು ಪಲವುಮಾತಿನೊಳೇಂ ? ಇವರೆಲ್ಲರ ಮನದ ದುಃಖಮನಾಱುಸುವುದು. ಬಱಿಯಂ ಕರ್ಮದ ಪೊಟ್ಟಂ ಪಾಱುಸುವುದು, ಎಂದಾ ದೇವಂ ದೇವಲೋಕಕ್ಕೆ [1]ಪೋದಂ. ಆಗಳರಸ[2]ನರಸಿಯರುಮಂ ಬಂಧುವರ್ಗಮುಮಂ ಕರೆಸಿ " ಕೇಳಿಂ " ಎಂದಿತೆಂದಂ—

ಚಂ|| ತನುಬಳಮುಂ ವಿಳಾಸ[3]ದಳವುಂ ಧನಸಂಕುಳಮುಂ ವಿನೂತಯೌ |
ವನಭರಮುಂ ಕಳತ್ರದಿರವುಂ ಸುತರಾ[4]ದರಮುಂ ಸ[5]ರಾಗಿಯ ||
ಪ್ಪನ ತಪಮುಂ ಲತಾಂಗಿಯೊಲವುಂ ಸಿರಿಯೊಳ್ನಲವುಂ ನಿತಾಂತ[6]ಮಿಂ |
ತಿನಿತುಮನಿತ್ಯಮಪ್ಪಿವಱಿಗಲ್ಕೆಗೆ ದುಃಖಿಗಳಾಗಲಕ್ಕುಮೇ || ೪೮ ||

ವ|| ಕಿಡುವುದಱ ಕೇಡಿಂಗಱಲ್ದು ಕಿಡದುದಂ ಕಿಡಿಸುವು[7]ದಾವಕಜ್ಜಂ ||

ಕಂ|| [8]ಕಱಿಯೆ ಬಸಮಱಿಯೆ [9]ಬೆಳರು |
ತ್ತಱಲುಂ ಬಿಡದಱಲುಮಾಗದೇ [10]ಕಱಿವಿರ್ ನೀ ||
[11]ಮಱಿಯಲ್ ಬೇಗಂ ದುರ್ಗತಿ |
ಗಿಱಿಯಲ್ ಸಂಸಾರದೊಳಗೆ ಸುಱಿಯಲ್ [12]ಬಗೆವಿರ್ || ೪೯ ||

ಪಾಠಾಂತರ ( ಕ, ಗ, ಜ, ಘ )

ಭಗಳಿದೇಶದಧಿಪತಿ ಸಿಂಹವಿಕ್ರಮನ ಮಗಳ್ ವಿದರ್ಭೆಗಂ ಪುಟ್ಟಿದ ಭಗೀರಥಂಗೆ ರಾಜ್ಯಮಂ ಕೊಟ್ಟು ದೃಢಧರ್ಮಕೇವಲಿಗಳ ಪಕ್ಕದೆ ಸಂಯಮಧರ[13]ನಾದಂ. ಆಗಳಾ ಬ್ರಾಹ್ಮಣಂ ತನ್ನ ವಿಕ್ರಿಯೆಯಿಂ ಮಱಿದಿರ್ದ ಕುಮಾರನಲ್ಲಿಗೆ ವಂದು ಚಕ್ರಧರದೀಕ್ಷಾ ಗ್ರಹಣಮನಱಿಪಲೊಡ ನವಱಿಂ ಸಂವೇಗಪರರಾಗಿ ದೃಢಧರ್ಮಕೇವಲಿಗಳ ಪಕ್ಕದೆ ಸಂಯಮಮಂ ಕೆಯ್ಕೊಂಡರ್. ಆ ವ್ಯತಿಕರಮಂ ಭಗೀರಥಂ ಕೇಳ್ದವರಲ್ಲಿಗೆ ವಂದು ಬಂದಿಸಿ ಧರ್ಮಕಥಾಶ್ರವಣಾನನ್ತರಂ ಶ್ರಾವಕ ವ್ರತಂಗಳಂ ಕೆಯ್ಕೊಂಡಂ. ಮಣಿಕೇತುವುಂ ತನ್ನ ಗೆಯ್ದು ಪ್ರಪಂಚಮಂ ಪ್ರಕಟಂಮಾಡಿ ನಿಶ್ಶಲ್ಯಂ ಗೆಯ್ಯೆ ಸಗರಮುನಿವೆರಸನಿಬರುಂ ಚರಮದೇಹಧಾರಿಗಳುಂ ಆತನ ಗುಣಂಗಳಂ ಮೆಚ್ಚಿ ಪ್ರಶಂಸೆ ಗೆಯ್ದಾ ಸಗರಮುನಿವೆರಸು ಸಮ್ಮೇದಪರ್ವತದೊಳನಿಬರುಂ ಕ್ರಮದೆ ಮುಕ್ತಿಗೆ ಸಂದುದಂ ಭಗೀರಥಂ ಕೇಳ್ದು ನಿರ್ವೇಗಪರಂ ವರದತ್ತಂಗೆ ರಾಜ್ಯಮಂ ಕೊಟ್ಟು ಕೈಲಾಸದೊಳ್ ಶಿವಗುಪ್ತರ ಪಕ್ಕದೆ

(1) ಪೋದಾಗಳ್ (ಕ) (2) ನರಸಿಯರಂ ಬಂದು ಬಂಧುಗಳಂ ಬರಿಸಿ ಕೇಳಿಮಿಂ (ಕ) ಬಂಧುಗಳುಮಂ (ಜ) (3) ದೊದವುಂ (ಖ) (4) ಧನಮುಂ (ಖ) (5) ರೋಗಮುಪ್ಪ(ಖ) ರೋಗಮುಪ್ಪನಛಲಮುಂ(ಜ) ಸರಾಗಿಯಪ್ಪನಸಲವುಂ (ಕ,ಜ) (6) ಮೆಂದಿನಿ (ಕ) (7) ದಾವುದಕ್ಕಜಿಂ? (8) ಕಳೆಯೆ (ಕ) (9) ವೀಗುತ್ತ (ಖ) ಬೆಗಳುತ್ತ (ಜ) (10) ಕಳುವಿ (ಕ) (11) ಉಱಿಯಲ್ಕಂ ದುರ್ಗತಿಗಳ್ಗಿಱಿಯಲ್ದುಃಖಾಗ್ನಿಯೊಳಗೆ (ಖ) (12) ಬಗೆವರ್ (ಗ) (13) ನಾದೊಂ (ಗ,ಜ)

ವ|| ಎಂದು ಮತ್ತ'ಮಿಾಗಳೆನಗೆ ಪುಟ್ಟಿದ ಮಕ್ಕಳೆಲ್ಲಮೊಡನಟಿಾದ ಕರ್ಮದ[1]ಳವುಮಂ, ಎನ್ನ ಬಾಣಸಿಗನಿಂದಾದ ಧರ್ಮದಳವುಮನಿಲ್ಲಿಯೆಕಂಡಿರಿ,ಅದಱಿಂ ಧರ್ಮಮನೆ ಬಗೆದು ನೆಗಳಿಂ' ಎಂದ[2]ರಸನರಸಿಯರಂ ಬಂಧುವರ್ಗಮಂ ಸಂತೈಸಿ ಲೌಕಿಕಕ್ರಿ[3]ಯೆಯಂ ನೆಗಲ್ದು ಬಟಿಯಿಂ ಜಿನಮಹಾಮಹಿಮೆಗಳಂ ಮಾಡಿಸುತ್ತನುಕ್ರಮದಿಂ [4]ತಱಿಸಂದು ಸಗರಚಕ್ರವರ್ತಿಯ[5]ಱುವತ್ತು ಸಾಸಿರ್ವರ್ ಮಕ್ಕಳ್ವೆರಸು ವೀರಸ್ವಾಮಿಗಳೆಂಬನಗಾರ ಕೇವಲಿಗಳ ಪಕ್ಕದೆ ತಪಮಂ ಕೈಕೊಂಡು ತಪಶ್ಶ್ರೀಯೊ[6]ಳೊಲ್ದು ಕ್ರೀಡಿಸುತ್ತುಂ ಪರೀಷಹಂಗಳನೋಡಿಸುತ್ತುಂ, ಕರ್ಮ[7]ವೈರಿಗಳ ನೋಡಿಸುತ್ತು[8]ಮಿರ್ದು ಕಡೆಯೊಳ್ ಶುದ್ಧಧ್ಯಾನದಿಂ ಮುಕ್ತಿಶ್ರೀಯಂ ಪಡೆ[9]ದನರಸನರಸಿಯರುಂ [10]ಬಂಧುಜನಂಗಳುಂ ಪರಿಜನಮುಂ ಚಕ್ರವರ್ತಿಯಾದುದನಾಗಿ ಸಮಾಧಿಮರಣದಿಂ ಮುಡಿಪಿ ದೇವಗತಿಯಂ ಪಡೆದರ್. [11]ಅಂತಪ್ಪ ಚಕ್ರವರ್ತಿಯ [12]ಮಕ್ಕಳುಮಟಿಾಡಿದರೆಂಬ ಕತೆಯಂ ಜೀ[13]ವಾ ನೀಂ ಬಗೆವುದು—

ಕಂ|| ತಡೆಯಲೆಡೆಯಿಲ್ಲ ಬೆ (ಜೆ) ಚ್ಚರ |
ಮೊಡರ್ಚು ನಿನಗಾರ್ಮಮಪ್ಪ ಧರ್ಮಮನಟಿಾಪಿಂ ||
ತೊಡಱಿದಿರು ಮೋಹ[14]ಪಾಶದ |
[15]ತೊಡಱಿಂ ಬಟಿಯಂ ತೊ(ಪೊ)ಡರ್ಪುಗಿಡಿಸದೊಡೇವೈ || ೫೦ ||

---

ದೀಕ್ಷೆಯಂ ಕೈಕೊಂಡು ದ್ವಾದಶವಿಧತಪದೊಳುತ್ಕೃಷ್ಟಂ ನೆಗಟುತ್ತುಂ ಗಂಗೆಯ ತಡಿಯೊಳ್ ಚತುರ್ಮುಖಪ್ರತಿಮಾಯೋಗದೊಳ್ ಕೇವಲಜ್ಞಾನೋತ್ಪತ್ತಿಯಾದೊಡಿಂದ್ರಾದಿ ದೇವನಿಕಾಯಂ ದುಗ್ಧಾಬ್ಧಿ ಜಲದಿಂ ಪಾದಾಭಿಷೇಕಂಗೆಯ್ಯೆ ತಜ್ಜಲಪ್ರವಾಹದಿಂ ಗಂಗೆ ಪವಿತ್ರಮಾದುದಂದಿತ್ತ ಗಂಗೆಯಂ ಭಗೀರಥಂ ತಂದನೆಂದು ಲೋಕಪ್ರಸಿದ್ಧಿಯಾಗೆ ಭಾಗೀರಥಿಯೆಂದು ಕೊಂಡಾಡಿದರ್—

ಎಲೆ ಜೀವನೆ ಪಿರಿದಪ್ಪ ಚಕ್ರವರ್ತಿಯ ಪರಮೈಶ್ವರ್ಯಮುಮಧ್ರುವಮೆಂದು ತಿಳಿಸಲೊಡನೆ ಕರಂಸಂತಸಂಬಟ್ಟಂತಪ್ಪ ಸರ್ವಜನರಿಂ ವಂದ್ಯಮಪ್ಪುತ್ಕೃಷ್ಟ ನರೇಂದ್ರಪದವಿಯಂ ಬಿಸುಟ್ಟು ತಪೋऽಭಿಮುಖರಾಗಿ ನಿವೃತ್ತಿಯನೆಯ್ದಿದರೆಂದೊಡೆ ನೀನೀಕುತ್ಸಿತಮಪ್ಪ ಶರೀರದೊಳಂ ಕೂಡಿ ಕುತ್ಸಿತಮಪ್ಪಾಹಾರವಸ್ತ್ರನಿಮಿತ್ತಮಾಗೆ ದುರ್ಮತಿ ದುಷ್ಟದುರ್ಮುಖ ಕೃತಘ್ನದುರ್ಗತಿಯುತರಾ [ಗೊ[16]ಡೆದೊಡೆಗೆಮುಂಗಳಮೆಂ] ಬಂತೆ ಪ್ರಭುಗಳೆನಿಸಿರ್ಪಧಮಾಧಮರಂ ಪೊಡೆವಟ್ಟು ಬಾಟಿವೆ [ನೆಂಬಾಸೆಯಂ ಮಾಣೆದು ಪೇಟಿ್ದೊಡಮುದ] ನೊಲ್ಲದೆ! ವಿಷಯಾಭಿಮುಖನಾಗಿರ್ಪೈ. ಅದನು ಟಿದು ನಿತ್ಯನಿರ್ಮಳನಿರುಪಮ ನಿಜಾನಂದೈಕನಿವಾಸ[ನಿಶ್ಶ್ರೇಯಸೋ]ಪಾಯದೊಳ್ ನೆಗಲ್ವುದು—

(1) ಫಲಮುಮಂ (ಗ) (2) ದರಸಂ ಸಂತೈಸಿ (ಗ) (3) ಕ್ರಿಯೆಗೆ ಮಿಂದು ಬಂದು ಬಟಿಯಂ ಜಿನ (ಗ) (4) ತನುಸಂದು (ಗ) (5) ಯೆಚ್ಛಾಸಿರ್ವರ್ಮಕ್ಕ (ಕ,ಟ) (6) ಯೊಳ್ಕೂಡಿ (ಕ) ಯೊಳ್ಕ್ರೀಡಿ (ಜ) (7) ವೈರಿಯನೋ (ಕ) ವೈರಿಗಳಂಜಯಿಸು (8) ಮಿಂತುಮುಕ್ತಿಶ್ರೀಯಂ (ಗ) (9) ದನರಸಿಯರುಂ (ಕ) (10) ಬಂಧುಗಳುಂ ಸಕಳವ್ರತಿಗಳಾಗಿ ದೇವಗತಿಯಂ (ಕ) ಬಂಧುಗಳು (ಜ) ಪರಿಜನಮುಂ ಮುಕ್ತಿಶ್ರೀಯಂ ಪಡೆ (ಜ) (11) ಇಂತಪ್ಪ (ಗ) (12) ಮಕ್ಕಳೆಲ್ಲ ಮೊಡನಱಿದ (ಕ) (13) ಬಗೆವುದು ಜೀವಾ (ಕ) ಯಂ ಜೀವಾ ನೀನವಧಾರಿಸುವುದು (ಜ) ಕಥೆಯಂ ಬಗೆವುದು ನಿನಗೆ (ಖ) (14) ಪಾಶವ (ಕ,ಜ) ಪಾಸವ (ಜ) (15) ತೊಡರ್ಪುಂ ಬಟಿಯಂ ಪೊಡರ್ಪು ನಿಡಿಸಿದೊಡೇವೈ (ಕ,ಜ) ತೊಡರ್ಪಿನೊಳುತೊಡ (ಖ) (16) [ ] ಭಾಗವು ಕಪ್ರತಿಯಲ್ಲಿ ತ್ರುಟಿತವಾಗಿದೆ—ದೆವೊಡಿಗೆ (ಜ)

ವ|| ಫಲಮನಾಸೆ[1] ವಟ್ಟೊಕ್ಕಲಿಗಂ ಪದನಱಿದುಬಿತ್ತಿ ಬಿತ್ತದೊಡಂ, ಗೆಲ್ಲಮನಾಸೆವಟ್ಟರಸಂ ಬಲಂಬಡೆದು ಪಗೆಯಂ ಮುತ್ತದೊಡಂ, ಸುಗತಿ[2] ಗಾಸೆವಟ್ಟನಱಿವುವಡೆದು ಧರ್ಮಮಂ ಪತ್ತದೊಡ [3] ಮಾತನ ಫಲಮುಂ, ಈತನ ಪಗೆಯುಂ, ಆತನ [4] ಕರ್ಮಬಂಧನಮುಂ ಬಱಿಕ್ಕೆಂತುಂ ಕಿಡಿಸಲ್ [5] ಬಾರದು ಎಂಬುದನೆ ಜೀವಾ! ನೀಂ ಬಗೆವುದು—[6] ಮತ್ತಂ.

ಉ|| [7] ಮೋಹಮನೆಯ್ದೆ ನೀಂ ಬಿಡುವುದರ್ಥಚಯಂಗಳೊಳಾಸೆವಟ್ಟತಿ |
ಸ್ನೇಹಿತನಾಗದಿರ್ ಕಿಡಿಸ[8] ಲಿರ್ಪ ಕಳತ್ರದೊಳೊಳ್ಪಿತಲ್ಲದೀ ||
ದೇಹ[9] ದೊಳಪ್ಪುಗೆಯ್ದು [10] ನೆಗೞಲ್ ಗತಿ ದುರ್ಮತೋಕ್ತಿಯ |
ಪ್ಪೈಹಿಕ ಸೌಖ್ಯಮಂ ಬಿಸುಡು ಮಾಣ್ದಿರಲಾ[11] ಗದೆ ಭವ್ಯಜೀವನೇ || ೫೧ ||*

— ಗ ದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋ[12] ದಿತ ವಿದಿತ

ಬಂಧುವರ್ಮ ನಿರ್ಮಿತಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

[13] ಅಧ್ರುವಾನುಪ್ರೇಕ್ಷಾ ನಿರೂಪಣಂ

ಸಗರಚಕ್ರವರ್ತಿಯ ಕಥಾವರ್ಣನಂ—

ಪ್ರ ಥ ಮಾ ಧಿ ಕಾ ರ ಂ.

---

(1) ವಡುವೊಕ್ಕಲಿಗಂಪದನಱಿದು(ಕ,ಜ) ವೊಕ್ಕಲುಪದಂಬಡೆದು(ಗ) ವೊಕ್ಕಲಮುಗಂ ಪದಂಬಡೆದು(ಚ) (2) ವಾಸೆವಡುವಾತನರಿವು (ಕ) ವಡುವನರಿವು (ಚ) (3) ಮಾತನೆಡಱುಂ, ಮಿಾತನಪಗೆಯು ಮಿಾತನಕರ್ಮಮುಂ (ಚ,ಜ) (4) ಕರ್ಮಮುಂ (ಕ) (5) ಬಾರದೆಂಬುದಂ (ಕ) (6) ಇಲ್ಲ (ಖ) (7) ಮೋಹಮನುಂಟುಮಾಡಿ ಕಿಡುವರ್ಥ (ಚ) ಡಿತಳಿವರ್ಥಚಯಂಗೊಳಲಾಸೆ (ಘ) ಡಿಯಯಲಳಿವರ್ಥ (ಟ) (8) ಲಾರ್ಪ (ಟ) (9) ದೊಳಪ್ಪುಗೆಯ್ದು ಸನ್ನಾಹಮನೆಯ್ದೆ ಮಾಡಿ ನೆಗಳ್ಗೊಳತಿಗಲ್ಲದ ದುರ್ಮತೋತ್ತಮ (ಟ) (10) ನಡೆಯಲ್ ಗತಿದುರ್ಮತೋಕ್ತಮಪ್ಪೈಹಿಕ ಕಾರ್ಯಮಂ ಬಿಸುಟು (ಕ) ನಡೆಯಿಲ್ಲತಿ ಮರ್ಗತಿ (ಜ) (11) ಗದು (ಕ,ಟ,ಗ) (12) ದಿತಬಂಧು (ಕ) (13) ಅಧ್ರುವಾಭಿಧಾನಂ.ಪ್ರಥಮಾಧಿ (ಕ, ಗ, ಜ, ಟ) ಭಿಧಾನಂವಂದನೆಆಶ್ವಾಸಸಂಪೂರ್ಣ (ಘ)

* ಇಂದ್ರಾದಿಭಿಃ ಕ್ಷೀರಸಮುದ್ರತೋಯೈಃ—ಸಂಸ್ನಾಪಿತೋ ಮೇರುಗಿರೌ ಜಿನೇಂದ್ರಃ ||
ಯಃಕಾಮಜೇತಾ ಜನಿ (ಜಿನ) ಸೌಖ್ಯಕಾರೀ || ಸಂಶುದ್ಧಭಾವಾದಜಿತಂ ನಮಾಮಿ ||

ಕೊನೆಯಲ್ಲಿ ಈ ಸಂಸ್ಕೃತಶ್ಲೋಕವು (ಕ,ಗ) ಪ್ರತಿಗಳಲ್ಲಿವೆ—

|| ದ್ವಿತೀಯಾಧಿಕಾರಂ ||

## — ಅ ಶ ರ ಣಾ ನು ಪ್ರೇ ಕ್ಷೆ —

ಕಂ|| ಶ್ರಿಯುಮಘ[1] ವಶದೆ [2] ಕಟ್ಟಿ |
ದಾರ್ಯುಂ ಕಿಡು[3] ವಲ್ಲಿ ನಿ[4] ನಗೆ ಶರಣಿ[5] ಲ್ಲಾರುಂ ||
ಬಾಯಂ ಬಿಟ್ಟು ವಿಮೋಹದಿ |
ನಾಯಾಸಂಬಟ್ಟು ಕೆಟ್ಟು ನೆ[6] ಗಲಿಲ್ ಜೀವಾ || ೧ ||*

ವ || ಈಯದುದನಱಿದು ಬೇಡುವೊಡಂ ಕಾಯ[7] ದುದನಱಿದು ಮಱುವುಗುವೊಡಂ ಅಱಿಪಕ್ಕುಂ, ಮುಂದೆ ಬಗೆದುದಕ್ಕುಮೆ ?

* ಈ ಸಂಸ್ಕೃತ ಶ್ಲೋಕ ಮತ್ತು ಟೀಕೆಗಳು ( ಜಿನಸ್ತುತಿ–ಅಧಿಕಾರೋಕ್ತವಿಷಯಸೂಚಿಗಳುಳ್ಳುವು ) ( ಗ. ಟೀಕೆ ಮಾತ್ರ ) ಒಂದೆರಡುಪ್ರತಿಗಳಲ್ಲಿ ಮಾತ್ರ ಇವೆ.

ಧ್ಯಾನಪ್ರ[8] ಬಂಧ ಪ್ರಭವೇನ ಯೇನ–ನಿಹತ್ಯ ಕರ್ಮಪ್ರಕೃತೀಸ್ಸಮಸ್ತಾಃ ||
ಮುಕ್ತಿಸ್ವರೂಪಾಂ ಪದವೀಂ ಪ್ರಪೇದೇ–ತಂ ಶಂಭವಂ ನೌಮಿ ಮಹಾನುರಾಗಾತ್ ||೧||

ಮಂತ್ರಾಸ್ತಂತ್ರತತಿಸ್ತದನ್ವಿತಕೃತಿರ್ದುರ್ಗಾ ದ್ವಿಷದ್ದುರ್ಗಮಾ |
ಭೃತ್ಯಾಃ ಕಿಂ ನ ಭೃತಾಃ ಸುಹೃತ್ತತಿರಪೀತ್ಯೇತೇಷು ಸತ್ಸ್ವಪ್ಯಗುಃ ||
ಸರ್ವೇ ಪೂರ್ವಮಹೀಭೃತಃ ಕ್ಷತಿಮತಃ ಕಸ್ಯಾಪಿ ಕಾಲತ್ರಯೇ |
ತ್ರಾತಾಽತ್ರಾಸ್ತಿ ನ ನಾಶಮೀಯುಷಿ ಪುರಾ ಪುಣ್ಯಾರ್ಜಿತೇ ಚಾಯುಷಿ ||೨||

ಟೀ|| ಮಂತ್ರಾಃ-ಮಂತ್ರಗಳುಂ, ತಂತ್ರತತಿಃ–ಮದ್ದುಗಳುಂ, ತದನ್ವಿತ ಕೃತಿಃ–ಅವಂ ಬಲ್ಲ ವರ್ಗಳ ಮಾಟಮುಂ, ದ್ವಿಷದ್ದುರ್ಗಮಾಃ–ಪಗೆವರ್ ಪುಗಲು ಬಾರದ, ದುರ್ಗಾಃ-ದುರ್ಗಂಗಳುಂ, ಭೃತಾಃ–ಪೊರೆದ, ಭೃತ್ಯಾಃ-ಭಂಟರುಂ, ಸುಹೃತ್ತತಿಃ ಅಪಿ–ಬಂಧುವರ್ಗಮುಂ, ನಕಿಂ (ಕಿಂನ) ಏನಿಲ್ಲ. ಇತ್ಯೇತೇಷು–ಇಂತಿವೆಲ್ಲ. ಸತ್ಸ್ವಪಿ–ಒಳವಾಗುತ್ತಿರಲುಂ, ಪೂರ್ವಮಹೀಭೃತಃ–ಮುನ್ನಿ ನರಸುಗಳು, ಸರ್ವೇ–ಎಲ್ಲರುಂ, ಕ್ಷತಿಂ–ಕೇಡನ್ನು, ಅಗುಃ–ಎಯ್ದಿದರು. ಅತಃ–ಅದು ಕಾರಣದಿಂ, ಕಸ್ಯಾಪಿ–ಆವಂಗಂ, ಕಾಲತ್ರಯೇ–ಮೂರುಕಾಲದೊಳಂ, ಅತ್ರ–ಇಲ್ಲಿ, ತ್ರಾತಾ–ರಕ್ಷಿಸುವಸಂ, ನಾಸ್ತಿ–ಇಲ್ಲವು. ಪುರಾ–ಮುನ್ನ, ಆರ್ಜಿತೇ, ನೆರಪಿದ, ಪುಣ್ಯೇ–ಪುಣ್ಯಮುಂ, ಆಯುಷಿ ಚ ಆಯುಷ್ಯಮುಂ, ನಾಶಂ–ಕೇಡಂ, ಈಯುಷಿ–ಎಯ್ದಿದುದಾದೊಡೆ, ಜೀವಕ್ಕಾರುಮೇನುಂ ಶರಣಿಲ್ಲೆಂಬ ಅಶರಣಾನುಪ್ರೇಕ್ಷೆ .

(1) ವಸದೆ (ಘ) (2) ಕೆಟ್ಟೆ (ಘ,ಟ) (3) ವಂದು (ಕ,ಗ) (4) ನಿಮಗೆ (ಘ) (5) ಲ್ಲೆಂತುಂ (ಕ,ಜ,ಟ) ಲ್ಲೆನುತುಂ (ಗ) (6) ನೆಗಳ್ವುದೆ (ಕ, ಜ, ಟ) ನೆಗಱದೆ (ಖ) ನೆಗಱದೆ (ಚ) (7) ದುದುಮನಱಿದು (ಗ, ಚ) ಅಕ್ಕುಂಬಗೆ (ಕ) (8) ಬಂಧಂ (ಕ,ಜ,ಟ)

ಶಾ|| ಬಲ್ಲಂ ವಿದ್ಯೆಗಳೆಲ್ಲಮುಂ ಭುವನದೊಳ್ ಮಿಕ್ಕಿರ್ದನೀತಂ ಕರಂ |
ಬಲ್ಲಿತ್ತೀತನ ದುರ್ಗಮಾರ್ಗ[1]ಮರಿಯಂ ವಿಕ್ರಾಂತದಿಂ [2]ಮರ್ತ್ಯರೊಳ್ ||
ಬಲಲ್ಲೀತನೆನಲ್ಕೆ ತಕ್ಕ ಪುರುಷಂ ಮು[3]ತ್ತನ್ಯರಂ ಕಾವ [4]ಮ |
ತ್ತೆಲ್ಲಂ ಬಿಟ್ಟು ಪೊಡರ್ಪುಗೆಟ್ಟು [5]ಜವನಿಂ ಕೀಳ್ ತಾನುಮುಟ್ಕಾಡಿದಂ || ೨ ||

ವ|| ಮೊಲೆ[6]ವಾಲೆ ನಂಜಪ್ಪೊಡಂ ಕಾವರೆ [7]ಕಣೆಗೊಳ್ವೊಡಂ ಮೆಲ್ಪಡುವಿರೆಂ[8]ಬುದೇಕೆ ?

ಕಂ|| ಒಡಮೆಯುವೊಡಲುಂ ನೆಟ್ಟನೆ |
ಕಿಡದನ್ನೆಗ[9]ಮಿರ್ಪುವೆಂಬೆ ಜೀವಾ ನೀಂ ಮು ||
ನ್ನೊಡ[10]ರಿಸಿದಘಮುಂ ಕಾಲಮು |
ಮಡಸುವಿನಂ ಮೃತ್ಯುವಡಸೆ [11]ಕಾವರು ಮೊಳರೇ ? || ೩ ||

ವ|| ಕರ್ಮ[12]ವಡಸೆ ಬಂದೆಡಱುಮಂ ಮೃತ್ಯು[13]ವಡಸೆ ನೆಱೆದ ಸಾವುಮನಾರ್ಗಂ [14]ಕಾಯಲಾಗದು. ಅಂತಲ್ಲದೆಯುಂ ನಿಮ್ಮಿರ್ದಿರವಂ ಬಗೆಯಿರೆ ?—

ಉ|| [15]ಅಂತಕನೆಂಬತಕ್ಕ ನತಿಭೀಕರ ಸಂಸೃತಿಯೆಂಬ ಕಾನನಾ |
ಭ್ಯಂತರದಲ್ಲಿಗೊಯ್ದಿರಿಸಿ ನೆಟ್ಟನೆ ನಂಬಿಸಿ ಮೋಹಮೆಂಬ ಸೊ |
ರ್ಕಂ ತಡವಿಲ್ಲದಿಕ್ಕಿದೊಡೆ ಸೊರ್ಕಿದೊ[16]ಡಂ ಕೊಲೆ ತಳ್ವು[17]ದಾವುದೇ |
ಮಂತಣಮಾವುದಾಸೆ ಪರಿರಕ್ಷಿಸುವರ್ ಪೆಱ[18]ರಾರೊ ಜೀವನೇ || ೪ ||

ವ|| ಅಡವಿಯ ನಡುವೆ ಠಕ್ಕನಿಕ್ಕಿದ ಸೊರ್ಕು ತಗುಳ್ವೊಡಂ, ಸಂಸಾರದ ನಡುವೆ ಮೋಹಂ ತಗುಳ್ವೊಡಂ ಅಲ್ಲಿ ಠಕ್ಕನಿಕ್ಕಿದ ಕೊಲೆಯುಮನಿಲ್ಲಿ ಜವನ ಕೊಲೆಯುಮನಾರ್ ಕಾವರ್ ?—

ವ್ಯಾಘ್ರೇಣಾಘ್ರಾತಕಾಯಸ್ಯ ಮೃಗಶಾಬಸ್ಯ ನಿರ್ಜನೇ ||
ಯಥಾ ನ ಶರಣಂ ಜನ್ತೋಃ ಸಂಸಾರೇ ಚ ತಥಾಪದಿ || ೩ ||

ವಚನಂ- ನಿರ್ಜನಪ್ರದೇಶದೊಳು ಪುಲಿಯಿಂ ಪೊಯ್ಯಲ್ಪಡುವ ಹುಲ್ಲೆವಱಿಗೆ ಶರಣಿಲ್ಲದಂತೆ ಸಂಸಾರದೊಳಗಪ್ಪ ವಿಪತ್ತಿನೆಡೆಯೊಳ್ ಮೃತ್ಯು ತಗುಳ್ದಾಗಳಾರುಂ ಶರಣಿಲ್ಲ. ಸದ್ಧರ್ಮಮಲ್ಲ ದಾರುಮಿಲ್ಲೆಂಬೀ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂಗೆಯ್ವೆನದನವಧಾರಿಪುದು—

(1) ಮರಿಯಲ್(ಟ) (2) ಮರ್ತ್ಯರೊಳ್ (ಕ,ಖ,ಗ,ಜ) (3) ಮನ್ಯರೊಳ್(ಖ) (4) ಮಾತೆಲ್ಲಂಗೆಟ್ಟು(ಗ) ಕೆಟ್ಟು(ಖ) (5) ಮೃತಿಯಿಂ ಕೇಳ್ತಾನುಮಳ್ಕಾಡಿದ(ಕ,ಚ)ಮೃತಿಯಿಂದಂ ತಾವುಮ(ಖ) ಕೇಳ್ತಾಮುಮಕ್ಕಾಡಿ(ಚ) (6) ವಾಲ್ (ಖ) ವಾಲು (ಗ). (7) ಸಾವರೆಂದೊಡಂ (ಕ, ಜ) ಗಣೆಗೊಳುವಡಂ (ಗ) ಸೋವವೆಂ (ಘ) (8) ಬುದೇ (ಖ) ಬುದೇಂ (ಗ) ವರೆಂಬು (ಕ) (9) ಮಿರ್ಕುಮೆಂದು ಜೀವಾ ಮುನ್ನೀ (ಕ, ಜ) ಮಿಪುವೆಂಬ ಜೀವಾಮುನ್ನಿಂ (ಗ) ಮಿರ್ಪನೆಂಬ (ಚ) ಮಿರ್ಕುಮೆಂಬ ಜೀವನಮುಂ (ಟ) (10) ರಿಸುವ (ಖ) (11) ಕಾವವ ರೊಳರೇ (ಖ,ಜ) (12) ಮಡಸಿದೆಡಱುಂ (ಕ,ಗ,ಜ) ರುಮಂ (ಟ) (13) ವಡಿಸಿವ(ಕ) (14) ಲಕ್ಕುಮೆ(ಕ,ಟ) ಯಲ್ಪಾರದುಮಂತುಮಲ್ಲ (ಚ) (15) ಮೃತ್ಯುಕನೆಂಬ (ಕ,ಜ) (16) ದರಂ(ಖ,ಗ) (17) ದಾವುದೋ(ಕ,ಜ,ಟ) (18) ರಾರು

ಕಂ|| [1]ಯಂತ್ರಂಗಳು[2]ಮಮಿತ ಮಹಾ |
ಮಂತ್ರಂಗಳುಮನುಪಮಾನಮೆ[3] ನಿಸಿದ ಪಲವುಂ ||
ತಂತ್ರಂಗ[4]ಳು ಮೇಂ ಕಾವುವೆ |
*ಸಂತ್ರಾಸಕ[5]ರೋಗ್ರ ಮೃತ್ಯುರಾಜನ ಬರವಂ || ೫ ||

ವ|| [6]ಗಂಟೆಯಂ ಪುಗಲೀಯದಿಕ್ಕಿದ ಬೇಲಿ[7]ಕಿಚ್ಚುಕೊಳೆ [8]ಕಾಗುಮೆ ?. [9]ಸಂತವಣೆಗೆಂದು ಮಾಡಿದ ಮಂತ್ರ[10]ತಂತ್ರಾದಿಗಳ್ ಮೃತ್ಯುವಂ ಕಾಯಲಾರ್ಕುಮೆ?. ಕಾಗುಮೆಂ[11]ಬಾಸೆಯೊಳ್ ಮಾಡಿದುಪಾಯಂಗಳೆಲ್ಲಮಪಾಯಂಗಳಾಗಿ ಮಗು[12]ಳ್ವುದನಿಲ್ಲಿಯೆ ಕಾಣಲಾಗ—

ಉ|| ಬಲ್ಲಿದ[13]ರಪ್ಪವರ್ ನೆರೆದು ಪಟ್ಟಮನೊಪ್ಪಿರೆ ಕಟ್ಟಿ [14]ಧಾತ್ರಿಗಂ |
ವಲ್ಲಭನೀತನೆಂದು ಬಳಸಿರ್ದಸಿಪಂಜರ[15]ದಂತೆ ಕೆಯ್ದುಗೊಂ ||
ಡೆಲ್ಲರು ಮಿರ್ದು[16]ಕಾಯೆ ಸೊಡರಂತವರಾ[17]ಯುವೆ ಪೋಗೆ ಕೇಳ ತ |
ಳ್ವಿಲ್ಲದೆ ತನ್ನ ಚಾಮರದ ಗಾಳಿಯ ಪೊಯ್ಲೊಳೆ ಪೋಪ [18]ಮಾಟಕ್ಕೆಯೊಳ್ || ೬ ||

ವ|| [19]ದೂದುವೋದನ [20]ನಱುಪುವಂತೆ [21]ಪಿರಿಯರಪ್ಪ[22]ರಸುಗಳ್ ಮಾಡಿದ ಕಾವು [23]ಕಾಪಾದುವೆ ? ಕಾಯ್ವಾದುವೆಂದೊಡಾವಂಗಾವನಪ್ಪಂ— +

[ಕಂ|| ನೆಱೆಯದ ಕಳೆಯಿಂ ಚಂದ್ರಂ |
ಪೆಱೆಯಾಗಿರೆ ಕೂರ್ತು ತ[24]ಲೆಯೊಳಿಟ್ಟೀಶ್ವರನುಂ ||
[25]ನೆಱೆದನೊ ಪೆರ್ಚಿಸಲದಱಿಂ |
[26]ಪೆಱರೇಂ ಪೆಱರ್ಗಾಗಲಾರ್ಪ ಮನುಜರುಮೊಳರೇ || ೭ ||

ವ|| [27]ದೇವನೆಂದು ಬೆಸೆದಿರ್ಪಾತನುಂ ತನ್ನ ತಲೆಯೊಳಿಟ್ಟಲ್ಲಿಯುಂ ಚಂದ್ರಂಗೆ ಪೆರ್ಚಂ ಮಾಡಲ್ [28]ನೆಱೆದೊನಿಲ್ಲ ಮತ್ತಂ—

(1) ಮಂತ್ರಂ (ಕ,ಗ,ಘ,ಜ,ಟ) (2) ಮಮೃತ (ಕ,ಗ,ಘ,ಜ) (3) ಮಾಗುವ (ಕ,ಗ,ಜ) ಫಲವುಂ (ಟ) (4) ಳವೇಂ (ಗ) (5) ರೌದ್ರ (ಕ,ಘ,ಜ,ಟ) (6) ಗಟಿಯುಂ (ಗ, ಜ) ಗಂದೆಯಂ (ಘ) (7) ಕಿಚ್ಚಳುರೆ (ಕ,ಜ,ಟ) (8) ತಾಗುಮೆ (ಟ) (9) ಸಂತವಣಿಗೆ (ಕ) ಸಂತಾವಣೆಗೆಂದು (ಗ) ಸಂತವಣಿಗೆ (ಜ) (10) ತಂತ್ರಂಗಳ್ (ಕ,ಜ) (11) ಬಾಸೆಯ ನುಱುದು ಪಾಯಂಗಳಪಾಯಂಗ (ಕ,ಜ) (12) ಳ್ವುದನೆಕಾಣ (ಖ) (13) ರಪ್ಪರೊಳ್ (ಟ) (14) ಧಾರಿಣೀ (ಕ,ಜ) ಧರಿತ್ರಿಗಂ (ಗ) ಧವಿತ್ರಿನಿ (ಜ) (15) ದಲ್ಲಿಕೈದು (ಟ) (16) ಕಾಎ (ಗ) ಕಾಯ (ಖ) (17) ಯುಲು (ಖ) ಯುಮೆ(ಗ) (18) ಮಾಟಕ್ಕೆಯೊಲ್(ಗ,ಘ) ಪೋಲ್(ಕ) (19) ಜೂದು(ಗ) (20) ನಡಿಪು (ಕ) ರಳಿಪು (ಗ) (21) ಬಲ್ಲಿದರ (ಕ, ಜ, ಟ) (22) ರಸುಮಕ್ಕಳದೇವೇಂದ್ರರ್ಕಳಮಾಡಿ (ಕ) ಮಕ್ಕಳಂದೇವೇಂ (ಟ) (23) ಕಾಪಾಗಲೆಂದೊಡಾವನಾವಂಗಪ್ಪಂ (ಕ) ಕಾಪಾದುವೆ ಕಾಯ್ವಾದುವೆ (ಗ) ಕಾಪಾಗವೆಂದೊಡಾವನಾವಂ (ಜ) (24) ನೊಸಲೊ (ಗ,ಕ) (25) ನೆಱೆಯನೆಪೆರ್ಚಿ (ಟ) ನೆಱೆದನೆ (ಕ) ಪೆಱಂಪೆಱಂಗಾಗ(ಖ) ಪೆಱಪೆಱವಂಗಾ (ಜ) (27) ದೇವರಿವರೆಂದು ಬೆಸೆದಿರ್ಪವರು ಮೆಲ್ಲಮಂತುತಲೆ (ಕ) ದೇವರುಮೆಂ(ಗ) ದೇವರಿವ (ಜ) (28) ನೆರದನಿತನಿಲ್ಲ-

* ಸಂತ್ರಾಸಮೆನೆ ಭಯಂ (ಎಂದು ಗ ಪ್ರತಿಯ ಓಲೆಯಮೇಲೆ ಅರ್ಥ ಬರೆದಿದೆ- ಜ ಪ್ರತಿಯಲ್ಲಿ ೧೭ನೆ ಓಲೆಯ ಅದಿಯಲ್ಲಿ ಬರೆದಿದೆ. + ಇಲ್ಲಿಂದ-ಕಾಪಿನಾಸೆವಡುವಿರೇಕೆ- ವರೆಗೂ (ಗ,ಘ,ಜ) ಪ್ರತಿಯಲ್ಲಿಲ್ಲ.

ಚಂ|| ತನು ತ[1]ನಗಿಲ್ಲ ಕಷ್ಟ[2]ಮತಿದುಷ್ಟ ನಕಾರಣವು[3]ಪ್ಪ ರಾಹು ತಾಂ |
ದಿನಕರನಂ ಪ್ರ[4]ತಾಪಭರನಂ ವಿಳಸತ್ಕರನಂ ಪ್ರಕೋಪದು ||
ರ್ದಿನದೊಳೆ ನುಂಗುವಂ ಗ[5]ಡವನಂ ತ್ರಿಜಗದ್ಭಯಕೃನ್ಮಹಾಂತಕಂ |
ಮನುಜರನೆಯ್ದೆ ವಂದಡಸೆ ಕಾವವನಾವನೊ[6] ಭವ್ಯಜೀವನೇ || ೮ ||

ವ|| ಅ[6]ಂತೇಱಿದನಪ್ಪ ರಾಹುವಿನ[7] ಕೋಟ್ಗಿಂ ಪ್ರತಾಪಿಯುಪ್ಪಾದಿತ್ಯಂ ಕಾಯಲಾರ್ತನಿಲ್ಲೆಂದೊ[8]ಡೆ ಬಲ್ಲಿದನಪ್ಪ ಜವನ ಕೊಲೆ[9]ಯನಲ್ಪಸತ್ವರಪ್ಪ ಮನುಷ್ಯ[10]ರೆಂತುಂ ಕಾಯಲಾರ್ಪರೆ?

ಕಂ|| ಕರ[11]ಮಸಿಯನಾದ ದೆವಸಂ |
ಹರಿಣಧರಂ ದಿನಪನಲ್ಲಿಗಾಸೆ[12]ಯೊಳಂದಂ ||
ತಿರೆ ತಾಂ ಪೋದಂ ಪೋದಂ |
ತಿರೆ ಕೇಳ್ ಪೊಱಮಟ್ಟನಾವನೊನಾವಂಗಪ್ಪಂ || ೯ ||

ವ|| ಅಮಾವಾಸ್ಯೆಯಂದು ಚಂದ್ರಂ ಕರಂ ಕುಂ[13]ದಿ ತನ್ನಿಂ ಕರಂ ಪ್ರಭುವಂ ಸಾರ್ವೆನೆಂದಾದಿತ್ಯಮಂಡಂಳದೊಳಗಂ ಪೊಕ್ಕಿದೊರ್[14]ಡಮಾತನುಮಾತನಂ ಸಂಪೂರ್ಣಂಮಾಡಿ ಕಳಿಪಿದನಿಲ್ಲ. ಮುನ್ನಂ ಬಂದ ವೇಳೆಯೊಳೆ ಪೊಱಮಡಿಸಿ ಕಳೆದನೆಂದೊಡುಱಿದವರಪ್ಪ[15]ರೆಂಬೀಮಾತಂ ಮಱೆವುದಲ್ಲದೆಯುಂ—

ಮ|| ಅಡಿಯೊಳ್ ದುಷ್ಟರನಿಟ್ಟು ಮೇ[16]ಗಮ್ಯತಭುಗ್ವಾಸಂಗಳಂ ಮಾ[17]ಡಿ ತಾಂ |
ನಡುವಿಟ್ಟೀ ನರನಂ ಧರಾಬ್ಧಿಗಳಸಂಖ್ಯಾ(ತ)ಕಂಗಳಂ ಸುತ್ತಿ ಮೇಣ್ ||
ಪಡೆದಲ್ಲಿಂ ಪೊಱಗಂ ತ್ರಿವಾಯುಗಳನಿಟ್ಟಾಕಾಶದಿಂ ವೇಷ್ಟಿಸಿ |
ದೊರ್ಡಮೇಂ[18]ಪೇೞ್ ವಿಧಿಮಂತ್ರಿ ಚಕ್ರಿಯುಮನಿಂ[18]ತೀ ಯಂತ್ರದಿಂ ಕಾದ[19]ನೇ
|| ೧೦ ||

ವ|| ವಿಧಾತ್ರನೆಂಬ ಮಂತ್ರವಾದಿ ಬ[20]ರೆದೊಂ ಗಡೀ ಮಹಾಯಂತ್ರಮಂ, ಅದೆಂತೆಂದೊಡೆ:—] ಕಾಪಿಂಗಾಸೆವಟ್ಟದೇನದತ್ತನಂ ಯಂತ್ರದ ನ[21]ಡುವೆ ತಂದಿರಿಸಿದಂತೀ ಮನುಷ್ಯ

---

(1) ವಣಮಿಲ್ಲ (ಕ,ಟ) (2) ವತಿ (ಚ) ನತಿ (ಗ) (3) ನಪ್ಪ (ಕ,ಟ) (4) ಪ್ರತಾಪಕರನಂ (ಚ) ಪ್ರತಾಪಪರನಂ (ಕ), ಲಸತ್ಕಿರಣನಂ ಭರದೇಱಿಸುತುಂಪ್ರಕೋಪ (ಟ) (5) ಗಡವನುಂ (ಚ,ಟ) ಗಡುಮುವಂ (ಚ) (5) ಮೃತ್ಯುರಾಜನಂ (ಚ) (6) ಅಂತಿಳಿದ (ಕ,ಚ) (7) ಕೋಳಂ (ಕ,ಟ) (8) ದೊಡಂ (ಖ) (9) ಯುಮನಲ್ಪಮನುಷ್ಯರೇಂ ಕಾವರೆ? (ಕ,ಚ) (10) ರೆಂತುಂ ಕಾಯಲಾಱರ್ (ಛ) ರೆಂತುಕಾವರ್ (ಟ) (11) ಮಿಱಿಯ (ಜ) (12) ಸೆಯೊಳಾದಂ ತುರಿಪದೆ (ಕ) ಪಡೆ (ಚ) ಸೆಗೆವಂದಂತಿರೆ ಬಂದಮಾಟ್ಕೆಯಂದದೆ ಪರಿಹರಿಸಿದನೆಂದೆ (ಛ) (13) ಕುಂದಿದೊಡೆ (ಕ,ಚ) ಕುಂದಿದೆನೀಪ್ರ (ಛ,ಟ) (14) ದೊರ್ಡಾತನುಮಾತನಂ ಸಂಪೂರ್ಣಂ ಮಾಡಲಾತನಱಿದೆಪೊಱ (ಕ) ಸಂಪೂರ್ಣಂಮಾಡಲಾಱದೆಪೊಱ (ಚ) ಸಂಪೂರ್ಣಂಮಾಡಿದನಿಲ್ಲ ಬಂದಳನಿಯೊಳಗೆಪೊಱ (ಛ) (15) ರೆಂಬೀಮಾತನುಳಿಯದಡೆಲ್ಲಿಯಂ (ಕ, ಚ) ನುಳಿವುದಂತುಮಲ್ಲ (ಛ) ನುಳಿವುವದಲ್ಲದೆ (ಟ) (16) ಮೇಘ (ಕ,ಟ) ವೇಗಮ್ಯತಭೃಸ್ವಾ (ಚ) (17) ಮಾಡುತುಂ (ಕ,ಚ) ಮಾಡುತಾಂ (ಜ) (18) ಪೇೞ್ಪದೀಮಂತ್ರಿ (ಕ) ಪೇಳ್ಪರೀಮಂತ್ರಿ (ಛ) ಮೇನೇೞ್ಪುದೊ ಮಂತ್ರಿ ಚಕ್ರಿ (ಟ) (18) ನೇನೀಯಂ (ಕ) (19) ಕಾಯ್ದನೇ (ಕ,ಟ) (20) ಬರೆದಂಗಡಮಾಮಹಾ (ಕ) ಬರೆದೊಂಗಡಮಾ (ಟ) (21) ನಡುವಿರಿಸಿ (ಕ, ಟ)

ಲೋಕದೊಳಗ್ಗಳಪುಪ್ಪ ಚಕ್ರವರ್ತಿಯುಂ ವೈರಿ[1]ವರ್ಗಮ ನಡಿ[2]ಯೊಳಿಟ್ಟಂತೆ ನರಕಲೋಕಮಡಿಯೊಳಿರ್ದುದು. ಅಮೃತ ಬೀಜಾಕ್ಷ[3]ರಂಗಳಂ ಮೇಗಿಟ್ಟಂತೆ ಸ್ವರ್ಗಲೋಕಂ ಮೇಗಿರ್ದುದು. ಪೃಥ್ವೀಮಂಡ[4]ಲಮುಮಂ ಅಮ್ಮಂಡಲಮುಮಂ ಬಳಸಿ [5]ಬರೆದಂತೆ ಅಸಂಖ್ಯಾತ ದ್ವೀಪಸಮುದ್ರಂಗಳುಂ ಬಳಸಿಯುಮಿರ್ದು[6]ವು. ಪೊಱಗಂ ತ್ರಿವಾಯುಮಂಡಲಂಗಳಿಂ ವೇಷ್ಟಿಸಿದಂತೆ ಘನೋದಧಿ, ಘನನಿಳಯ, ತನುವಾತಮೆಂಬ [7]ಮೂಱುಂಗಾಳಿಗಳುಂ ಸುತ್ತಿರ್ದುವು. ಅಲ್ಲಿಂ ಪೊಱಗಂ [8]ಗಗನಮಂಡಳದಿಂ ಬಳಸಿ ಬರೆದಂತೆತ್ತ ನೋಱ್ಪೊಡಮನಂತಮಪ್ಪಾಕಾಶಮಿವೆಲ್ಲಱಿಂ ಪೊಱಗೆ ಪರಿವೃತಮಾಗಿರ್ದುದು. ಇಂತಪ್ಪ ಲೋಕಮೆಂಬ ಮಹಾಯಂತ್ರದೊಳಗಿರ್ದ ಮನುಷ್ಯೋ[9]ತ್ತಮನಂ ವಿಧಾತ್ರನೆಂಬ ಮಹಾಮಂತ್ರವಾದಿಯುಂ ಕಾಯ[10]ಲಾಱನೆಂದೊ[11]ಡಿಂ ಕಾಪಿಂಗಾಸೆವಡುವುದೇಕೆ ?—

ಕಂ|| ಎನಿತೊಳವು ಕಾವುಪಾಯಮ |
ನನಿತಱ³ೊಳಂ ನೆಟ್ಟನನ್ಯರಿಂ ತ[12]ನ್ನಿಂದಂ ||
ತನುವಂ ಕಾಯಲ್ ಬಾರದು |
ನಿನಗಾಗ್ರಹಮೇಕೆ ಪೇೞ[13]ಮೆಯ್ಯೊಳೆ ಜೀವಾ || ೧೧ ||

ವ|| ಬಲೆಯೊಳ್[14]ತೊಡರ್ದ ಪಕ್ಕಿಗೆ ಬರ್ದುಂಕುವಾಸೆಯಿಲ್ಲದಂತೆ ಮೋಹದೊಳ್ ತೊಡರ್ದ ಮನುಷ್ಯಂಗೆ ಆವುದಾಸೆ ? ಸರ್ವಸಂಗಪರಿತ್ಯಾಗಂಗೆಯ್ದು [15]ಮಹರ್ಷಿಯಾದೊಡಂ—

ಮ|| ನಿಱಿಸಲ್ವೇೞ್ಪುದು ಮೆಯ್ಯನೀ[16]ತಪದ ಪೆರ್ಚಿಂತಲ್ಲ[17]ದಂತಾಗದೇಂ |
ನೆಱೆ³ ದೋಷಂಗಳನೆಲ್ಲಮಂ ಕಳೆದು ಬಂದಾಹಾರಮಂ ಕೊಳ್ವುದ ||
ಕೆಱಗಲ್ ಕೊಕ್ಕರಿಪಂದಮಂ ಮುನಿಪ(ಯ)ರೊಳ್ ಕಂಡಲ್ಲಿ ಸಂಸಾರದೊಳ್ |
[18]ಮಱುಗುತ್ತಿರ್ಪೆಲೆಜೀವ ನೀಂ [19]ಬೆಸೆವುದೇಂ ಪೇೞ್ ಕಾವರಂ ನಂಬಿದೋ || ೧೨ ||

ವ|| ಮಡುವಿಂದಂ ಪೊಱಮ[20]ಟ್ಟು ಬಿಸಿಲೊಳಿರ್ದು ಶೀತಕ್ಕಳ್ಕಿ [21]ನಡುಗುವೊಡ ಮೊಳಗಿರ್ದಂ ನಡುಗುವಂತೆ ಸಂಸಾರವ್ಯಾಪಾರಕ್ಕೆ ಪೊಱಗಾದ ಮಹರ್ಷಿಯರ್ಕಳುಮಾಹಾರಂಗೊಳ್ವನಿತರ್ಕೆ ಬೆರ್ಚುವರ್, ಸರ್ವಾವಸ್ಥನಾಗಿರ್ಪ ಜೀವಾ, ನೀಂ ಬೆರ್ಚದಿರ್ಪುದಾವುದಾಸೆ? ಪೇೞ³ೆಂದು ಗೃಹಸ್ಥ[22]ರನಲೆದಿನಿಸಾನುಮಱಿಪಿ ನೆಗೞ್ವ ಮಹರ್ಷಿಗಂ ಕಿಱಿದನಱಿಪುವೆನದೆಂತೆಂದೊಡೆ—

---

(1) ಗರ್ಬನಡಿಯೊ (ಚ) • (2) ಯೊಳ್ತೀವಿಟ್ಟಂತೆ ನರಲೋಕಮಿರ್ದು (ಕ) (3) ರಮಂ (ಕ) (4) ಲಮುಂ (ಚ) (5) ಬರೆದಂತಸಂ (ಟ) (6) ವುತ್ರಿವಾ (ಕ) (7) ವಾಯುಮಂಡಲಮುಂ ಮೂಱುಂಗಾಳಿಗಳಿಂ (ಕ) (8)ಬರೆದಂತಾಕಾಶಮೆಲ್ಲವರಿಂ ಪೊಱಗಂಪರಿವೃತಮಾಗಿ ಬರೆದಂತಿರ್ದುದಿಂತಪ್ಪ (ಕ) ಮಂಡಳದಿಂ ಸುತ್ತಿರ್ದುದಂತಾಕಾಶಮೆಲ್ಲಮುವಱಿಂಪೊಱಗೆಪರಿವೃತಮಾಗಿರ್ದು (ಖ) ಡಳದಿಂಬಳಸಿ ಬರೆದಂತೆತ್ತ ನೋಱ್ಪೊಡಮನಂತಮಪ್ಪಾಕಾಶಮೆಲ್ಲಮಂ ಪರಿವೃತಮಾಗಿ ವೇಕ್ಷಿಸಿಕೊಂಡಿರ್ದುಮ (ಚ) (8) ತ್ತಮನೆಂಬ (ಕ) (10) ಲಾರ್ತನಿಲ್ಲನೆಂ (ಟ) (11) ಡೇಂ ಪೇೞರ ಕಾಪನಾ (ಚ) ಡಿನ್ನುೞಿವವರ ಕಾಪ (ಕ, ಛ) ನಿನ್ನಿಂಪಂ (ಕ,ಟ,ಜ) (13) ನೆಗೞ್ಲೆಜೀವಾ (ಚ) (14) ಬಿೞ್ದಿರ್ದ (ಛ) (15) ಮಹರ್ಷಿಯುಂ (ಛ) ರ್ಷಿಯುಮಿರಿಸಲ್ವೇಳ್ಪುದು (ಎಂದು ವಚನದೊಡನೆ ಸೇರಿದೆ) (16) ತೆಱದ(ಛ) (17) ದಂದಾಗದೆಂತುೞ³(ಜ) (18) ಕರಗು(ಟ) (19) ಮರುಳಲಾ ಪೇೞೂವುದಂ (ಛ) (20) ಟ್ಟಂ (ಜ) (21) ನಡುಗುವಂತೆ ಮಡುಗೊಳಗಿರ್ದಾತನ ನಡುಗುವಂತೆ ಸಂಸಾರಕಾರ್ಯದಿಂ (ಕ) ನಡುಗುವಂತೆ ಮಾಡುವೊಳಗಿರ್ದಂ ನಡುಗದಂತೆ (ಛ) (22) ರನಲ್ಪದಿ (ಛ)

ಕಂ|| ಪೊಲ್ಲಮೆಗ[1] ಳೆಯ್ದೆವಂದೊಡ |
[2]ವೆಲ್ಲಂ ತಪದಿಂದೆ ಕಿಡುಗುಮಿಂದೊ[3]ಳ್ತಪದಿಂ ||
ಗೆಲ್ಲಂಗೊಂಡುಂ ಸೋಲ್ವಂ |
[4]ಗಿಲ್ಲ ಶರಣ್ ಬಗೆವೊಡದಱಿ [5]ನಱಿಪಲ್ ಮುನಿಪಾ || ೧೩ ||

ವ|| ಪಗೆವರೆಲ್ಲರುಮನಿಕ್ಕೆ ಕೊ[6]ಳುಗೊಳಂ ಕೊಳ್ವನಿತು ಪೊೞ್ತಿನಲ್ಲಿ ನಿಲಲಾಱ[7]ದೋಡಿ ಪೋಗಿ ಸೋಲಮಂ[8]ಮೇಲಿ ತೆಗೆದುಕೊಳ್ವಂತೆ ಪರಿಗ್ರಹಮೆಲ್ಲಮನೀಡಾಗಿ ಬಂದಗ್ಗಳಮಪ್ಪ ತಪಮಂ ಕೆಯ್ಕೊಂಡು ನೆಗೞ್ತಿರ್ದು ಕೆಲವಾನುಂದೆವಸಕ್ಕೆ[9]ಸೈರಿಸಲಾಱದೞಿಪಿ ನಿನಗೆ ಸೋಲಮನೇಕೆ ಮಾೞ್ಪಿಯ್—

ಉ|| ನೋಡ ಗೃಹಸ್ಥರುಂ ಕರಮೆ ನಲ್ಲಳ ದೋಷಮನೊರ್ಮೆ ಕೇಳ್ದೊಡಂ |
ನೀಡಿ(ಡಱ)ರಲೀಯ[10]ದಂದೆ ಕಳೆವರ್ ಕಡು[11]ಗೂರ್ತರಱಮಂ ತಪಸ್ವಿ ನೀಂ||
ನೋಡುತುಮಿರ್ಪ ನಿನ್ನ ಕಡುದೋಷಮನೋವದೆ ಬೆರ್ಚಿ ಬೇಗಮಾ |
[12]ಡಾಡದೆ ನೀನದಂ ಪಿಡಿದಘಂಬಡೆ ನೆಟ್ಟನೆ ಕಾವನಾವನೋ || ೧೪ ||

ವ|| ಅಂತೆ ಪೊಲ್ಲಮೆಯೊಳ್ ತೀವಿರ್ದ[13]ಗೃಹಸ್ಥರೆಲ್ಲಂ ಕಣ್ಣವೆ ಮಱೆ[3]ಯಾದೊಡೆ ಬಾ[14]ೞದನಿತಂ ಮಾೞ್ಪ ಸ್ನೇಹದ ಪ್ರಾಣವಲ್ಲಭೆಯುಮಂ ದೋಷಂಗೆಯ್ದಳೆಂಬುದಂ ಕೇಳ್ದನಿತ ಱೊಳೆ ಪೊಱಮಡಿಸಿ ಕಳೆ[15]ವರ್. ಎಲೆ ತಪಸಿ, ನೀಂ ಪೊಲ್ಲಮೆಗೆ ಕರಂ ಗೆಂಟಾಗಿರ್ದುಂ ನಿನ್ನ ದೋಷಮಂ ಕಂಡುಮೇಕೆ ಕಳೆಯದಿರ್ಪಯ್, ಬೇಗಂಕಳೆ, ಕ[16]ಳೆಯದುದಾಸೀನನಾಗಿರ್ದೆಯಾದೊಡೆ ಸೂಜಿಯ ಬೞಿಯ ದಾರದಂತೆ ದೋಷದ ಬೞಿಯನೆ ಪಾಪಂ ತ[17]ಗುಳ್ದು ಬರ್ಕುಂ ಮದಱಿಂ ನೀಂ[18]ಕರಂ ಪ್ರಯತ್ನಪರನಪ್ಪುದು—

ಕಂ|| ಪೊಲ್ಲರ ಸ[19]ಮೀಪದೆಡೆಯೊಳ್ |
ನಿಲ್ಲದು ತಪಮೂರ್ಗೆ ವಂದ ಪುಲ್ಲೆಯ ತೆಱದಿಂ||
ಬಲ್ಲಂದದಿ[20]ನೆಂತುಂ ತ |
ಕ್ಕಲ್ಲಿರ್ಪುದು ಕಾವೆನೆಂಬವರ್ ಗುಣಗಣಮಂ || ೧೫ ||

---

(1) ಳೆಯ್ದಿ (ಗ) (2) ವೆಲ್ಲಾ (ಗ) (3) ದೊಳ್ಪಸದಿಂ (ಚ) ದೊಡೆತಪದಿಂ (ಟ) (4) ಗಿಲ್ಲಂ (ಚ) ಗೆಲ್ವಂ (ಕ) (5) ನರಿಪೆಲೆ (ಕ, ಚ, ಜ) ಡವನರಿಪೆ (ಘ) (6) ಕೊಳ್ಳುಳಂ (ಘ) (7) ದೊಡೀ ಸೋಲ (ಕ) ದೊಡೆಪೋಗಿಸೋ (8) ಮಾಡಿಕೊಳ್ವಂತೆ (ಕ) (9) ಸಮಂ (ಕ, ಜ) (10) ದಂತೆ (ಕ, ಟ) (11) ಸೂರ್ತರುಂ (ಘ) (12) ಡಾಡೆಲೆ (ಗ) ಬಿಡ....ಬರೆ (ಚ) (13) ಗೃಹಸ್ಥರುಮೆಲ್ಲಂ (ಕ, ಜ) (14) ಬಾಳುವನಿತಂಮಾೞ್ಪಪ್ರಾಣ (ಖ) (15) ವರೆಲೆ (ಚ) ವನೆಲೆ (ಗ) ಕರವರೆಲೆ (ಛ) ಕಳೆವೊನೆ (ಈ) (16) ಕಳೆಯದಿರ್ದೊಡೆ (ಟ) ಬೇಗಂ ಕಳೆಯದಿ (ಕ, ಜ, ಚ) (17) ತಗುಳ್ವುದುಮದಱಿಂ ಕರ‌ಂ ನೀಂ ಮತ್ತೆ ಪ್ರಯತ್ನದೊಳಿರ್ಪುದು (ಕ, ಚ) (18) ಕರಂ ನಿಮ್ಮಂತೆ ಪ್ರಯತ್ನ (ಘ) (19) ಸಮೀಪದೊಳಿತಾಂ(ಟ) (20) ನೊಳೋತುಂ (ಖ)

ವ|| ಗೇಹಾಶ್ರಮದೊಳ್ ಪಣಮಂ ಕಾಯಲಾಗದೆಂದೊಡೆ ಗುಣಮಂ ಕಾಯಲಾ[1]ರ್ಕುಮೆ? ಅದಱಿಂ ಗೇಹಾಶ್ರಮಮೇವುದು? ಅತ್ತ ನೋಡದಿರದಱಿಂ ನಿನಗೆ ಮನೆವಾೞ್ತೆ ಪೊಲ್ಲ,

ಚಂ|| ದೆಸೆಗಳನುಟ್ಟು ತೊಟ್ಟು ಗುಣಭೂಷಣಮಂ ತಪದೊಂದು ಪೆರ್ಚನುಂ |
ಡೊಸೆದು ಗುಹಾಗೃಹಾಂತರದೊಳಿರ್ದು ಚರಿತ್ರಕಳತ್ರದಲ್ಲಿ ಮೇ ||
ಳಿಸಿ ನಿಲೆ ಸೌಖ್ಯಮಂ ಪಡೆವ[2]ಯಾ ಮನೆವಾೞ್ತೆಯನೊ[3]ಲ್ಲದೊಳ್ಪನೊ |
ಕ್ಕೆಸೆವ ಗೃಹಾಶ್ರಮಂ ಸುಖಮನೀಗು[4]ಮೆ ಕಾಗುಮೆ[4]ಪೇೞ್ ತಪೋಧನಾ || ೧೭ ||

ವ|| [5]ದ್ರವ್ಯಮಂ ಕಟ್ಟಿಕೊಂಡೊರ್ವನೆ ಬೇಡವ[6]ಳ್ಳಿಗೆ ಪೋದೊಡಂ, ತಪಂಗೊಂ[7]ಡು ಮೊರ್ವನೆ ಮೋಹದೊಳ್ ಮನೆಯೊಳಿರ್ದೊಡಂ ಆ ಯಿರ್ವರ ಕೇಡಿಂಗಂ ಮಱುಗಲ್ವೇಡ. ಮತ್ತ ಮೊಂದುಮಾತಂ ಕೇ[8]ಳಿಮುದಾವುದೆಂಬ–?

ಕಂ|| ಪರಹಿತದೆ ನೆಗೞ್ವೆ ನಾ[9]ನಿಂ |
ಪರತ್ರೆಯಂ ಪಡೆವೆನೆಂಬ ಮುನಿಪಾ ನೀಂ ಮ ||
ಚ್ಚರಮಂ ಚಿತ್ತದೊಳಿನಿತುಮ |
[10]ನಿರಲೀಯದಿರಿತ್ತೊಡದುವೆ ಕಿಡಿಕುಂ ನಿನ್ನಂ || ೧೭ ||

ವ|| ಕೋಟಿವೊಕ್ಕಂಗಂತಃಕ್ಷೋಭಮಾದೊಡಂ ತಪದ ಮಱವೊಕ್ಕಂಗೆ ಮಾತ್ಸರ್ಯ ಮಾದೊಡಮಾತನ ಕೋಟೆಯುಮಿಾತನ ತಪಮುಂ ಕ[11]ಜ್ಜಮಲ್ಲೆಂಬುದನಱದು ನೆಗೞ್ವುದು. ಮತ್ತಮೆತ್ತಾನುಮಿಾಭವದ ಮುನ್ನಣೆಗಾ ಸೆ[12]ವಡುವಯ್ ಗಡಾ !

ಮ|| ಪಲವೋ[13]ದಂ ನೆಱೆಯೋದಿ ಪೂಣ್ದು ಪಲವುಂ ಕಾಲಂ ತಪಂಗೆಯ್ಯುತಿ |
ರ್ದಲೆ ನೀಂ ಖ್ಯಾತಿಗಮಿಲ್ಲಿಮಾಡುವಿನಿಸಾನುಂ ಪೂಜೆಗಂ ಮೆ[14]ಚ್ಚಿಡಿಂ ||
ದೊಲಿವಾ! ಕೇಳ್ ಮರನಿಟ್ಟು ಕಾದು ಪಲವುಂ ಪೂಗೊಯ್ದುಗೊ[15]ಂಡಿರ್ಪ ಗಾ |
ವಿಲನಂತಪ್ಪುದೆ ಸೈರಿಸಿರ್ದು ಮುನಿಪಾ ! ಕೆಯ್ಕೊಳ್ ಮಹಾಸೌಖ್ಯಮಂ || ೧೮ ||

---

(1) ರ್ಕುಮೆ? ಗಾರ್ಹಸ್ಥ್ಯ ಮೇವುದದಱತ್ತನೋಡದಿರದಱಿಂ ನಿನಗೆಮನೆವಾರ್ತೆ (ಕ,ಜ) ರ್ಕುಮದಱಿಂಗೇ ಹಾಶ್ರಯಮೇವುದು ಅತ್ತ ನೋಡದಿರೆಲೆತಪಸ್ವೀಯದಱಿಂ ಮನೆಗೆ (ಗ) ಅಂತಕ್ಕುಮೆಗಾರ್ಹಸ್ಥ್ಯಮೇವುದದಱತ್ತ ನೋಡದಿರೆಲೆ (ಚ) (2) ನೀ (ಕ) (3) ನಲ್ಲಿದೊಳ್ಪ (ಖ) ದೋಷದೊಳ್ಪ (ಚ) (4) ಮೊ (ಗ) ಕೇಳ್ (ಟ) (5) ದ್ರವ್ಯಂಗೊಂ (ಕ) (6) ಗೋಪಡಂ (ಕ,ಜ) ಗೊಟ್ಟಕ್ಕೆವೋಪನು (ಗ) ವಟ್ಟಂಗೋಪಡಂ (ಚ) ಗೆ ಪೋದಾತಂ (ಖ) (7) ಡುಮೋಹದ (ಖ) (8) ಕೇಳಾವು (ಕ) ಕೇಳದಾವು (ಗ) ಮತ್ತಮೊಂದು ಮತ್ತೊಂದು ಮಾತಂ ಕೇಳಾ ಉವೆಂಬಾ (ಜ) (9) ನಾನುಂ (ಕ) (10) ನಿರದೀಯ (ಕ, ಚ) ರಿರ್ದೊಡದುವೆ (ಕ, ಟ) ನಿರದೀಯದೆಯೆರ್ದೊಡದುವೆ ಕಿಡಿಸುಗುಮಘಮಂ (ಚ) ನಿರದೀಯದಿರದುವೆ ಕಿಡಿಸುಗುನಿನ್ನಂ (ಗ) ಯದಿರೆಂತು ಮದುವೆ (ಖ) (11) ಮಲ್ಲಮುದರಿದುನೆಗಳಲೆತ್ತಾಸುಂ (ಕ,ಜ) ನೆಗಳೆತ್ತಾನುಂ (ಟ) (12) ವಡುವೆಯುಪ್ಪೊಡೆ (ಖ) ವಡುವುದೆ (ಕೇ, ಗ) (13) ವಂದಂ (ಕ, ಡ) (14) ಮಚ್ಚದಿಂದೊಲೆವೋ (ಕ) ಮೆಯ್ಪುನಿಂದೊಲೆ (ಜ) ದೊಲೆದೋ (ಖ) ದೆಲಕೇಳ್ (ಗ) (15) ಕಾದಿರ್ಪ (ಕ,ಜ) ತಂದಿರ್ಪ (ಟ)

ವ|| ಶೀವಿ [1]ಕಱೆದೊಡೊದೆವಾನಂತೆ ಪಲವುದೆವಸಂ ತಪಂಗೆಯ್ದು ಕೆಲವು[2] ದೆವಸಂ ಸ್ಥೈರಿಸ ದಿಲ್ಲಿಯೆ ಮನ್ನಣೆಗಾಸೆವಟ್ಟು ಮುಂದಣ ಫಲಮಂ ಕಿಡಿಸದಿ[3]ರಿಮೆಂದು ತಪಂಗೆ[4]ಯ್ವರ್ಗೆ ಪೇೞ್ದು ನಿನ್ನು ಮೆಲ್ಲತೆಱದೊಳಂ ಮೆಯ್ಮಱೆದು ನೆಗೞ್ವ ಜೀವಂಗ[5]ಳೇ ಅಣಮೆ ಕೇಳಿಂ—

ಕಂ|| ಬೆಜ್ಜಂ ಪಂದೆ[6]ಯ ಪೇೞ್ವಱಂ |
ಗಜ್ಜಂಗಳುಮಾಸೆವಡಿಪ ಕುಹಕದ ಫಲಮುಂ ||
ಬಿಜ್ಜೆಗಳುಮೆಮಗೆ ಕಾಪೆಂ |
ಬುಜ್ಜಗ[7]ಮೞಪೞವು ಕಾಯಲಾರ್ಕುಮೆ ನರರಂ || ೧೯ ||

ವ|| ಬಾಡುಂ ಬೆಂಜನಮುಂ ಕೂೞಂ ರುಚಿಮಾಡುವನಿತಲ್ಲದೆ ತಾಮೆ ಬೇಱೆ ತಣಿಪಲ್ ನೆಱೆಗುಮೆ? [8]ಬೆಜ್ಜಂ ಕಜ್ಜಮುಮಾಯುಗೆ ನೆರಮಲ್ಲದೆ ತಾನೆ ಬಾ[9]ೞಿಸಲ್ ನೆಱೆಗುಮೆ? ಮೆ[10]ೞ್ಪಡಲೇಕೆ? ಕಾಲರಾ[11]ಜನೆಯ್ತಂದೊಡಾವನುಮಿಲ್ಲಿಯುಮೆಂತು ಕಾಯಲಾಱಂ—

ಕಂ|| ಅಣಿಮಾದ್ಯೈಶ್ವರ್ಯಂಗಳ್ |
ಪೆಣೆದಿ[12]ರೆ ನೆಲೆ ಸಗ್ಗ ಮ[13]ಮೃತಮುವನಾಹಾರಂ ||
ಪ್ರಣುತ ಸುರಸಮಿತಿಯೆಲ್ಲಂ |
ಮಣಿದೋಲಗಿಸಿ[14]ಪುರ್ದಾಯುಧಂ ವರವಜ್ರಂ || ೨೦ ||

ಮ|| [15]ಅರಿದಿಲ್ಲಟ್ಕದರಿಲ್ಲವಂಗೆ ಬಲದೊಳ್ ಸೌಂದರ್ಯದೊಳ್ ಧೈರ್ಯದೊಳ್ |
ದೊರೆಯಿಲ್ಲಗ್ಗಳಮಿಪ್ಪರ್ರಿಲ್ಲೆನೆ ಕರಂ ಮಿಕ್ಕಿಂದ್ರನುಂ ಲೋಕಮಂ||
ಪರಿರಕ್ಷಿಪ್ಪುದ[16]ದಿರ್ಕೆ ಕಾಲವಶದಿಂ ಬಿೞ್ಕುರ್ಕುಮಿನ್ನೆಂದೊಡೀ |
ನರರಂ[17]ತುಚ್ಛರನಂತಕಂ ಮುಳಿಯೆ ಪೇೞ್ ಕೆಯ್ಕೊಳ್ವರಾರ್ ಕಾವರಾರ್ || ೨೧ ||

---

(1) ಕಜ್ರೆದೊದೇವಂತೆ (ಕ) ಕರೆದೊಡೊದೆವಂತೆ (ಖ) ಕರೆದೊಡೀಯಲೊದೆ (ಗ) ಶೀವಿಕರೆದೊದೆವಂತೆ (ಜ,ಚ) ಶೀವಿಕರೆದೊಡೇವದೇವಂತೆ (ಟ) (2) ಕಾಲಂ (ಗ) ದಿವಸಂ ಸಫಲಂಗೆಯ್ದು ಕೆಲವು ದೆವಸಮುಂ ಸ್ಥೈರಿಸ (ಕ,ಜ) (3) ದಿರೆಂದು (ಕ) (4) ಯ್ವಂಗೆ (ಗ) ಗೆಯ್ವೆ ಪೇೞ್ವಿಮಿನ್ನುಮೆಲ್ಲಾ (ಜ) ಗೆಯ್ವಪೇ (ಕ) (5) ಗಳೆ ಅಣಮಂ (ಜ) ಜೀವಂಗಳೆಣಮಂ (ಕ) ಜೀವಗಣಮೆಲ್ಲಮಂ (ಖ) ಜೀವಾ ನೀಂ ಕೇಳಿಂ (ಗ) (6) ಯು ಪೆಜ್ಜಂಗಳ್ಮಾಸೆ (ಕ,ಜ) ಯ ಕೆಳೆಯಲಿ (ಗ) (7) ಮೞಿಪೞಿದು (ಕ) ಮುೞಿಮುೞಿವು (ಖ) ಮೞಿವುದದು (ಟ) (8) ವಿಜ್ಜಂ (ಟ) (9) ಭೋಗಿಸಲ್ (ಗ) ಬಾೞಿಪಲ್ (ಟ) (10) ಮೆಳ್ಪಡದಿರಿಂ (ಕ,ಜ) (11) ರಾಜಂ ಬೇರೆ ಮರೆಗುಮೆ ಮುಯ್ತಂದೊಡೆಂತುಂ ಕಾವರಿಲ್ಲ (ಕ, ಜ) ರಾಜನೆಯ್ತಂದೊಡೆಲ್ಲಿಯುಮೆಂತುಂಕಾವರಿಲ್ಲ (ಗ) (12) ದುವುನೆಲೆ(ಗ) (13) ಮಧುರಾಹಾರಂ(ಕ,ಜ,ಟ) ಮನಮುನಾಹಾರಂ(ಗ) (14) ಲಗಮಿರ್ಪರಾ(ಕ,ಘ,ಜ,ಟ) (15) ಅರಿವಿಲ್ಲ (ಜ) (16) ನಿದಿರ್ಕೆ (ಗ) ದದಕ್ಕೆ (ಖ, ಟ) (17) ಕಷ್ಟರಮ್ಮತ್ಯುವೈದಿಮೞಿಯೆ ಕೇೞ್ (ಕ) ಮೃತ್ಯುವೆಯ್ದೆ ಮೞಿಯೊಳ್ ಕೈ (ಘ) ಕಷ್ಟರನಂತಕಂ ಮುೞಿಯೆಪೇೞ್ (ಗ)

ವ|| [1]ದೈವದೆಸರಂ [2]ತುಡುಕುವಾತಂ ಮುಂದಿಲುಪಿದ ಮೊ[3]ಸಲ ಕೂಲನುಲುಯಲೀಗುಮೆ? ಈ ಲೋಕದೊಳ್ ಕರಂ ಪಿರಿಯರುಂ ಕರಮರಿಯರುಮಪ್ಪ ಸಕಲಚಕ್ರವರ್ತಿಗಳುಮಂ ಆ ದೇವೇಂದ್ರರ್ಕಳುಮನಲುವ [4]ಜವನೀಗಳಿನೇಲುದರಂ ಕೊಲೆ ಕಾವರಾರ್? ಕಾವುಂ[5]ಟೆಂಬೀ ಭ್ರಾಂತಿಯನುಲುವುದು. ಆ[6]ದೊಡೆಂತುಂ ಕೇಳ್ಕೆ ಮುನ್ನಾಕ್ರಾಂತಮಾಗಿರ್ದುದೊಂದು ದುರ್ಮೋಹದಿಂ ಬಯ್ತು ಕಾದರ ಕಥೆಯನಪ್ಪೊಡೇಂ ಕೇಳಲಾಗ! [7]ಕೇಳಿಮೇಕಚಿತ್ತದಿಂ—

---

## ದೃಷ್ಟಾಂತದ ಕಥೆ

### [ ಮುಂಡಕೌಶಿಕನ ಕಥೆ ]

ಕಂ|| ವಸುಧಾ ಭೂಷಣ[8]ಮೆಂಬುದು |
ವಸು[9]ನಿಧಿಯೆಂಬಗ್ರಹಾರಮದಱೊಳ್[10]ವೇದ |
ಪ್ರಸರ[11]ವಿದನಾಗಿ ಪಾರ್ವರೊ |
ಳೆಸೆದಿರ್ಪಂ [12]ನೆಗಲ್ದು ಮುಂಡಕೌಶಿಕನೆಂಬಂ || ೨೨ ||

ವ|| ಆ ಪಾರ್ವಂಗೆ ಮಕ್ಕಳಿಲ್ಲದಿರೆ ಪೆಂಡಿತಿ[13]ಯುಂ ತಾನುಂ ನಿಚ್ಚನಿಚ್ಚಲುಂ ಚಿಂತಾಕ್ರಾಂತರಾ[14]ಗಿರ್ಪರೊಂದುದೆವಸಂ ತಮ್ಮೂರ ಕೆಲದ [15]ಬೆಟ್ಟದೊಳಗತಿಪ್ರಸಿ[16]ದ್ಧಿಯಾಗಿರ್ಪ ಗಿರಿನಿವಾಸಿನಿಯೆಂಬುಗ್ರದೇವತೆಯಲ್ಲಿಗಿರ್ವರುಂ ಶುಚೀಭೂತರಾಗಿ ಪೋಗಿ ಪೊಡೆವಟ್ಟು ಅರ್ಚಿಸಿ "ಮಗಂಬಡೆವೆವಕ್ಕೆ" ಎಂದು ಪರಸಿ ಬಂದು ಮನೆಗೆವಂದಿರ್ಪುದುಂ ಕೆಲವಾನುಂದೆವಸ[17]ದಿನಾ ಪಾರ್ವಿತಿಗೆ ಗರ್ಭಮಾಗೆ ನವಮಾಸಂ ನೆಱೆದು [18]ಗಂಡುಗೂಸಂ [19]ಪಡೆವುದುಮಾಕೂಸಂ ಚಂಡಕೌಶಿಕನೆಂದು ಪೆಸರಿಟ್ಟುಮಲ್ಕುಱೊಳ್ ನಡೆಪಿ ನವಯೌವನನಾದಂದು ಮಗಂಗೆ ಮದುವೆಯಂ ಮಾಡುವಮೆಂದಲ್ಲಿಯುಮೊರ್ವಪ್ರಭುವಪ್ಪ ಪಾರ್ವನ ಕೂಸಂ ಬೇಡಿ ಪಡೆದು ಮದುವೆಗಪ್ಪ ಸಾಮಗ್ರಿಯೆಲ್ಲಮುಂ ನೆರಪಿ [20]ಕೆಲಬಲದೂರ್ಗಳೊಳಿರ್ದ ತನ್ನ [21]ನಂಟರೆಲ್ಲರುಮಂ ಬರಿಸಿ ನಾಳೆ ಲಗ್ನಮೆಂದಿರ್ಪನ್ನೆಗಂ.

(1) ದೆಯ್ವದೆಸರಂ(ಕ) ದೈವ್ಯದೇಶರಂ(ಟ) ದಿವ್ಯಮಿತಿ ತಾತ್ಪರ್ಯ (ಎಂದು ಗ ಪ್ರತಿಯಲ್ಲಿದೆ) (2) ದುಡುಕು (ಕ,ಜ) ತುಳುಕು (ಖ) ತುಡುಂಕು (ಚ) (3) ಸರನೇಕುಳಿಯಲೀಗುಮಿಾ (ತ) ನೇಕುಳಿ (ಟ, ಜ) ರನುಳಿಯಲೀಗುಮೆಈ (ಗ) (4) ಮೃತ್ಯುವೇಣೀ (ಕ,ಜ) ಜವನನೇ (ಗ) (5) ಟೆಂದೊಡೀ (ಗ) (6) ದೆಂದೊಡಿಂತು ಕೇಳ್ದರಿಲ್ಲ ಮುಂಪೇಳ್ದ ಕಥೆಯ (ಕ,ಟ,ಜ) ದೆಂದೊಡೆಂತುಕೇಳಿರ್ಮುನ್ನ ನೆಗಟ್ದಕಥೆಯ (ಗ) (7) ಕೇಳಬಾಗ, ಕೇಳೇಕಚಿತ್ತದಿಂನಂಬಾ (ಕ) ಕೇಳ್ದೀಕಚಿತ್ತ (ಜ) ಕೇಳ್ವುನಂಬುವುದು (ಗ) (8) ಮಪ್ಪುದು (ಕ,ಜ,ಗ) (9) ಮತಿ (ಗ) (10) ವಿದ್ಯಾ (ಗ,ಜ) )11) ಯುತನಾಗಿ (ಕ,ಜ) (12) ನೆಗಟ್ದ (ಕ) (13) ಯುಮಾತನುಂ (ಗ) (14) ಗಿರ್ಪನ್ನೆಗಮೊಂದು (ಗ) (15) ಬಟ್ಟೆಯೊ (ಕ,ಜ) (16) ದ್ಧಯಗಿರಿವಾಸಮೆಂಬ (ಜ) (17) ದಿಂದಾತನಪಾರ್ವಿತಿಗೆ (ಗ) (18) ಸುತನಂ (19) ಪಡೆದುಂಕರಮೊಪ್ಪುಗೆಯ್ದು ನಡಪಿಯೌವನ (ಕ,ಟ) ಪಡೆದೊಡಾಕೂಸಿಂಗೆ ಚಂಡಕೌಶಿಕನೆಂದು ವೆಸರಿಟ್ಟುಕರಮಟ್ಕುಱೊಳ್ (ಛ) (20) ಕೆಲವುದೂರದೊಳಿರ್ದ (ಕ) (21) ನಂಟರೆಲ್ಲರಂಬರಿಸೆ ತಾಂ ಪೋಗೆ ನಾಳೆ (ಜ)

ಉ|| ಅಲ್ಲಿಗೆ [1]ಮುನ್ನೆ ಬಂದ[2]ಡಸಿ ನಿಂದ ಗುಹಾಮುಖನೆಂಬ ರಕ್ಕಸಂ |
[3]ಪಿಲ್ಲಿಸಿ [4]ಕನ್ನೆ ಗಂಡರನೆ ನುಂಗುತುಮಿರ್ದೊಡೆ ಬಾರಿ[5]ಗಟ್ಟುವೆಂ ||
ದೆಲ್ಲರು[6]ಮಿರ್ದು ಮಾಡಿದೊಡೆ ಮಾಡಿದ ಬಾರಿಯ [7]ಸೂೞ್ ನಿಯೋಗದಿಂ |
[8]ದಲ್ಲಿಯುಮಂತೆ ಬಂದು ಬೞಿಕಾ ಮನೆಯಲ್ಲಿಗೆ ಬಂದುದೆಂ[9]ಬುದಂ || ೨೩ ||

ವ|| ಬಾರಿಕಂ [10]ಬಂದು ಪಾರ್ವನಂ ಮನೆಯಲ್ಲಿ (ಯೊಳ್) ಕಾಣದೆ “ಅಬ್ಬಾ ನಿಮ್ಮ [11]ಮನೆಗೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಂ” ಎಂದು ಪೇೞ್ದು [12]ಪೋದಾಗಳ್, ಆ ಪಾರ್ವಿತಿ ಮುಚ್ಚೆವೋಗಿ ಬಿೞ್ದು ನೀಡಱಿಂದೆೞ್ಚತ್ತು ಬಾಯಂ[13]ಬಿಟ್ಟೊಳಱಿಯುೞು[14]ತ್ತಿರ್ಪಿನಂ ಅನ್ನೆಗಮಾ ಪಾರ್ವಂ ವಿವಾಹಕಾರ್ಯಕ್ಕೆ ತಕ್ಕ ವಸ್ತ್ರತಾಂಬೂಲಾದಿ ಮಂಗಳದ್ರವ್ಯಂಗಳಂ ಮಾಱುಗೊಂಡು ಪೊತ್ತು ತಂದು ಬಂದು ಮನೆಯಂ ಪುಗುವಾಗಳಿದಿರಂ ಬಂದು ಬಸಿಱಂ[15]ಪೊಯ್ದುಕೊಂಡು ಪೊರಳ್ದೞ್ವಳಂ ಪಾರ್ವಂ ಕಂಡು ಬೆಱಗಾಗಿ (ಪಾರ್ವನೆದೆಪಾಱಿ) ಪೊಱೆಯನಿೞಿಪಿ ಕುಳ್ಳಿ[16]ರ್ದಿದೇನೆನೆ ಪಾರ್ವಿತಿ[17]ಯೆಂಗುಂ.

ಕಂ|| ನಮ್ಮ ಮನೆಗೊಸಗೆ ಪಿರಿದದ |
ಱಿಮ್ಮಗೆ ಪೆಱದಾವುದೆಂದು ರಾಗದಿನುತ್ಸಾ ||
ಹಮ್ಮಾಡಲ್ ನಾಮಿರ್ದೊಡೆ |
ನಮ್ಮೊ[18]ಕ್ಕಲ್ ಮಾರಿ ಬಾರಿ ಬಂದುದು ಕಾಣಾ || ೨೪ ||

ವ|| ಎನೆ ಪಾರ್ವನೆರ್ದೆಯೊಳ್ ಕಿಚ್ಚುರ್ಚಿ ಬಿೞ್ದಂತಾಗೆ ಜೋಗಂಬೋಗಿ ತಲೆಯಂ ಬಾಗಿ [19]ಮನ್ನುಮಿಕ್ಕು ಬಿಗುೞುತ್ತುಂ ಕಿಱಿದುಂ ಬೇಗ[20]ದಿನೞ್ವಿ ಪಾರ್ವಿತಿಯಂ ಸಂತಯ್ಸಿ ಕೇಳಿಮೆಂದಿಂತೆಂದಂ.

ಕಂ|| ಮಗನಂ [21]ಕೊಟ್ಟೇವಾೞ್ವೆಂ |
ಮೃಗನಯನೇ ಕುಡುವೆ[22]ನೆನ್ನನೆನ್ನಿಂ ಬೞಿಕು ||
ಬ್ಬೆಗದೆ ಕೆಲವಾನುದೆವಸಂ |
ಮಗಂಗೆ ನೀಂ ಮದುವೆಮಾಡು ಕಿಡಿಸದೆ ಮನೆಯಂ || ೨೫ ||

ವ|| ಎಂಬುದುಮಾ ಮಾತಿಂಗೆ ಪಾರ್ವಿತಿ ಮತ್ತೆ ಬೆರ್ಚಿ ನಿಮ್ಮಗಲ್ಕೆಯೊಳಾದ ದುಃಖಸಮುದ್ರಮು[23]ನೆಂತೀಸುವೆನೆಂದಿಂತೆಂದಳ್.

(1) ಮುನ್ನೆ (ಗ) (2) ಡಡಸಿದುಗ್ರ ಮಹಾಮುಖ (ಖ,ಗ) (3) ಪೆಲ್ಲಿಸಿ (ಕ,ಟ) (4) ಕಂಡಕಂಡರನೆ (ಗ) ಕಂಡರಂಬಿಡದೆ (ಟ) (5) ಯಪ್ಪುದೆಂ।ದೆಲ್ಲ (ಕ,ಗ,ಟ) (6) ಮಿಂತು (ಗ) (7) ಸೂಳ್ಗೆಯೋಗದಿಂ (ಕ, ಟ) (8) ದೆಲ್ಲಿಯೊ ಮತ್ತೆ ಬಂದ (ಕ) ದೆಲ್ಲಿಯು ಮತ್ತೆ ಬಂದು (ಗ,ಟ) (9) ಬ್ಬುದುಂ (ಖ,ಟ) (10) ಬಂದಾಪಾರ್ವನಂ ಕಾಣದಬ್ಬಾ (ಕ) ಕಾಣಬಾರದಬ್ಬಾ (ಗ) (11) ಮಗನ ಮೇಲೆ (ಕ,ಟ) (12) ಪೋದೊಡಾ ಪಾರ್ವಂತಿ (ಕ,ಗ) (13) ಬಿಟ್ಟೆಳಱಿ (ಗ) (14) ತಿರ್ಪನ್ನೆಗಂ (ಕ) (15) ಬಡಿದಳುತ್ತಿರೆ ಬೆಱಗಾಗಿ (ಕ) ಪೊಯ್ದುೞ (ಘ) (16) ರ್ದಲೆಯಿದೇ (ಗ) (17) ಯಿಂತೆಂದಳ್ (ಟ) (18) ಕ್ಕಲಮೇಲೆ ಮಾರಿ (ಘ) ಬಾರಿ (ಕ) (19) ಮನಮಿಕ್ಕಿ ಬೆಕ್ಕಸಮಾಗೆ ಮುಚ್ಚೆವೋಗಿ ಬಿೞ್ದು ಕಿಱಿದುಂ (ಗ) (20) ದಿನೆೞ್ಚತ್ತೊಳಱುಯಳುತ್ತಿರ್ದ (ಗ) (21) ಕೊಟ್ಟೊಡೆ ಬಾಳೆಂ (ಗ) (22) ನೆನ್ನ ನೀಂ ಬಳಿಕು (23) ನೆಂತುತೀರ್ಚುವೆಂ (ಟ)

ಕಂ|| ಪಲವುಂ ಕಾಲಂ ಪೋದು[1]ವು |
ಕುಲಮುಱಿದುದು ಮಕ್ಕಳಿಲ್ಲ[2]ಮೆಂದು ಕರಂ ಮ ||
ಮ್ಮಲಮಱುಗಿ ಬೞಿಕೆ ದೈವ |
[3]ಕ್ಕೊಲಿದಾಂ ಪೊಡೆವಟ್ಟು ಪರಸಿ ಪಡೆದೆಂ [4]ಸುತನಂ || ೨೬ ||

ಸುತನಂ ಕೊಟ್ಟೊಡೆ [5]ಬಾೞೆಂ |
ಪತಿ ನಿನ್ನಂ ಕೊಟ್ಟೆನಪ್ಪೊ[6]ಡೆಂತುಂ ಬಾೞೆಂ ||
ಪತಿಯುಂ ಸುತನುಂ ನಿಲೆ ಸಂ |
ತತಿ ನಿಲ್ಕುಂ [7]ಪೆಣ್ಣ ಬೞ್ದುದೇಂ ಬಾೞದುದೇಂ || ೨೭ ||

ವ|| "[8]ಆಂ ಪೋಪೆ" ನೆಂಬುದುಂ ಕೇಳುತ್ತುಮಿರ್ದ ಮಗಂ ಬಂದಿಂತೆಂದಂ—

ಕಂ|| ನಿಮ್ಮಿರ್ವರುಮುಳ್ಳೊಡೆ ಮ |
ತ್ತಮ್ಮಕ್ಕಳ್ಪಡೆವಿರಾನೆ ಪೋಪೆಂ [9]ನೀಮುಂ ||
ಕೆಮ್ಮಗಿರಿಮೆಂದೊಡಾಗಳ್ |
ತಮ್ಮಂ [10]ಪ್ರಚುರಾಗ್ನಿ ಕೊಂಡ ತೆಱದಿಂ[11]ದೞ್ತಿರ್ || ೨೮ ||

ವ || [12]ಅಂತು ಮತ್ತ ಮಿರ್ವರುಂ ಚೇತರಿ[13]ಸಿರ್ದಲ್ಲಿಗೇಗೆಯ್ವಮೆಂದಾಳೋಚಿಸುತ್ತಿರೆ ಪಾರ್ವತಿಯಿಂತೆಂಗುಂ "[14]ಎಲೆ ಪಾರ್ವಾ, ನಾಮುಲ್ತೆ ದೈವಕ್ಕೆ ಪರಸಿ ಪಡೆದೆವೀತನನಾದೇವತೆ ತಾನೆ ಕಾಗುಮಾದೇವತೆಗೊಪ್ಪಿಸುವಂ ಬನ್ನಿಂ" [15]ಎಂಬ ಬಾರಿಯನೀಗುವ ನಿಯೋಗದೊಳ್ ಪೊಱಮಟ್ಟು ಪೋಗಿ ದೇವಗೃಹಮಂ ಪೊಕ್ಕು "ಬಳಾರಿ, ನೀನಿತ್ತ ಕೂಸಂ ನಾಳೆ ರಕ್ಕಸಂ ಕೊಲ್ವೆನೆಂದಿರ್ದಪಂ. ಆತನನಾಂ [16]ಕಾಯಲಾರ್ಪೆಮೇ ಮತ್ತಮುಂ ನೀನೆ ಕಾವುದೆಂ"ದು ದೇವತೆಗೆ ಸುತನನೊಪ್ಪಿಸಿ ಬಂದು ಬಂಧುಗಳೆಲ್ಲಮುಱಿಯೆ [17]ಪೇೞ್ದು ಮತ್ತಮೆಮ್ಮುಳ್ಳರ್ಥಮೆಲ್ಲಮಂ ತವಿಸುವೆಂ. ನೀಮೆಲ್ಲಂ ಸಹಾಯರಾಗಿ ಬನ್ನಿ ಮಿಾಯುಪದ್ರವವಿನಾಶನಮುಮಾಯುಷ್ಯವರ್ಧನಮುಮೆಂಬ ಹೋಮಂಗಳಂ ಮಾಡುತಿರ್ಪೆಮೆಂದು ಗುಣವಂತರುಂ ವಿದ್ಯಾವಂತರುಮಪ್ಪ ಮಹಾಬ್ರಾಹ್ಮಣರಂ ನೆರಪುತಿರ್ದನನ್ನೆಗಮಾದೇವತೆ ಸನ್ನಿಹಿತೆಯಾಗಿ—

(1) ಮದು (ಕ,ಟ) (2) ದಿರ್ದು (ಕ) ಮೆಂದು (ಗ) (3) ಕ್ಕೊಲೆದಾಂ (ಖ) (4) ಮಗನಂ (ಕ) (5) ಬಾಳೇಂ (ಕ) (6) ಡಂತದು....ಳೇ (ಟ) (7) ಪೆಣ್ಣು ಬರ್ದುದೇಂ ಬಾೞದು (ಖ) ಬಳ್ದುದುಂ ಬಾಳ್ದುದು (ಛ) ಪೆಣ್ಣಬಾಳ್ಗದುಂ ಬಾಳದು (ಟ) (8) ಎಂಬುದಂಕೇಳ್ದು (ಕ, ಗ, ಫ) (9) ನೀಮಿಂ (ಗ,ಟ) ನಿಮ್ಮಿಂ (ಕ,ಜ) (10) ಪ್ರಳಯಾಗ್ನಿ (ಟ) (11) ದತ್ತೞ್ (ಗ) (12) ಅಂತೆಳುತ್ತುಮಿರ್ವರುಂ (ಕ,ಜ) ಅಳತ್ತುಮಿರೆಯಿರ್ವರುಂ (ಕ) ಅಂತಳ್ತುತಮ್ಮಿರ್ವರುಂ (ಛ) (13) ಸಿರ್ದು ಯಿನ್ನೇಗೆಯ್ವೆಮೆಂದಾಳೋಚಿಸುತ್ತಿರೆ ಬಗೆದು ಪಾರ್ವಂತಿಯಿಂತೆಂಗು (ಗ) ದಲ್ಲಿಗೇಗೆಯ್ವೆಮೆನುತ್ತುಂ ಬಗೆದು ಪಾರ್ವಂತೆ (ಖ) ನೇಗೆಯ್ವಮೆಂಬನ್ನೆಗಂ ಪಾರ್ವತಿ (ಘ, ಜ) (14) ಎಲೆನಾಱುಲ್ತೆದೇವತೆಗೆ (ಕ) (15) ಎಂಬ ಕಜ್ಜಮ ನೆತ್ತಿಕೊಂಡು ಮಗನನೊಡಗೊಂಡು ಪೋಗಿ ದೇವಗೃಹಮಂ ಪೊಕ್ಕು (ಕ,ಟ) (16) ನಾಮುಂಕಾಯಲಾರ್ಪೆಮಲ್ಲೆವು ನೀನೇ (ಕ) (17) ಪೇೞ್ದಿನ್ನುಳ್ಳುದೆಲ್ಲಮಂ ತವಿಸುವೆಂ (ಜ)

ಕಂ|| ಎನಗೆ ಪೊಡೆವಟ್ಟು ಪಡೆ[1]ದಾ |
ತನೂಜನಂ ಮಱಿಗೆ ವಂದನಂ ನೆಱೆಯೆ ಜಗ ||
ಜ್ಜನಮಱಿಯೆ ಬಂದು ಕೊಲ[2]ಲಿ |
ರ್ದನನುಂತುಂ ಕೊಲ್ವೆನೆಂತುಮಿವನಂ ಕಾವೆಂ || ೨೯ ||

ವ|| [3]ಎಂದು ದೇವತೆ ರಕ್ಕಸಂಗೆ ಮುಳಿದು ದೆಸೆದೆಸೆಗೆ ಮಸಗಿ ಮಾಣಿಯನಾ ಬೆಟ್ಟದಡಿಯೊಳಿರ್ದ ಪಿರಿಯಬಿಲದೊಳಗೊಯ್ದಿರಿಸಿ ಬಿಲದ ಬಾಗಿಲೊಳ್ ಪಿರಿಯದೊಂದು ಶಿಲೆಯಂ [4]ಕವಿದಿರಿಸಿ ನಿಶ್ಛಿದ್ರಮಾಗಿ ಮುಚ್ಚಿ [5]ಪೊಱಗಣ್ಗೆ ತನ್ನ [6]ದಿವ್ಯ ಗಣದೇವತೆಗಳಂ ಕಾಪುವೇೞ್ದು ದೇವತೆ ತನ್ನ ಮಾಯಾಬಲಮಂ ವಿಗುರ್ವಿಸಿ ರಕ್ಕಸನೊಳ್[7]ಕಾವಲೆಂದು ಪೋದಳ್. ಇತ್ತ[8]ಪಾರ್ವಂ ಬಲ್ಲರೆಲ್ಲರು ಮನೊಡಗೊಂಡು ಬಂದು ಮಗನಿರ್ದ ಬಿಲದಪೊಱಗೆ ಬಳಸಿಯುಮಿರ್ದು—

ರಗಳೆ—ಕೆಲರ್ [9]ಶಾಂತಿಯಂ ಮಾಡುವುದ್ಯೋಗದಿರ್ದರ್ ||
ಕೆಲರ್ ಪೌಷ್ಟಿಕಾರಂಭಸಂಯೋಗದಿರ್ದರ್ ||
ಕೆಲರ್ ಮಂತ್ರದಿಂ ರಕ್ಷೆಯಂ ಮಾಡುತಿರ್ದರ್ ||
ಕೆಲರ್ ತಂತ್ರಸಾಮರ್ಥ್ಯಮಂ [10]ಮಾಡುತಿರ್ದರ್ ||
ಕೆಲರ್ ಹೋಮಕಾರ್ಯೋತ್ತ[11]ಮ ಕ್ರಮದಿನಿರ್ದರ್ ||
ಕೆಲರ್ ಧ್ಯಾನವಿಧಿಯಂ ನಚ್ಚಿ ಕಾಯಲಿರ್ದರ್ ||
ಕೆಲರ್ ಜಪ[12]ಸಮಾಧಿ ಕ್ರಿಯೋದ್ಯಮದಿನಿರ್ದರ್ ||
ಕೆಲರ್ ದೇವತಾರಾಧನಾವಿಧಿ[13]ಯಿ ನಿರ್ದರ್ ||
ಕೆಲರ್ ನಚ್ಚುವಾ[14]ಶೀರ್ವಚೋರವದಿನಿರ್ದರ್ ||
ಕೆಲರ್ ಜಳದೊಳಘಮರ್ಷಣಂ[15]ಗೆಯ್ಯುತಿರ್ದರ್ ||
ಕೆಲರ್ ಬಲಿವಿಧಾ[16]ನಂಗಳಂ ಮಾಡುತಿರ್ದರ್ ||
ಕೆಲರ್ ಮಿಕ್ಕಸಕಲೀಕರಣದಿಂದ ಮಿರ್ದರ್ ||
ಕೆಲರ್ ದಶದಿಶಾಬಂಧನ ವಿಧಾನದಿನಿರ್ದರ್ ||
ಕೆಲರ್ ಮೋನದಿಂ ಸಾಧಿಸುವ ಬಗೆಯೊಳಿರ್ದರ್ ||

(1) ದನ (ಖ) ದಲ್ (ಗ) ದರ (ಚ) (2) ಲಿರ್ದನ ನಘನಂ ಸೋವೆ ನಿವನನೆಂತುಂ (ಕ, ಜ) ಸೋವೆ ಮಿವನ (ಖ) ಸಾವೆನೆಂತು (ಚ) (3) ಎಂದುಮಸಗಿ ಯಾಮಾಣಿಯ ನವನೀಧರದಡಿಯಪಿರಿಯ (ಕ,ಟ,ಜ) ಎಂದು ದೆಸೆದೆಸೆಗೆ ಮಸಗಿಯಾ ಮಾಣಿ (ಖ) ಎಂದು ದೇವತೆ ರಕ್ಕಸಂಗೆ ಮುಳಿದು ಮಾಣಿಯನಾ ಬೆಟ್ಟದಡಿಯಣ (ಚ) (4) ಗುದ್ದರಿಸಿ (ಟ) ಕವಿದುನಿಚ್ಚಿ (ಕ,ಖ) (5) ಪೊರಗಂ (ಕ) ಪೊಱಗಣೆ (ಖ) ಪೊರಗೆ (ಚ) (6) ದಿವ್ಯಗಣಮಂ ಕಾಯಲುವೇ (ಜ) ಕಾವಲಂಪೇೞ್ದು (ಟ) (7) ಕಾದಲ್ಪೋ (ಚ) (8) ಪಾರ್ವರೆಲ್ಲರುಮಾ (ಕ,ಟ) ಪಾರ್ವರ್ಸ ಮನೊಡ (ಜ) (9) ಶಾಂತಿ....ದಿರ್ದರ್ ಕೆಲರ್|| ಪೌಷ್ಟಿಕಾ....ದಿರ್ದರ್ ಕೆಲರ್ (ಖ, ಚ) (10) ನೋಡು (ಟ,ಜ) (11) ಮದೊಳಿರುತ್ತುಮಿರ್ದರ್ (ಜ) (12) ಸಮಾಧಾನ ವಿಧಿಯಿಂದಮಿರ್ದರ್ (ಕ,ಜ) ಸಮಾರಾಧನಾ ವಿಧಿಯಿನಿ (ಗ,ಚ) ಸಮಾಧಾರಣಾವಿಧಿ (ಛ) (13) ನಿಯಮ (ಕ,ಜ) (14) ಶೀರ್ವಚೋನಿಯಮದಿ (ಕ,ಚ) ಆಶೀರ್ವಾದದಿಂದ (ಗ) (15) ಮುಳುಗು (ಕ, ಟ, ಜ) (16) ನಂಗಳಿಂದುಳುಹಲಿರ್ದರ್ (ಖ) ಳಂನೆಗಳು ತಿರ್ದರ್ (ಕ,ಜ)

ಕೆಲರ್ ವೈರಿಗುಚ್ಚಾಟನಂಮಾ[1]ಡುತಿರ್ದರ್ ||
ಕೆಲರ್ ಪೂಣ್ದು ವಿದ್ವೇಷಣಂಮಾಡುತಿರ್ದರ್ ||
ಕೆಲರ್ ಸ್ತಂಭನದ ಯ[2]ಂತ್ರಮಂ ಬರೆಯುತಿರ್ದರ್ ||
ಕೆಲರ್ ಮೋಹನದ ಯಂತ್ರಮಂ ಬರೆಯುತಿರ್ದರ್ ||
ಕೆಲರ್ ಶತ್ರುಬ[3]ಲಮಾರಣಕ್ರಿಯೆಯೊಳಿರ್ದರ್ ||
ಕೆಲರ್ ವಶ್ಯಕರ್ಮಂಗ[4]ಳನೆ ಮಾಡುತಿರ್ದರ್ || ೩೦ ||

ಕಂ|| [5]ಅಂತಂದಿನ ದೆವಸಂ ಪಲ |
ರುಂ ತಂತಮ್ಮಱಿವ ಮಾಟಕ್ಕೆಯಿಂದಂ ಪೂಣ್ದೋ ||
ರಂತೆ ಮಹಾಯತ್ನದಿ ನ |
ತ್ಯಂತಂ ರಕ್ಷಿಸುತುಮಿರ್ದರಿರ್ಪನ್ನೆವರಂ || ೩೧ ||

ವ|| ಆ[6] ದೇವತೆಯುಂ ಮ[7]ತ್ತರಕ್ಕಸನೊಳನುವರಮಂ ಪೂಣ್ದು ಪೊ[8]ಣರ್ಚಿ ಭರಂಗೆಯ್ದೊಂದುದೆವಸಮೆಲ್ಲಂ ಕಾದಿ ಮಱುದೆವಸಮುವನನೋಡಿಸಿ ಗೆಲ್ದುರಾಗದಿಂ ಬಂದು ಆಪಾರ್ವಂಗಂ ನೆರೆದನೆರವಿಗಂ ರಕ್ಕಸನನೋಡಿಸಿದ ಸಾಹಸಮ[9]ನಱಿಯೆಪೇೞ್ದೊಡವರೆಲ್ಲರ್[10] ಚೋದ್ಯಂಬಟ್ಟು ಒಸೆದೊಸಗೆಯಂ ಕೊಂಡಾಡಿದಾಗಳಾ ದೇವತೆ "ನೀವಿಾ ನಿಮ್ಮ ಮಗನ ನೊಪ್ಪುಗೊಳ್ಳಿ" ಮೆನಲಾ ಬಿಲದ ಬಾಗಿಲೊಳ್ ಕವಿದಿರ್ದ ಶಿಲೆಯಂ[11]ತೆಗೆದದಱೊಳಗಂ ಪೊಕ್ಕು ನೋೞ್ಪಿನ ಮನ್ನೆಗಮಾ ಕುಮಾರನಂ ಪೆರ್ವಾವು ನುಂಗಿ ಸುಯ್ಯುತ್ತಿರ್ದುದಂ ಕಂಡು ಬೆರ್ಚಿ ಮಗುೞ್ದು ಬಂದು "ಎಲೆ ದೇವತೆ, ಪುಲಿಗಂಜಿ ಪುತ್ತನೇಱಿದೊಡಲ್ಲಿಯುಮರವಾವು ಕೊಂಡುದು" ಎಂಬಂತೆ ರಕ್ಕಸಂ[12]ಗಲ್ಕಿ ನಿನ್ನ ಮಱೆವೊಕ್ಕನಿತು ಕಾಪುವೆರಸಿರ್ದೊಡ ಮೆನ್ನ ಮಗನಂ ಪೆರ್ವಾವು[13]ನುಂಗಿ ಸುಯ್ಯುತ್ತಿರ್ದುದು" ಎಂದು ಪುಯ್ಯಲಿಟ್ಟೞ್ "ನಿಯತಿಃ ಕೇನ ಲಂಘ್ಯತೇ" ಎಂಬುದುಂ "ಮೃ[14]ತ್ಯುವೆಯ್ದೆ ವಂದೊಡಾರ್ಗಂ ಕಾಯ[15]ಲ್‌ಬಾರದು" ಎಂದು ದೇವತೆ ಪಾರ್ವನಂ ಪಾರ್ವಿತಿಯುಮಂ ಸಂತೈಸಿ ಪೋದಳ್— ಎಂಬೀ ಕಥೆ[16]ಯಂ ಜೀವಾ, ನೀನವಧಾರಿಸುವುದು—

ಕಂ|| ಮರಣಂ ಸಾರ್ಚಿದ ದೆವಸಂ |
ಶರಣುಂ ನಿನಗಾರುಮಿಲ್ಲ ಕೇಳ್ ನಿಶ್ಚಂತಃ ||
ಕರಣದೊಳಿರ್ದ ಜಿನೇಶ್ವರ |
[17]ಚರಣಮೆ ಶರಣಂ [18]ಮಹೋಗ್ರಮಘ ಕುಲಹರಣಂ || ೩೨ ||

(1) ಗೆಯ್ಯುತಿರ್ದ (ಕ) (2) ಯಂತ್ರದಧ್ಯಾನದಿರ್ದರ್ (ಕ) ಧ್ಯಾನಮಂ ನೆನೆಯು (ಖ) (3) ಜನ (ಕ,ಟ) (4) ಗಳನೊಡರ್ಚು (ಕ) (5) ಇಂತಂ (ಕ, ಟ, ಜ) (6) ಅನ್ನೆವರಂ ದೇವತೆ (ಚ) (7) ಮತ್ತಾ (ಕ) (8) ಪೊಣರ್ದು (ಕ) (9) ಮನಱಿಪಿದೊಡೆ (ಚ) (10) ರೆಲ್ಲಮೊಸೆದೊಸಗೆಯಂ (ಕ) ಯಂ ಕೊಂಡಾಡಿ (ಜ) (11) ಕಳೆದದಱೊಳಗಂ ನೊಳ್ಪನ್ನೆಗಮಾಮಾಣಿ (ಕ, ಗ) (12) ಗಂಜಿ (ಕ, ಟ) (13) ನುಂಗಿತ್ತೆಂದು (ಗ) (14) ಮಿೞ್ತು (ಮೃತ್ಯು) ವಡಸಿ (ಕ) (15) ಯಲರಿದೆಂದು (ಖ) (16) ಯಂನೀನವ (ಕ,ಜ,ಸ) (17) ಭರಣಮೆ (ಘ) (18) ಮಹೋಗ್ರಮಘಕುಲ ಎಂಬಲ್ಲಿ ಮಹೋಗ್ರಮೆಂಬುದು ಜಿನೇಶ್ವರಚರಣಕ್ಕೆ ವಿಶೇಷಣವಾಗುವುದು ಈ ಅರ್ಥವು ಅಸಾಧು, (ಮಹೋಗ್ರಾಘ – ಎಂದು ಸಮಸ್ತಪದವಾಗಿರದೆ ವ್ಯಸ್ತಪದವಾಗಿರುವುದರಿಂದ ಅಘಕುಲಕ್ಕೆ ವಿಶೇಷಣವಾಗುವುದಿಲ್ಲ– ಮಹೋಗ್ರಮಲಕುಲ– ಎಂಬ ಪಾಠವು ಸಾಧು)

ವ|| ಮತ್ತಂ "ಮರನನೇಱಿ ಕೆಯ್ಬಿಟ್ಟಂಗೆ ನೆಲನೆ ಶರಣ್" ಎಂಬಂತೆ ಮನುಷ್ಯಗತಿಯೊಳ್ ಪುಟ್ಟಿದವರ್ಗೆ[1] ಸದ್ಧರ್ಮಮೊಂದೆ ಶರಣಕ್ಕುಂ. [2]ಪೆಱತಾವುದುಂ ಶರಣಿಲ್ಲ. ಎಂಬುದಂ ಬಗೆದು [3]ನೋಡಾ !

ಉ|| [4]ಕಾವುವೆ ಮದ್ದುಗಳ್ ನೆಗೞ್ದ ಮಂತ್ರಪದಂಗಳು[5]ಮೇನೊ ಕಾವುವೇ |
ಕಾವುವೆ ರೌದ್ರದೇವತೆಗಳಶ್ವಗಜೇಂದ್ರಪದಾತಿವರ್ಗಮೇಂ ||
ಕಾವುವೆ ಕೋಂಟೆಗಳ್ [6]ಭಯದೆ ಪೊಕ್ಕಿರೆ ನೆಟ್ಟನೆ ಕಾಯಲಾರ್ಪುವೇ |
ಜೀವನೆ ಕಾಯಲಾಗ "ಜ[8]ವ" ನೆಂಬವನೆಯ್ತರೆ ಮೆಲ್ಪಡಲ್ ಗಡಾ || ೩೩ ||*

— ಇದು —

ಜಿನಶಾಸನ ಪ್ರಭಾಸನ ಶೀಲೋ[9]ದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

[10]ಅಶರಣಾನುಪ್ರೇಕ್ಷಾ ನಿರೂಪಣಂ

ಮಂಡಕೌಶಿಕ ಕಥಾವರ್ಣನಂ—

ದ್ವಿ ತೀ [11]ಯಾ ಧಿ ಕಾ ರಂ.



* ಸ್ವಪ್ನಂ ಯದೀಯಾ ಜನನೀ ಕ್ಷಪಾಯಾಂ ಗಜಾದಿವಷ್ಟ್ಯಂತಮಿಮಂ ದದರ್ಶ |
ಯತ್ತಾತ ಇತ್ಯಾಹ ಗುರುಃಪರೋಯಂ ನೌಮಿ ಪ್ರಮೋದಾದಭಿನಂದನಂ ತಂ ||
(ಈಜಿನಸ್ತುತಿಪದ್ಯವು– ಕ–ಚ–ಛ– ಪ್ರತಿಗಳಲ್ಲಿವೆ –ಉದಾಹರಣಕಥೆ–ಛ–ಪ್ರತಿಯಲ್ಲಿಲ್ಲ).

(1) ಧರ್ಮಮೊಂದೆ (ಕ) (2) ಪೆಱಉಶರಣುಂಟೆ (ಖ) ಪೆರತುಶರಣಿಲ್ಲ (ಕ) (3) ನಂಬಾ (ಗ) (4) ಕಾಉಮೆ (ಜ) (5) ಳವೇನೋ (ಕ, ಜ) (6) ನಯದಿ (ಖ) (7) ಲಾರ್ಕುಮೇ (ಕ) ಲಾರ್ಪುದೇ (ಗ) (8) ಮೃತಿ (ಕ,ಜ) (9) ದಿತಬಂಧು(ಕ,ಚ) (10) ಅಶರಣಾನುವರ್ಣನಂ ದ್ವಿತೀ (ಕ) ಅಶರಣಾಭಿಧಾನಂ(ಗ,ಚ) (11) ಯಾಶ್ವಾಸಂ (ಖ) ಅಶರಣಾನುವರ್ಣನಂ (ಛ,ಜ)

|| ತೃತೀಯಾಧಿಕಾರಂ ||

— ಏ ಕ ತ್ವಾ ನು ಪ್ರೇ ಕ್ಷೆ* —

ಕಂ|| ಓರ್ವನೆ ನರಕದೊಳಿರ್ದಂ |
ದೊರ್ವನೆ[1] ತಿರ್ಯಂಚನಾಗಿ ತಿರಿತರುತಿ[2]ರ್ದಂ ||
ದೊರ್ವನೆ[3] ಸಗ್ಗದೊಳಿರ್ದಂ |
ದೊರ್ವನೆ ಮನುಜತ್ವ[4]ಮೆಯ್ದೆವಂದೆಯ್ದಲೊಡಂ || ೧ ||

* ಈ ಸಂಸ್ಕೃತಶ್ಲೋಕ ಟೀಕೆಗಳು—ಜ, ಕ, ಚ, ಘ,— ಪ್ರತಿಗಳಲ್ಲಿ ಮಾತ್ರ ಇವೆ—

ನರೇಂದ್ರ ಸರ್ಪೇಶ್ವರನಾಕನಾಥೈರ್ವಾಣೀ ಭವಂತಾ ಜಗೃಹೇ ಸ್ವಚಿತ್ತೇ |
ಯಸ್ಯಾತ್ಮಬೋಧಪ್ರಥಿತಾ ಸಭಾಯಾಮಹಂ ಸುಪಾರ್ಶ್ವಂ ಸತತಂ ನಮಾಮಿ ||೧||

ಕೋ(ಹ್ಯಾ)ಪ್ಯಾಪ್ತಃ ಸ್ವಜನೋಽನುಗೋಽಸ್ತಿ ನ ಪರೋ ವಾ ಯಾತಿ ಜನ್ಮಾಂತರಂ |
ಜೀವೇ ಜನ್ಮನಿ ವಾತ್ರ ಮಿತ್ರನಿಕರೈಃ ಕಿಂನಾಶಿ(ಸಿ)ತಂ ವಾ ಹೃತಂ ||
ಚಿತ್ರಂ ಗಾತ್ರರುಜಾದಿಜಂ ಹೃದಯಜಂ ವಾಽಸಾತಮೇಕಸ್ತತೋ |
ಮೃತ್ಯೂತ್ಪತ್ತಿವಿವೃತ್ತಿಷು ಪ್ರಣಯಿನೋಽನ್ಯೇಽರ್ಥೇಷ್ವನರ್ಥೋನಿಜಃ ||೨||

ಟೀ || ಆಪ್ತಃ—ಆಪ್ತನಪ್ಪಂ, ಸ್ವಜನಃ—ನಂಟಂ, ಪರೋವಾ ಪೆಱಂ ಮೇಣ್, ಅನುಗಃ ಒಡವಪ್ಪಂ ಕೋಽಪಿ—ಆವನುಂ, ನಾಸ್ತಿ—ಇಲ್ಲ, ಜೀವೇ—ಜೀವನುಂ, ಯಾತಿ—ಪೋಗುತ್ತಿರಲು, ಅತ್ರಜನ್ಮನಿ ವಾ—ಈ ಭವದೊಳ್ ಮೇಣ್, ಮಿತ್ರನಿಕರೈಃ—ಎಲ್ಲಾ ಮಿತ್ರರಿಂ, ಕಿಂ ನಾಶಿತಂ—ಯೇಂ ಕಿಡಿಸಲ್ಪಟ್ಟುದೆ? ವಾ ಹೃತಂ – ಹಂಚಿಕೊಳಲ್ಪಟ್ಟುದೆ ಮೇಣ್, ಚಿತ್ರಂ – ಪಲತೆಱದ, ಗಾತ್ರರುಜಾದಿಜಂ—ಶರೀರದ ಕುತ್ತಂ ಮೊದಲಾದುದಱಿಂದಾದುದು, ಹೃದಯಜಂ ವಾ, ಮನದೊಳಾದುದು ಮೇಣ್, ಅಸಾತಂ—ದುಃಖಂ, ತತಃ—ಅದು ಕಾರಣದಿಂ, ಏಕಃ—ಜೀವನೊಂದೇ, ತಾನುಂ, ಮೃತ್ಯೂತ್ಪತ್ತಿ ವಿವೃತ್ತಿಷು—ಪುಟ್ಟುವುದು ಸಾವುದು ಎಂಬ ಸುತ್ತುಗಳೊಳು, ಅನ್ಯೇ—ಪೆಱತು, ಪ್ರಣಯಿನಃ—ಕೂರ್ಮೆಯನುಳ್ಳವರು, ಅರ್ಥೇಷು—ತನ್ನ ಧನಂಗಳೊಳು, ಅನರ್ಥಃ—ಧನಮನು ಪಾರ್ಜಿಸುವಾಯಾಸಂ ಪಾಪಮೆಂಬಿದು, ನಿಜಃ—ತನ್ನದು, (ಸುಖದುಃಖಂಗಳೊಳು ತಾನೊರ್ವನೆ ಎಂಬ ಏಕತ್ವಾನುಪ್ರೇಕ್ಷೆ)

(ಈ ಪದ್ಯಗಳೂ ಟೀಕೆಗಳೂ—ಘ—ಪ್ರತಿಯಲ್ಲಿಲ್ಲ, ಟೀಕೆ ಕ ಪ್ರತಿಯಲ್ಲಿಲ್ಲ)

ಸ್ವಜನೋ ವಾ ಪರೋ ವೇತಿ ನೋಕಶ್ಚಿತ್ ಪರಮಾರ್ಥತಃ ||
ಕೇವಲಂ ಸ್ವಾರ್ಜಿತಂ ಕರ್ಮ ಜೀವೇನೈಕೇನ ಭುಜ್ಯತೇ ||

(1) ತಿರಿಯ್ಚಂಚ (ಗ) ತಿರಿಕಂಗಳಾಗಿ (ಕ,ಟ,ಜ) (2) ತಿರ್ಪಂ (ಗ) (3) ಸುರಗತಿವೊಡೆದಂ (ಕ,ಟ,ಜ) (4) ಮೆಯ್ದೆ ಮುಂದೆಯ್ದುದೊಡಂ (ಕ) ವಂದೆಯ್ದಿದೊಡಂ (ಗ, ಟ) ಮೆಯ್ದೆ ವಂದಡಸಿದೊಡಂ (ಚ) ಮೆಯ್ದಿ ಮುಂದೆಯ್ದುವೊಡಂ (ಛ, ಜ) ದೆಯ್ದುವೊಡಂ (ಘ)

ತಾ|| ಎಲೆ ಜೀವಾ, ನಿನ್ನಿಂದಾರ್ಜಿಸಲ್ಪಟ್ಟ ಪುಣ್ಯಪಾಪಫಲಾನುಭವಮಂ ಗೆಯ್ವಲ್ಲಿ ನೀನೊರ್ವನಲ್ಲದೆ ನಿನಗೆ ಸ್ವಕೀಯರಪ್ಪ ಕಳತ್ರಪುತ್ರಾದಿಗಳುಮನ್ಯರಪ್ಪ ಪರಿವಾರಜನಮುಃ ಸಹಾಯರಲ್ತೆಂದು ಬಗೆದು ತದ್ವ್ಯಾಮೋಹಮಂ ಬಿಟ್ಟೇಕತ್ವಮಂ ಭಾವಿಸಲ್ವೇಱ್ಕುಮೆಂಬೀ ಸೂತ್ರಾನುಸಾರಮಾದ ದೃಷ್ಟಾಂತ ಕಥಾನಿರೂಪಣಂಗೆಯ್ವೆನದೆಂತೆನೆ—

ಉ|| [1]ಗರ್ವಮಡಂಗಿ ಗರ್ಭದೊಳಗೊರ್ವನೆ ದುಃಖಮನುಂಡೆನಂತೆ [2]ಬಂ |
ದೊರ್ವನೆ ತೊಟ್ಟಿಲೊಳ್ [3]ಬಳೆದೆನೊರ್ವನೆ [4]ಯೌವನನಾದೆನಾಗಿ ಮ ||
ತ್ತೊರ್ವನೆ ಮುಪ್ಪಿನೊಳ್ ನಮೆದೆನೊರ್ವನೆ ಸಾವೆಡೆಯಲ್ಲಿ ನೆಟ್ಟನಿಂ |
ತೊರ್ವನೆ ಚಿಂತೆಗೆಯ್ ನಿನಗೆ ನೀನೆ ಪೆಱರ್ [5]ನಿನಗಿಲ್ಲ ಜೀವನೇ || ೨ ||

ವ|| ಇಂತು ನಾಲ್ಕುಂ[6]ಗತಿಗಳೊಳ್ ಎಲ್ಲಿಯುಂ ಪುಟ್ಟು[7]ವಂದುಂ ಬಳೆವಂದು ಮಾಗಳೆ ಸಾವಂದುಂ ಆತ್ಮನೊರ್ವನೆಂಬುದಂ ಬಗೆವುದು. ಪೆಱವು ಸಂಬಂಧದೊಳೇಂ ಪುಣ್ಯಬಂಧಮೊಂದನೆ ಪಡೆವೆನೆಂಬೇ[8]ಕತ್ವಭಾವನೆಯಂ ಭಾವಿಪುದು—

ಕಂ|| ಎನ[9]ಗಾನೆ ಪಗೆವನೆಂ ಮ |
ತ್ತೆನಗಾಗೆ ಕಡಂಗಿ ಕೂರ್ಪ ಕೆಳೆಯನೆ [10]ನಿನ್ನಿಂ ||
ದೆನಗೆ ಗುಣದೋಷಮೆರಡುಂ |
ಜನಿಯಿಸುವುದಱಿಂದಮೊರ್ವನಲ್ಲದೆ ಪೆಱರಾರ್ || ೩ ||

ಉ|| ಒರ್ವನೆ ಮುನ್ನನಂತ ಭವದೊಳ್ [11]ತಿರಿವಾಗಳದಲ್ಲದೀಗಳಾ |
ನೊರ್ವನೆ ಬರ್ಪ ಕಾಲದ ಭವಾಂತರದೊಳ್ ಸಮ[12]ಕಟ್ಟೆ ಪುಟ್ಟುವಂ ||
ದೊರ್ವನೆ ನೆಟ್ಟನೀ ತೆಱದಿನಾಗಳು ಮೆಲ್ಲಿಯುಮೆಲ್ಲ ಮಾಱ್ಕೆಯಿಂ |
ದೊರ್ವನೆ ನಿಕ್ಕುವಂ ಪೆಱರೊಳೇ [13]ನೆನಗೆಂಬುದು ಭವ್ಯಜೀವನೇ || ೪ ||

ವ|| ಇಂತತೀತಾನಾಗತವರ್ತಮಾನಮೆಂಬ ಮೂಱುಂಕಾಲದೊಳಮಾತ್ಮ[14]ನೊರ್ವನೆ [15]ಯೆಂಬುದಂ ನಿನ್ನೊಳೇಕಾಗ್ರಚಿತ್ತದಿಂ ಬಗೆದು ನೋಡಾ !

ಕಂ|| ಎನ್ನೊಳ್ ಪುದು[16]ವಾಱ್ವೀ ಮೆ |
ಯ್ಯೆನ್ನಿಂ[17]ಗೆಂಟಪ್ಪುದೆಡಱೊಳೆಂದೊಡೆ ಪೆಱರಾರ್ ||
ಇನ್ನೆನಗೆಲ್ಲಿಯುಮೊರ್ವನೆ |
ಸನ್ನುತ ಜಿನಧರ್ಮಮೊಂದೆ [18]ನೆರಮೆನಗಕ್ಕುಂ || ೫ ||

---

(1) ಗರ್ಭ (ಗ) ಗಬ್ಬ (ಛ) (2) ಮತ್ತೊರ್ವನೆ (ಗ) (3) ಪದಿವೆ (ಟ) (4) ಜವ್ವನನಾ (ಛ) ಬಳೆದುಮೊರ್ವನೆ (ಟ) (5) ನೆರಮಿಲ್ಲ (ಗ) ಪೆರಂನೆರಮಿಲ್ಲ (ಟ) (6) ಗತಿಯೊಳ್ (ಕ,ಜ) (7) ವುದುಂ (ಗ) (8) ಕತ್ವಮಂಭಾವಿಸು (ಕ,ಛ,ಜ) ತತ್ವಮೊಂದನೆ ಭಾವಿಪುದು (ಗ) (9) ಗಾನೋಪಗೆವಂ (ಟ) (10) ನೇನಿಂದೆ (ಕ) ಮತ್ತಂತೆ (ಖ) ಯೆನ್ನಿಂ (ಗ) (11) ತಿರಿಕಂಗಳ (ಗ) (12) ಕಟ್ಟುವಂದೆ ಮತ್ತೊರ್ವ (ಗ, ಛ) (13) ನೆವಗೆ (ಗ) ಳುಂವನಗೆ (ಟ) (14) ಮಾನೊರ್ವನೆ (ಘ) (15) ಯೆಂಬುದಂ ನಿನ್ನೊಳೇನಱಿಯಲಾಗ (ಕ,ಟ,ಜ) ಬೇಕತ್ವಮಂ ಭಾವಿಸಿ ನಿಮ್ಮೊಳೇಕಾಗ್ರ(ಗ,ಛ) (16) ವಾಳ್ವಮೆಯ್ಯೆನ್ನಂಗೆಟ್ಟಪ್ಪು(ಟ) ಬೇಱಪ್ಪು(ಜ) (18) ನೆರಮಾಗಿರ್ಕುಂ (ಕ,ಜ) ಶರಣೆನಗಕ್ಕುಂ (ಜ,ಗ)

ವ|| ಬೇಱಿಲ್ಲದೆ ಬೆರಸಿ[1]ರ್ದೀ ಮೆ[2]ಯ್ಯುಮೆನಗೆಡಱಿಶೂಳಾಗದು. ಧರ್ಮಮೊಂದೆ[3]ಶರಣ ಮಕ್ಕು[4]ಮೆಂಬುದಂ ನಿಶ್ಚಯಿಸಿ ಮತ್ತಮಿಂತೆಂದು ಬಗೆವುದು.

ಉ|| ಮುನ್ನಿನ ಜನ್ಮದೊಳ್ ನೆಗೞ್ದ ದುಶ್ಚರಿತಂಗಳೊಳಾದ ಪಾಪದಿಂ |
ದೆನ್ನನವುಂಕಿ ಬಂದಲೆವ ದುಃಖಮನಂದಿನ ನಂಟರಪ್ಪವರ್ ||
[5]'ಬನ್ನಿ ಮಿವಂಗೆ ಸೇದೆ ಯಿದನೀಗಳೆ ನೆಟ್ಟನೆ [6]ಪಚ್ಚಿಕೊಳ್ವ'ಮೆಂ |
ಬನ್ನರನೆಲ್ಲಿಯುಂ ಪಡೆಯದೊರ್ವನೆ ದುಃಖಮನುಂಡು ಬರ್ದಿದೆಂ || ೬ ||

ವ|| ಎಂಬು[7]ದಂ ಬಗೆದು ದು[8]ರ್ಮೋಹಮಿಲ್ಲದೆಯುಂ, ಪಾಪಕ್ಕಲ್ಲದೆಯುಂ ನೆಗೞ್ವುದು ಅಂತುಮಲ್ಲದೆಯುಂ—

ಕಂ|| ಓಡುವೊಡ [9]ಮಣ್ಮೆಗೆಲ್ಲಂ |
ಮಾಡುವೊಡಂ ಮೋಹಪಾಶಮಂ ಸಲೆ ಪಱಿದೀ ||
ಡಾಡುವೊಡಂ [10]ಗುಣಗಣದೊಳ್ |
ಕೂಡುವೊಡಂ ನೆಟ್ಟನೊರ್ವನೆಂಬುದನೆ(ನ್ನಾ)ನ್ನಂ || ೭ ||

ವ|| [11]ಅಂತೆನ್ನದುದ್ಧತರಾಗಿರ್ಪರೇಕೆ ? ಆಕಾಶಂ ಮೇಲೆ [12]ಕವಿದೊಡೆ ಮರಲ್ಚಿ ಕಾಲ ಲೊದೆವೆನೆಂದು ಕಾಲಂ ನೆಗಪಿರ್ಪ ತೀತಕಿಯಂತೆ ನಿಮ್ಮ [13]ಬೆಸೆದಿರ್ಪುದಕ್ಕೆ ಜವ[14]ನಟ್ಟುವನೆ ಮರುಳಾಗದಿರಿಂ—

ಚಂ|| ಎನಗೆನಗೆಂಬು ಬಂದೊಡಮೆಯ್ಯಂ ತಿನಲೆಂದೊಸೆದಿರ್ಪರರ್ಥಮು |
ಳ್ಳನೆಗ [15]ಮಡುರ್ತು ಬಂದು ತುದಿಯೊಳ್ [16]ಜವನೆಂಬ ಮಹೋಗ್ರರಾಕ್ಷಸಂ ||
ತನಗಿನಿ[17]ಸಪ್ಪೊಡಂ ಕರುಣಮಿಲ್ಲದೆ ಕೊಲ್ವೊಡೆ ನೋಡುತಿರ್ಪರೊ |
ರ್ವನೆ ಮಡಿ[18]ಗುಂ ದಲೆಂದು ಬಗೆದಿಂ ನಿನಗಪ್ಪುದನಪ್ಪುಗೆಯ್ ಗಡಾ || ೮ ||

ವ|| ತನ್ನಂ ಕೊಲಲ್[19]ಪತ್ತಿದ ಮೃತ್ಯುವುಮಂ, [20]ದ್ರವ್ಯಮಂ ಕೊಳಲ್ಮುತ್ತಿದ ನಂಟರುಮಂ ನಂಬಿದೊಡಿಂಬಱಿಯದಿರ್ಕುಮೆ ?

---

(1) ರ್ದ (ಖ, ಗ) (2) ಯ್ಯನ (ಛ) (3) ನೆರಮಕ್ಕು (ಕ) (4) ಮೆಂದು ಮತ್ತಮಿದಂ ಬಗೆವುದು (ಕ,ಟ,ಜ) (5) ಬನ್ನಿನಿವಂಗೇಸದೆ (ಕ) ಬನ್ನಿರಿ ಮೆಲ್ಲರುಸೆಡೆಯ ನೀಗಳೇ(ಟ) (6) ಪಚ್ಚುಕೇಳ್ವ (ಕ, ಗ, ಜ) (7) ದನಱಿದು (ಕ) (8) ಮೋಹ (ಕ, ಜ) (9) ಮುಣ್ಮೆ (ಕ, ಜ) (10) ಗುಣದೊಳ್ ಸಲೆ (ಛ) (11) ಎನ್ನದು (ಕ) ಎನ್ನದುದ್ರುತ (ಛ) (12) ಕವಿದೊಡಮರಳ್ದೊದವೆ (ಕ,ಜ) ಗೆಡೆದೊಡೆ ಮರಳಲೊದೆವೆ(ಛ) (13) ಬೆಸನಕ್ಕೆ ಮೃತ್ಯು (ಜ) ಬೆದರ್ಕೆಗೆ ಮೃತ್ಯು (ಘ) ನಿಮ್ಮೆಸಕಕ್ಕೆಜವ (ಗ) (14) ನಂಜುವನೆ (ಜ) (15) ಮಡರ್ತು (ಛ) (16) ಮೃತಿಯೆಂಬ (ಕ, ಜ) (17) ಗಿಸಿತ (ಕ) (18) ಡಿವಂ (ಕ, ಗ, ಜ) (19) ಮುತ್ತಿತ (ಗ) ನೆರವಿಯು (ಖ) ನೆರವಿಯು ಪಗೆವಿಯುಮಂ (ಛ) (20) ದ್ರವ್ಯಂಗಳೊಳ್ಪತ್ತಿದ(ಟ) ದ್ರವ್ಯಗೊಳಲ್ (ಛ) ದ್ರವ್ಯಗಳಲ್ಮುತ್ತಿದ (ಘ)

ಕಂ|| ಒಂದೆ ಕಳತ್ರಂ ಕಿಡಿಸುಗು |
ಮೊಂದೆ ಕರಂ ಪೊಲ್ಲಕೆಯ್ಗುಮಾ ಮೆಯ್ಯೆನಗಿ ||
ನ್ನೊಂದೆ ಜಿನಧರ್ಮಮ[1]ಲ್ಲದೆ |
ಯೊಂದುಂ ನೆರಮಲ್ಲಮೆಂದು [2]ಬಗೆ ನೀಂ ಮನದೊಳ್ || ೯ ||

ವ|| ಕಿಱುದೆಡೆ[3]ಯೊಳಂ ಬಟ್ಟೆಯೊಳೊಡವೋದರ್ ಮೊದಲಾಗಿಯುವೆಲ್ಲಮಾದುದನಪ್ಪರ್ ನಿನ್ನೊಳ್ ಪತ್ತಿರ್ದ ಮೆಯ್ಯುಂ ಸುತ್ತಿರ್ದ ನಂಟರುಮಾಗದುದನಱಿದುಮತಿಮೋಹದಿಂದಾಸೆವಡುವುದೇಕೆ ?—

ಮ|| ಧನಮೊಂದಿಂದ್ರಿಯದರ್ಪಮೊಂದು ಮುಳಿಸೊಂದುತ್ಸಾಹಮೊಂದೀ ಸುಹೃ |
ಜ್ಜನಸಂಬಂಧಮಿದೊಂದು ದುರ್ವ್ಯಸನಮೊಂ[4]ದುಕೆರ್ೂಂದು ಸೊಕ್ಕೊಂದು ಬೆ ||
ಳ್ತನಮೊಂದಿನಿತೆಲ್ಲ ಮೆನ್ನನಲೆಯಲ್ಕೆಂದಿರ್ಪುವಾ ನೊರ್ವ[5]ನಿ |
ನ್ನೆನಸುಂ ಮಾಣ್ದಿರಲಾಗದೆಂದು ತಱಿಸಲ್ ನೀಂ ಮೆಲ್ಪಡಲ್ ಜೀವನೇ || ೧೦ ||

ವ || ಪಗೆವರ್ ಪಲರಪ್ಪುದುಮಾನೊರ್ವನೆ ಯುಪ್ಪುದುಮೊಳ್ಪಿತ್ತಾಯಿತ್ತೆ[6]ನ್ನಾರ್ಪಂ ತೋರ್ಪೆನೆನ್ನದೊಡಂ ಬಹುವಿಧದಿಂ ಗತಿಯ[7]ನುಱಿಯಲಿರ್ದ ಸಂಸಾರಮುಂ ಗೆಲಲಾನೊರ್ವನೆ ಸಾಲ್ವೆನೆನ್ನದೊಡಮಾತನಣ್ಮು ಮಿಾತನಱಿವು[8]ಮೆಂತೊಪ್ಪುಗುಂ—

ಕಂ|| ಆನೊರ್ವನೆಲ್ಲತೆಱದೊಳ |
[9]ಮೇನಿಂ ಪೆಱದೆನಗೆ ಕರ್ಮಮುಂ ಕಿಡಿಸುವೆನೆಂ ||
[10]ಬೀ ನೆಱೆ ಕಜ್ಜಮೆ ನೆಟ್ಟ[11]ನೆ |
ತಾನೊಂದೆ ದಲೆನ್ನ ನಿನ್ನ ಮನದೊಳ್ ಜೀವಾ || ೧೧ ||

ವ || [12]ಸುರಿಗೆಗಾಳೆಗಂ [13]ಗಾದುವಂಗೆ ಬಳಸಿಯುಂ ನೋಲ್ಪ ನೆರವಿ ನೆರಮೆ ? ತಾನೊರ್ವನೆ ದುಃಖಮುನನುಭ[14]ವಿಸುವಲ್ಲಿಯುಂ ಅದಂ ಕಿಡಿಸುವಲ್ಲಿಯುಂ ಬಳಸಿಯುಮಿರ್ದ ನಂಟರೆಲ್ಲಂ ನೆರಮೆ ? ತಾನೊರ್ವನೆ ಯೆಂಬುದುಮಂ ಭಾವಿಸಿ ಮತ್ತಂ ಮನದೊಳ್ನೆಟ್ಟನಱಿದಿಂತು ಭಾವಿಸಿ ಸುಖಮುಂ ಕೆಯ್ಕೊಳ್ವಾ !

---

(1) ಲ್ಲದುದೊಂದುಂ (ಕ, ಜ, ಛ) (2) ಬಗೆವುದು ಜೀವಾ (ಛ) (3) ಯೊಳೊಡವಟ್ಟೆವೋದರುಮೆಲ್ಲ ಮಾದರಪ್ಪರೆನಿನ್ನೊ (ಜ) ಯೊಳೊಡವೋದರುಮುಂ ಬೇಱೆಂಬುದನಱಿದು ನಿನ್ನೊ (ಕ) ಡೆಯನೆಡೆವಟ್ಟೆವೋದರೆಲ್ಲ ಮಾಗಮುದನಪ್ಪರ್ (ಛ,ಜ) (4) ದುಸೊಕ್ಕೊಂದು ಬೆಳ್ತನಮೊಂದಿ | ತಿನಿತೆಲ್ಲಳ್ತನಮೊಂದಿ (ಕ) ದುದಕ್ಕೊಂದ ಕ್ಕೊಂದು ಸೊಕ್ಕೊಂದು ಬೆಳ್ತನ (ಛ) ದುರ್ಬೆಸನಮೊಂದಕ್ಕೊಂದು ಲೌಕಿಕಬೆಳ್ತನ (ಟ) ದಕ್ಕೊಂದು ಬೆಳ್ತನ ಮೊಂದಿನಿ (ಜ) ದುರ್ವ್ಯಸನಮೊಂದಕ್ಕೊಂದು ಬೆಳ್ತನಮೊಂದಿಂತೆನಿತಾನುಮೆನ್ನಗಳಿ (ಛ) (5) ನೆಂದಿನಿಸುಂ (ಗ) (6) ನ್ನಾರ್ಪುದಂತೋ (ಛ) (7)ನಳಿಯಲಿ (ಗ) ನಱುಯಲಿ (ಛ) (8) ಮೆಂತೆಸೆಯಲಾರ್ಕುಂ (ಕ, ಟ) (9) ಮೇನೊಂದುಂ ತೊದಳಿಲ್ಲ (ಛ) (10) ಬೀನುತಕಾರ್ಯಮೆ (ಕ, ಛ) (11) ನೆನಿನ್ನೀನಯಮನದೊಳಿವನೆ ಭಾವಿಸು ಜೀವಾ (ಕ,ಗ) ತಾನೊಂ ತಾನೊಂದಲೆನ್ನ ನಿನ್ನ ಮನದೊಳ್ ಜೀವಾ (ಖ) ತಾನೊಂದಿರಲೆನ್ನ ನಿನ್ನ (ಟ) (12) ಸುರ (13) ಗಾಡುವಂಗೆ (ಕ,ಟ) ನಾಡುವಾತಂಗೆ (ಛ) (14) ವಿಸಿಯುಣ್ಬಲ್ಲಿಯುಂ (ಕ) ನೆಂದು ಭಾವಿಸಿ ಮತ್ತಂ ಮನದೊಳಿಂತೆಂದು ಬಗೆದು (ಕ,ಜ)

ಮ|| ತಱಿಸಂದೇಕವಿಹಾರಿಯಪ್ಪು[1]ದುಮನೇಕೈಶ್ವರ್ಯ ಮಾಮೆಯ್ಯುಮಂ |
ತೊಱೆದಿರ್ಪಂದಮೆ ಕಾರ್ಯಸಿದ್ಧಿ ಸಫಲಂ [2]ದುಃಖಂ ಮಲಕ್ಷೀಣದಿಂ ||
ನೆಱೆದಾಯುಷ್ಯದಿನೊಪ್ಪೆ ಸಾವಡಸೆ ಸರ್ವತ್ಯಾಗದೊಳ್ಪಿಂಗೆ ತಾಂ |
ಗುಱಿಯಾಯ್ತೆಂದೊಸೆವಂಗೆ[3]ರಲ್ಬುವದೊಳಂ [4]ಸೌಖ್ಯಂ ಕರಂ ಜೀವನೇ || ೧೨ ||

ವ|| ಶುದ್ಧ ಚಾರಿತ್ರದೊಳೊರ್ವನೆ ವಿಹಾರಿಸುವು[5]ದು. ಅನೇಕ ರಾಜ್ಯಭೋಗಮೆಂದು ಬಗೆವೊಡಂ [6]ನಿವೃತ್ತಿಯೇ ಕಾರ್ಯಸಿದ್ಧಿಯೆಂದು [7]ವೊಸೆವೊಡಂ [ಸಾವೆಯ್ತಂದೊಡಂ ಸರ್ವತ್ಯಾಗಂಗೆಯಲ್ಕೆಡೆ[8]ಯನೆಂ ದುಃಖದ ಭರಮಂ ಮುನ್ನೆರಪಿದ ಶುಭಕರ್ಮಮುಂಟೆಡಂ ತಪ್ಪಿಸಲ್ಬಾರದೆಂದು ಸೈರಿಸುವೊಡಂ] ತಾನುಂ ಪಡೆವೆನೆಂದು ಮುಚ್ಚಿ ಪರಿಚ್ಛೇದಿಸಿ ಪದುಳಮಿರ್ಪೊಡ ಮಿಲ್ಲಿಯೆ ನೀಂ ಸುಖಿ[9]ಯಪ್ಪೆ ಮೇಗಣ ಸುಖಮ[10]ನೇವೇಲ್ಬುದೊ !

ಕಂ|| ಮುಳಿಸೊಸಗೆಗಳಂ [11]ನಿನ್ನಿಂ |
ಕಳೆದು ಕರಂ ತಿಳಿದು ಮನಮ[12]ನಾಱಿಸಿ ಗುಣಮಂ ||
ಕಳೆದು ಸುಖದೊಂದು ಬೆಳಸಂ |
ಬೆಳೆದು ಮನೋಮುದದಿನಿರ್ಪುದೊಂದನೆ ಬಗೆಯಾ || ೧೩ ||

ವ|| ಕೆಯ್ಯ ಮರಗಸಂ ಪುಲ್ಲಸಮೆಂ[13]ಬೆರಡುಮಂ ಕಳೆದು ಪದದೊಳ್ ಬಿತ್ತಿದೊಡಂ, [14]ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧ [15]ಚಾರಿತ್ರದೊಳ್ ಪತ್ತಿದೊಡಮಾತಂಗೆ ಬೆಳಸುಮಿಾತಂಗೆ ಸುಗತಿಯು[16]ಮೆಂತಕ್ಕುಮೆಂಬುದಂ ಬಗೆವುದು.

ಮ|| ಇವು ದೋಷಂ[17]ಗಳಿನಪ್ಪ ದುಶ್ಚರಿತ[18]ಮೆಂದಿನ್ನಂತರ(ವ)ಂ ಪಿಂಗಿಸು |
ತ್ತಿವು ಮಿಕ್ಕೊಳ್ಗುಣಮಿಾ ಗುಣಂಗಳೆನಗೀ ಕಾರ್ಯಂಗಳಿಂದಕ್ಕುಮೆಂ ||
ದವಱೊಳ್ ಕೂರ್ತೆಸೆದಾತ್ಮ ಪತ್ತಿ [19]ನೆಗಱಿಂ ನೀಂ ಬಲ್ಲೆ ನಿನ್ನಂ ಭವಾ |
ರ್ಣವದಲ್ಲಿಕ್ಕುವೊಡಂ ಸುಖಾಂಬುನಿಧಿಯತ್ತೆಣ್ಗೊಯ್ವೊಡಂ ಜೀವನೇ || ೧೪ ||

ವ|| ದುಷ್ಟನಿಗ್ರಹ ಶಿಷ್ಟ ಪ್ರತಿಪಾಲಕನಪ್ಪರಸಲ್ಲದನರಸುಗೆಯ್ವನುಂ, ದೋಷವಿರಕ್ತನುಂ, ಗುಣಾನುರಕ್ತನುಮಲ್ಲದೆ ಧರ್ಮಂಗೆಯ್ವನುಂ ಎಂತು ಪೆರ್ಚುಗುಂ ? ಅಂತು ಗುಣದೋಷಂಗಳ ಫಲಾಫಲಂಗಳನಿಲ್ಲಿಯೆ ಕಾಣಲಾಗ—

(1) ದೆನಗೆಕೈಶ್ವರ್ಯ (ಖ,ಛ,ಗ) (2) ದುಷ್ಕರ್ಮದಕ್ಷೂಣ (ಛ) (3) ತದ್ಬವದೊ (ಖ) (4) ಸೌಖ್ಯಾವಹಂ (ಛ) (5) ದನೇಕ ಭೋಗದ ರಾಜ್ಯಮೆಂದು ಬಗೆಯದೊಡಂ (ಕ,ಟ) ಬಗೆವೊಡಂ (6) ನಿರ್ವೃತಿ (ಖ) (7) ಬಗೆಯದೊಡಂ (ಕ) (8) ಲ್ಕೆಡೆಯಂಪಡೆವೆ (ಕ) ಲ್ವದೆಯದೆತ್ತಾನುಂ (ಛ) ಭರಪಂ (ಕ,ಖ) ಫಲಮುಂ ನೆರಪಿದ ಕರ್ಮ (ಛ) ಶುಭಕರ್ಮವನುಂಡುತಪ್ಪುದೆಂದು (ಕ) ಶುಭಕರ್ಮದುದಯಮೆಂದು (ಚ) ಕರ್ಮಮುಂಟೆಂದು (ಛ) (9) ಯಕ್ಕುಂ (ಕ) (10) ನೇವೊಗಲ್ಬುದೋ (ಚ) ನೆಗಲ್ಬುದು (ಛ) (11) ತನ್ನಿಂ (ಕ,ಜ) (12) ನಾರಿಸು (ಕ) (13) ಬೆರಡಂ (ಕ) (14) ಮನದ (ಕ,ಗ) (15) ಚಾರಿತ್ರಮುಂ (ಕ) (16) ಮೇಕಕ್ಕು (ಕ) (17) ಗಳು ಬರ್ಪ (ಕ,ಜ) (18) ಮಿಂತೆಂದಂದವಮಂ (ಕ) ತಾಮೆಂದಂತವಂ (ಛ) ತಾಮಿಂತೆಂದವಂ (ಛ) (19) ನೆಗಳಿನೇ ನಿನ್ನಂಭವಾ (ಕ) ನೆಗಱಾನಾನಿನ್ನಂ ಭವಾ (ಚ) ನೀನಿನ್ನನಿಂನೀಂಭವಾ (ಛ)

ಕಂ|| ಆಯುಂ ಸೊಗಯಿಪ ರೂಪುಂ |
ಶ್ರೀಯುಂ ಪೇೞ್ದಪ್ಪುವಱಯೆ ಪುಣ್ಯ[1] ಮನವು ಕೆ ||
ಟ್ಟಾಯಾಸಮಱಪೆ ಪಾಪಮ |
ನೀಯೆರಡಂದಮನಱದುಮಱಯೈ [2] ಜೀವಾ || ೧೫ ||

ವ|| ಸಿರಿವಂತರುಮಂ ಬೆಳೆದ ಕೆಯ್ಯುಮಂ ಕಂಡಿದು ಮುನ್ನಿನ ಧರ್ಮದ ಫಲಮಿದಾರಂಭದ ಫಲಮೆಂದು ನಂಬುವುದು,[3] ಕಿಸುಗುಳನಪ್ಪ[4] ಬೈಕಂಗುಳಿಯುಮಂ; ಕಟ್ಟಪಟ್ಟ ಕಳ್ಳನುಮಂ[5] ಕಂಡಿದು ಮುನ್ನಿನ ಪಾಪದ ಫಲಮಿದೀಗಳಿನ ದೋಷದ ಫಲಮೆಂದು ಬಗೆದಱದು ನೆಗೞ್ವುದು ಗಹನಮೆ ? [6] ನೀನೊಳ್ಪಿತಪ್ಪ ನೆಗೞ್ತೆಗೇಕೆ [7] ಬೆರ್ಚುವೈ ? ಜೀವಾ—

ಚಂ|| ಒಡಲೊಡಲೋಳಿಯಂ [8] ಬರಿಸದಂತಿರೆ ತಪ್ಪದೆ ತಪ್ಪದಪ್ಪದೇ |
ತಡೆಯದೆ ಕುಂದುವಾಯುಗಳನಾಯುವೆ ಪೋದುದೆ ಪೋದುದಪ್ಪದೇ ||
ತಡೆದಿರ[9] ದಂತಿವಂ ಕಳೆವ ಕಜ್ಜಮನೊಂದನೆ [10] ಮಚ್ಚಿ ಬೇಗದಿಂ |
ದೊಡರಿಸು ಜೀವ ನೀನೆ [11] ನಿನಗಲ್ಲದೆ ಪೇೞ್ ಪೆಱರಾರೊ ತಿರ್ದುವರ್ || ೧೬ ||

ವ|| ಇದಿರೊಳಿರ್ದ ಪಗೆಯಂ ಗೆಲಲೆಂದಿಸುವಾತನ ಕೆಯ್ಯಂಬಿನ ಪೋಗುಮಂ, ಪಿರಿದಪ್ಪಲಾಭಮಿಾವ ಮಾಱಂಗೆ ಕುಡುವ [12] ಸ್ವಲ್ಪದ್ರವ್ಯದ ಪೋಗುಮಂ ಪೋದುದೆಂಬುದೇ ? ಧರ್ಮಮುಂಗೆಯ್ದು ತಪ್ಪೊಕ್ಕಲ ಬಡತನಮಂ ತಪಂಗೆ[13] ಯ್ದು ತಪ್ಪನ ಮೆಯ್ಯ ಬಡತನಮುಂ, [14] ಸನ್ನ್ಯಾಸದೊಳ್ ಸತ್ತನ ಸಾವುಮಂ [15] ತವಿಲುಂ ಬಡತನಮುಂ ಸಾವುಮೆಂಬುದೇ ?—

ಕಂ|| ಎನ್ನಯ್ದುಮಿಂದ್ರಿಯಂ[16] ಗಳ(ಳು) |
ವೆನ್ನಂ ಬೆಸಕೆಯ್ಸೆ ನಮೆದೆನಿನ್ನೆಗಮವನಿ ||
ನ್ನೆನ್ನ ವಶಮಾಗೆ ಮಾಡುವೆ |
ನೆನ್ನದಿ[17] ದೇಕಯ್ಯ ದುಃಖಮುಂ ಮಚ್ಚಿದರೇ || ೧೭ ||

ವ|| ಪ್ರಮಾದಿಯಾಗಿ [18] ಪಗೆವರಂ [19] ಪೆರ್ಚಿಸುವಂತೆ, ಅಜ್ಞಾನಿಯಾಗಿ ಪಾಪಮಂ ಪೆರ್ಚಿಸಿದೊಡಮೇಂ ? ತನಗೆ ಶಕ್ತಿ ದೊರೆಕೊಂಡೊಡೆ ಪಗೆಯಂ [20] ಕಿಡಿಸದೊಡಮಱವು ದೊರೆಕೊಂಡು [21] ಮೆಯ್ಯಂ ಪಡೆದೊಡೆ ಕರ್ಮಮಂ ಗೆ[22] ಲ್ಲದೊಡಮಾಯಿರ್ವರುಂ ತಂತಮ್ಮ ಕೇಡಂ ಬಯಸಿದ ರಕ್ಕ[23] ಮಲ್ಲದೊಡೆ—

(1) ಣ್ಯದಿ (ಛ,ಜ) (2) ಕಂಡಾ (ಕ,ಛ,ಜ) ಕಂದಾ (ಟ) (3) ಕೀಸುಗುಳ (ಖ) (4) ಬೈನಂಗುಳಿ (ಕ,ಜ, ಚ) ಬಯ್ಕಂಗುಳಿ (ಛ) ಬೆಸನಂಗುಳಿ (ಘ) (5) ಕಂಡುಮಿದುಪಾಪದ (ಕ,ಗ) ಕಂಡಿದ ಧರ್ಮಮಂ ನಿನ್ನ ಪಾಪದ (ಛ) ಕಂಡಿದೀಪಾಪದ ಫಲಮಿದು ಕಳ್ಳದೋಷದ (ಟ) (6) ನಿನ್ನೊಳಿಂತಪ್ಪ (ಛ) ನಿಮ್ಮೊಳ್ಪಿ (ಟ) (7) ಮಚ್ಚುವೈ (ಟ) (8) ಬರಿಸಿದಂತಿರೆ ತಪ್ಪದೆಡೆಯದೆ (ಗ) (9) ದೆಂತಿವಂ ತಳೆವ (ಘ,ಜ) ದಿಲ್ಲವಂಕಳೆ (ಛ) (10) ಬೆರ್ಚಿ (ಗ,ಛ) (11) ನಿನಗಿರ್ದವರಾರ್ (ಕ) ನಿನಗಿರ್ದೊಡೆಪೇೞ್ (ಚ) ನಿನಗಿರ್ದವರಾರ್ (ಜ) (12) ವಲ್ಪ (ಕ,ಜ) (13) ಯ್ದಂತಪ್ಪ (ಕ) (14) ಸನ್ಯಸನ (ಛ) (15) ಬಡತನಮುಂ ತವಿಲೂ, ಸಾವುಂ (ಕ, ಜ) (16) ಗಳುಮೆ (ಛ,ಜ) (17) ದುದೇಕೆ (ಕ) ದುವೇಕ (ಗ) (18) ಪಗೆವನಂ (ಕ,ಜ) ಪಗೆಯಂ (ಗ) (19) ಪೆರ್ಚಿಸದೆ (ಕ) (20) ಕೊಲ್ಲದೊಡಂ (ಛ) ಗೆಲ್ಲದೊಡಂ (ಛ) (21) ಮೆಯ್ವಡೆದಲ್ಲಿ (ಕ) (22) ಪಱಪಡಿಸದೊಡ (ಕ) ನೀಗದೊಡಂ (ಛ) (23) ಮದಲ್ಲದೊಡೆ—

ಚಂ|| ಗಿಡುಗಡಿದು[1]ಬ್ರ್ತು ಚಿತ್ರ ಯುಮಿಳೇಶ್ವರನಾ[2]ಸೆಗೆ ಪೋಗಿ ಪತ್ತಿಯುಂ |
ಬಿಡದೆ ತಗುಳ್ದು[3] ಪೇಱುಯುಮುಮುಂಗೊಳೆ ಭೃತ್ರಮನೇಱುಯುಂ ಧನಂ ||
ಬಡೆ[4] ವೊಡೆ ಪುಣ್ಯಮಿಲ್ಲದೆ ಮ[5]ಟಲ್ವಿಟವಂತುಯಿಗುಟ್ಟುವಂತೆ ನೀ |
ಗಱಡೆವನತಂತೆ ಸೇದೆಗೆ[6]ಡುತಿರ್ಪುದು ಕಷ್ಟಮೆ ಭವ್ಯಜೀವನೇ || ೧೮ ||

ವ|| ಕು[7]ದಿಱನೆನಿತೆನಿತು ಕರ್ಚುವೊಡಮನಿತನಿತೆ ಕೆಸ[8]ರ್ನೆಗೆವಂತೆ ಮೋಹದೊಳೆನಿತಾಯಾಸಂ[9] ಬಟ್ಟೊಡಂ ಪುಣ್ಯಮಿ[10]ಲ್ಲದನ್ನೆಗಮನಿತನಿತು (ತೆ) ದುಃಖಂ ಪೆರ್ಚುಗುಂ. ಎಂಬುದೊಂದನೆ[11] ಚಿಂತಿಸುವುದು. ಮಱೆದಿರವೇಡಾ ! ನಿನ್ನೊಳಱುಯಲಾಗ—

ಕಂ|| ಪೊಱಮಡುವ ಪು[12]ಗುವ ಸುಯ್ಗಳ !
ತೆಱದಂದಂ [13]ನಿಮ್ಮ ಪೋಗಿನಭ್ಯಾಸಮಿದೆಂ ||
ದಱುಪುತ್ತಿ[14]ರೆಯುಂ ನಿನ್ನಂ|
ಮಱೆದಿರ್ದಪೆ ಯೆನ್ನಮಾತನುಱದುದು ಪಿ[15]ರಿದೇ || ೧೯ ||

ವ|| ನಿನಗೆ ನಿನ್ನಂದಮಂ ಪೇಱುತ್ತಿರೆಯುಂ [16]ಬಗೆವೆಯಲ್ಲೆಮ್ಮ ಪೇಳ್ದುದನೇಕೆ ಬಗೆಯೆಯಿನ್ನುಂ ಮಿಱಲಾಱದೆ ಪೇಳ್ದಪೆಂ [17]ಇಂತುಕೇಳ್ದು ಹಿತಮಂ ಕೆಯ್ಕೊಳ್ವಾ—

ಚಂ|| ಬಿಸುಟು ಪರಿಗ್ರಹದ್ವಯಮನೇಕವಿಹಾರದ ವೃತ್ತಿಯಿಂ ತೊಳ |
ಲ್ದೊಸೆಯೆ ಗುಣೋತ್ಕರಂ ತನು ವೊಡಂಬಡೆ ಭಾವಿಸುತುತ್ತರೋತ್ತರಂ ||
ಪಸರಿಸಿ ಚಿತ್ತಮಾಱೆ ಗಿರಿಕಂದರಗಹ್ವರದಲ್ಲಿ ಪೊಕ್ಕು ಜಾ |
ನಿಸುವುದು ಯೋಗಿಯಾಗಿ[18]ದುರಿತಂ ಕಿಡುವನ್ನೆಗಮೇಕಚಿತ್ತದಿಂ || ೨೦ ||

ವ|| ಭವ್ಯಂ [19]ಕರ್ಮಮಂ ಕಿಡೆ ನೆಗಟಲ್ ಬಗೆವನಪ್ಪೊಡೆಂತು ಸುಱಿಗೆವಿನ್ನಾಣಮನೊಳ್ಳಿತ್ತಾಗಿ ಕಲ್ವೆನೆಂಬಾತಂ ಮುನ್ನಂ ತನ್ನ ಕಳತ್ರಮಂ[20]ನೆಂಟರುಮಂ ಬಿಸುಟ್ಟು ಪರದೇಶಕ್ಕೆ ಪೋಪನಂತೆ ಭವ್ಯನಪ್ಪಾತಂ ಆಭ್ಯಂತರಮುಂ ಬಾಹ್ಯಮುಮೆಂಬೆರಡುಂತೆಱದ ಪರಿಗ್ರಹಮುಮಂ ಬಿಸುಟ್ಟು ತಪಕ್ಕೆ ಪೋಪುದು. ಪೋಗಿಯುಮಂ ತೊವಲನುಡುವಂತೆ ದೆಸೆಗಳೆಂಬ ವಸ್ತ್ರಂಗಳನುಡುವುದು. ಉಟ್ಟು ಸುರಿಗೆಯೋಜನಂ ಸಾದಾರ್ತಂ ತೋರಿದ ಸೂತ್ರ[21]ದೊಳ್ ಬಿಗಿವಂತೆ ದೀಕ್ಷೆಗೆಯ್ದಾಚಾರ್ಯರ ಪಕ್ಕದೆ ಸಂಯಮಾಚರಣೆಗಳನೊಳ್ಳಿತ್ತಾಗಿ ಕಲ್ವುದು. ಕಲ್ತು ಮುನ್ನಿನೋಜನನಗಲ್ದು ದೇಶಾಂತರಂಗಳನೊರ್ವನೆ ತೊಳಲ್ದು [22]ಸಾಂಗ್ರಾಮಿಕೋದ್ದೇಶಂಗಳಂ ಕಲ್ವಂತೆ ಕಲ್ತು

---

(1) ದುತ್ತು (ಖ) (2) ನಲ್ಲಿಗೆ (ಗ) (3) ಪೀರಿ (ಘ) (4) ವರೆ (ಕ) ಮುಱಲ್ವಿ (ಖ) (5) ಮಳಲ್ವೀಳಿ (ಕ,ಙ) (6) ವಡುತಿರ್ಪುದು (ಕ) (7) ಕುದುರ (ಖ) ಕುದಿದನೀರನೆನಿ (ಛ) ಕುದಿವರನೆನಿ (ಙ) (8) ನೆಗೆಳ್ವಂತೆ ಕರ್ಮಂಗಳಂ ಗೆಲ್ವುದು, ಗೆಲ್ದುಸೇಸೆಗೊಳ್ವುದೇಂ (ಗ್ರಂಥಪಾತ) (ಚ) (9) ಬಟ್ಟಂಗಂ (ಗ) (10) ಮಿಲ್ಲಂಗೆ ಬೇಗಮೆನಿ (ಕ,ಖ,ಗ) ಮಿಲ್ಲದಂಗನಿತನಿತೆ (ಚ,ಛ) (11) ಬಗೆವುದು ಮರೆದಿರಲುವೇಡಾ (ಕ) (12) ಪೋಗುವ (ಖ) (13) ನಿನ್ನ (ಕ) (14) ತ್ತಿರೆ ನಿನ್ನಂನೀಂ (ಕ) ತ್ತಿರೆಯುಂ ನೀಂಮೆಯ್ (ಗ) (15) ಬರಿದೇ (ಕ) (16) ಬಗೆಯುಯೆಲ್ಲೆಮ್ಮ (ಕ) ಎಮ್ಮ ಪೇಳ್ದುದನೆಬಗೆಯೆಯೆಂದು (ಛ) (17) ಇಂತುನೆಗಳಾ (ಕ,ಛ) (18)ಮಳಮಂಕಿದಿಪ(ಕ,ಘ) (19)ಕರ್ಮಂಗಳಂ ಕಿಡಿನೆಗಟಲ್(ಕ) (20) ಮಿತ್ತರೆಲ್ಲರುಮಂ(ಗ)(21) ದೊಳಾಡುವಂತೆ (ಕ,ಙ) (22) ಸಂಕ್ರಾಮಿಕ ಭೇದೋಪವೇಶಂಗಳಂ (ಚ) ಸಾಂಕ್ರಾಮಿಕೋಪದೇಶಂ (ಛ)

* ಇಲ್ಲಿ ವಚನವೊಂದು, ಮತ್ತೆ ಪದ್ಯವೊಂದು ಇರಬೇಕೆಂದು ತೋರುವುದು (ತಮಿಱಿನಲ್ಲಿದೆ) ಇಲ್ಲಿ ಪ್ರಮಾದದಿಂದ ಕೈಬಿಟ್ಟಿರಬೇಕು, ಅತಿ ಪ್ರಾಚೀನಗಳಾದ ಓಲೆ ಪ್ರತಿಗಳಲ್ಲಿಯೂ ಈ ಭಾಗ ದೊರಕಲಿಲ್ಲ,

ಗುರುವನಗಲ್ದೇಕವಿಹಾರಿಯಾಗಿ ಚಾರಿತ್ರಭಾವನೆಯುಮಾಜ್ಞಾನಭಾವನೆಯುಮಂ ಭಾವಿಸುತ್ತುಂ ಬಂದು ತನ್ನನಲೆವಂಕಕಾಱನೊಳ್ ಪೋಣರ್ದು ಕಳಂಬುಗುವಂತೆ ಮಳವಿನಾಶಮಂ ಮಾಡುವ ಸಲ್ಲೇಖನಾಕಾರ್ಯಮನೆತ್ತಿಕೊಂಡು ಗಿರಿಗಹ್ವರಂಗಳಂ ಪುಗುವುದು, ಪೊಕ್ಕು [1]ಸುರಿಗೆಗೊಂಡು ಬಿಗಿದು ನಿಲ್ವಂತೆ[2]ಯೋಗಸ್ಥನಾಗಿರ್ಪುದು, ಆಗಿ ನೆಱನನಿಱಿದಿದಿರ ರೂಪಂಗೆಲ್ವಂತೆ ಶುಕ್ಲಧ್ಯಾನದಿಂ ಕರ್ಮಂಗಳಂ ಗೆಲ್ವುದು, ಗೆಲ್ದು ಸೇಸೆಗೊಳ್ವಂತೆ ಮೋಕ್ಷಮಂ ಕೆಯ್ಕೊಳ್ವುದು—

ಕಂ|| [3]ಪಱಿದೀಯೆ ಬರ್ಪ ಸುಖದಿಂ |
ದುಱು(ರಿ)ಗುಂ ತನ್ನಿಂದೆ ಬರ್ಪ ದುಃಖದ ಪೆಂಪಂ ||
[4]ಮಱೆದು ಬೞಿಮೆಯ್ಗೆ ಸುಖದೊಳ್ |
ನಿಱಿಸುವ ತಪದೊಂದು ಜೀವಸಂ ಜೀವಸಮೇ || ೨೧ ||

ವ|| ಕು[5]ತ್ತವಡೆದಂ ಬೆಜ್ಜುವಡೆದು ಕೈಪೆಗಂಜಿ ಮರ್ದಂ ಕುಡಿಯದೊಡಂ,[6]ಭವ್ಯಂ ಮನುಷ್ಯಭವಮಂ ಪಡೆದು ತಪದ ದುಃಖಕ್ಕಳ್ಕಿ ಸಕಳವ್ರತಿಯಾಗದೊಡಂ ಆತನಕು[7]ತ್ತಮುಮಿಾತನ ಕರ್ಮಮುಂ ಪತ್ತುವಿಡದೆಂದು ನಿಶ್ಚೈಸುವುದು ತಪೋಽನುಷ್ಠಾ[8]ನಮತ್ಯಂತಸುಖಮೆಂದುಬಗೆವುದು–

ಚಂ|| ತನುವಿನೊಳಾದ ಜಲ್ಲ[9]ಮಲಮಾಭರಣಂ ಪುಲಿಯುರ್ಪುದೊಂದು ಕಾ |
ನನದ ಗುಹಾ[10]ಂತರಂ ಮನೆ ಪರಲ್ಗಳನುಳ್ಳ[11]ತಱಂಬು ಪಾಸು ಮ ||
ತ್ತನುಪಮಬೋಧಿ ಸಾರಥನಮುಗ್ರಮಲ ಕ್ಷ[12]ತಿ ಕಾರ್ಯಮಾಗೆ ನೀಂ |
ಮನಮೊಸೆದೊರ್ವನಿ[13]ರ್ದಲೆಯ ಕರ್ಮಮನುಜ್ಜ್ವಳಮಪ್ಪ ಯೋಗದಿಂ || ೨೨ ||

ವ|| [14]ಏರ್ಪೆತ್ತಂ ಪುಣ್ಣನುಡಿವಲ್ಲಿಯ ನೋವಂ ನೋವೆಂದು ಬ[15]ಗೆಯದಂತೆ ತಪಂಗೆಯ್ವಂ ಕಾಯಕ್ಲೇಶಮಂ ಕ್ಲೇಶಮೆಂದು ಬಗೆಯದೆ ಪಿರಿದೊಂದು ವಿಳಾಸದಂತಾಗಿ ಬಗೆದು ನೆಗೞ್ವುದು–

ಕಂ|| ಪುಟ್ಟುವುದು ಸೇದೆಯಿಂ ಸುಯ್ |
ನೆಟ್ಟನೆ ಸು[16]ಯ್ಮಱಿಗೆ ಸಾವು ಸುಖಮೆಲ್ಲಿತೊ ಪೇೞ್ ||
[17]ನಿಟ್ಟಿಸಿ ಬಗೆದಱವಾಗಳ್ |
ಕಷ್ಟ(ಟ್ಟ)?ಮಿ[18]ದೆಂಬೊಂದು ತತ್ತ್ವಮಂ ಬಗೆ ಜೀವಾ || ೨೩ ||

(1) ಬಿಲ್ಗೊಂಡು (ಕ,ಗ,ಜ) (2) ಯೋಗಸ್ಥನಪ್ಪುದಾಗಿ ನೀನೆರವಿಯ ನಿರಿದಿದಿರ (ಕ,ಜ) ಯೋಗಸ್ಥನಾಗಿರ್ಪುದು ಇರ್ದು ನೆಜಿನನಿರಿದಿದಿರ (ಟ) ಯೋಗಸ್ಥಾನನಾಗಿರ್ಪುದಿರ್ದು (ಛ( (3) ಪೆರರಿಂದೆ (ಗ) ಪೆರರರಿಯೆ (ಕ) (4) ಮರೆದು ಬಳಿಮೇಗೆ (ಕ,ಜ) ಮೞೆದು ಬೞಸಂದುತಪದೊಳ್ (ಛ) (5) ಕುತ್ತವುಳ್ಳಂ ಬೆಜ್ಜುವೊಡೆದು(ಜ) ಕುತ್ತವುಳ್ಳ ಕೈಪೆಗಳ್ಕಿ (ಟ) (6) ಮನುಷ್ಯಂ ತಪದದುಃಖಕ್ಕಳ್ಕಿ (ಛ) (7) ಕುತ್ತಂ ಪತ್ತುವಿಡದೀತನಕರ್ಮಂ ಪತ್ತು (ಕ) (8) ನಮಂಸುಖಸುಖಮೆಂದೇಬಗೆಯುಂ (ಕ, ಜ) (9) ಮಲಮಾಂಸಭಣಂ (ಛ) ಕಜ್ಜಲಮನಾಭರಣಂ (ಟ) (10) ತರಂಬೆಪಾಸು (ಖ) (11) ನೆಪವನೆಪರಲ್ಗಳ (ಟ) (12) ಕ್ಷಯ (ಕ) ಕ್ಷಿತಿ (ಛ) (13) ನಿರ್ದಲಯ (ಕ,ಜ) ವಿದ್ವೆಯಲೆಕರ್ಮ (ಛ) ನಿರ್ದಲೆವ(ಟ) (14) ಯರ್ಧುವೆ(ಜ) ವಿಷರ್ವೆತ್ತಪುಣ್ಣ (ಛ) ಏರ್ವೆತ್ತಂ(ಕ) ಪೆರುವೆತ್ತು ಸುಡುವಲ್ಲಿಪುಣ್ಣಂ (15) ಬಗೆವೊಡಂಕ್ಲೇಶಕ್ಕೆ ಸಂಕ್ಲೇಶಂ ಬಡೆದದಂಪಿರಿದೆಂದು (ಗ) ಗೆಯ್ವುದಂ ಕಾಯಕ್ಲೇಶಮೆಂದು ಬಗೆಯದೆ (ಟ) (16) ಸುರುಳ್ಗೆಸಾವು ಸುಖಮೆಲ್ಲಿತ್ತೋ (ಕ) ಸುಯ್ಮಗ್ಗೆ (ಛ) (17) ನೆಟ್ಟನೆಬಗೆವಾಗಳ್ ಕೇಳ್ (ಛ) (18) ಮಿದೊಂದೆಂಬ (ಕ)

ವ|| ಸುಯ್ವುದಂ ಸುಖಮೆಂಬೆಯಪ್ಪೊಡೆ ಸುಯ್ ಸೇದೆಯಿಂದಲ್ಲದಾಗದೆಂದೊಡೆ ಸುಖಮೆಂಬಾ ! ಸುಯ್ಮುಱಿ ಸಾವು ನಿ[1]ನಗಪ್ಪುದು, ಈ ಮೆಯ್ಯೊಳೆಲ್ಲಿಯುಂ ಸುಖಮಿಲ್ಲ—

ಮ|| ಕಡುಗಿರ್ಚಂ ನದಿಪುತ್ತು ಮಿರ್ಪಿರವು[2] ಮತ್ತೆಂತಂತೆ ಕೇಳ್ ಮೂರ್ಖವೋ |
ದೊಡೆ ನೀರಂ ತಳಿವಂತೆ ಬನ್ನದಱಲೊಳ್ ನೊ[3]ಂದಾತನಂ ಸಂತಸಂ ||
ಬಡಿಸಲ್ ಕಾಲ್ಪಿಡಿವಂತೆ ಜೀವ ಪೆಱ[4]ತೇನೇಮಾತೊ ಪುಣ್ಣಲ್ಲಿ ಮ |
ರ್ದಿಡುವಂತೆಯ್ದಿದೆ ದುಃಖಮಂ ಕಿಡಿಸುತಿರ್ಪಂದಂಗಳೇಂ ಸೌಖ್ಯಮೇ || ೨೪ ||

ವ|| ಮನುಷ್ಯ[5]ಲೋಕದೊಳಾದ ಸುಖಮೆಲ್ಲಂ, ದಾಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸು[6]ವ ಸುಖಂ ಅದು ಸುಖಮೆ ?

ಕಂ|| ಗತಿ ಮಗುೞ್ದು ಬಾರದಿರ್ಪುದೆ |
ನುತಧರ್ಮಂ ಪಾಪಮಿಲ್ಲದಿರ್ಪುದೆ ವಿಪರೀ ||
ತತೆಯಿಲ್ಲದುದಱವಾಗಳ್ |
ಗತಿ ದುಃಖಂಗಾಣದಿರವೆ ತಾಂ ಸುಖಮ[7]ಲ್ತೇ || ೨೫ ||

ವ|| ಈಗಡಿನ ಮರ್ತ್ಯರೊಳ್ ಸುಖಮಾವುದೋ ? ಮೂಱುಂಲೋಕದೊಳುಳ್ಳಸುಖಂ—ದೇ[8]ವೇಂದ್ರರ್ಕಳ, ಚಕ್ರವರ್ತಿಗಳ, ನಾಗೇಂದ್ರರ್ಕಳ ಸುಖಮೆಲ್ಲ[9]ಮೊಂದಾಗಿಯುಂ ಸಿದ್ಧರ್ಕಳೊಂದುಸಮಯದ [10]ನಿತರ್ಕಂ ಸ[11]ಮನಾಗದೆಂಬುದಂ ಬಗೆದು ನೋಡಾ |

ಉ|| ಪೇಸುವುದಪ್ಪುದಿಂದ್ರಿಯಸುಖಕ್ಕೆ ದಯಾಪರನಪ್ಪುದೊಳ್ಪಿನ |
ಭ್ಯಾಸದೊಳಿ[12]ರ್ಪುದೊಳ್ತಪದೊಳ[13]ಱ್ತಿಗನಪ್ಪುದು[14]ದುಷ್ಕಷಾಯಸಂ ||
ತ್ರಾಸಕನಪ್ಪು[15]ದತ್ಯಧಿಕ ಭಕ್ತಿ ಜಿನೇಂದ್ರನೊಳು[16]ಳ್ಳನಪ್ಪುದು |
ದ್ಭಾಸಿತಮೋಕ್ಷಲಕ್ಷ್ಮಿಗಧಿನಾಯಕ[17]ನಪ್ಪೊಡೆ ಭವ್ಯಜೀವನೇ || ೨೬ ||

ವ|| ನಿ[18]ಘರ್ಷಣ ಚ್ಛೇದನ ತಾಪನ ತಾಡನಾದಿ ಕ್ರಿಯೆಗೆಲ್ಲಂ ಬಂದೊಡೆ[19] ಪೊನ್ನೊಳ್ಪಿತ್ತೆಂದ[20]ಱವಂತೆ ಒಳ್ಪಿತ್ತಪ್ಪ ನೆಗೞ್ತೆಗೆ ವಂದಾತನನಾಸನ್ನಭವ್ಯನೆಂದಱವುದು [21]ಮತ್ತಮಿನ್ನೊಂದುಮಾತಂ ಕೇಳಾವುದೆಂಬೆಯಾ—

---

(1) ನಿನಗೀಮೆಯ್ಯೊಳೆಲ್ಲಿಯುಂ (2) ತಾನೆಂತಂತೆ (ಕ, ಗ, ಚ, ಜ) (3) ನಿಂದಾ (ಗ) (4) ತಿನ್ನೇಮಾತೊ (ಕ, ಚ, ಜ) (5) ಲೋಕದ (ಕ, ಗ) ಲೋಕದೊಳುಳ್ಳ (ಚ) (6) ಸುವುದುಸುಖಮದು (ಕ, ಜ) ಸುವದುಃಖಮದು (ಚ, ಟ) (7) ಮೆಂದುಂ (ಕ, ಜ) (8) ಚಕ್ರವರ್ತಿ ದೇವೇಂದ್ರನಾಗೇಂದ್ರರ್ಕಳ (ಕ) (9) ಚಕ್ರವರ್ತಿಗಳ ಸುಖಮೆಲ್ಲಮನೊಂದುಮಾಡಿತ್ರಿಗುಣಿಸಿ ಮತ್ತಮದ (ಛ) ಮನೊಂದುಮಾಡಿ ತ್ರಿಗುಣಿಸಿ ಮತ್ತಮದನನಂತಗುಣಂಗೈದೊಡಂ ಸಿದ್ಧರೊಂದು (ಕ, ಜ, ಗ) (10) ದಸುಖಕ್ಕೆ (ಕ) (11) ಸಮಾನಮಾಗ (ಛ) (12) ಳಪ್ಪ (ಕ) ದನಪ್ಪ (ಛ) (13) ಳರ್ಥಿಗ (ಗ, ಟ, ಛ, ಜ) (14) ಸತ್ಕಷಾಯ (ಕ, ಛ) (15) ದಪ್ಪುದತಿಭಕ್ತಿ (ಕ, ಛ, ಟ) (16) ಳಿನ್ನನಪ್ಪ (ಛ) ಳಿಂತನ (ಕ) (17) ನಪ್ಪುದು (ಕ, ಛ, ಜ) (18) ಶ್ಲೋಕ—ನಿಘಣ.... (ಛ) (19) ಯಿಂದೊಳ್ಪಿತೆಂದರಿ (ಟ) (20) ತ್ತೆಂಬಂತೆ (ಖ) ತ್ತೆಂದಱವಂತೆ ಭವ್ಯನುಮಾನೆಗೞ್ತೆಗೆವಂದೊಡಾಸನ್ನ (ಕ) ದಱವಂತೆ ಶುಭಗುಣಂಗಳಿಂ ನೆಗೞ್ತೆಗೆಯ್ವಂದೊಡಾ (ಛ) (21) ಈ ವಾಕ್ಯ (ಛ) ಪ್ರತಿಯಲ್ಲಿಲ್ಲ.

ಕಂ|| ಪ[1]ಱಿಯುಮುಳ್ಳ[2] ಮಳಮನೊ[3]ರ್ಮೆಯೊಳ್ |
[4]ಲಱಿದು ಜಗತ್ತ್ರಿತಯನಾಥನಾಗಿರ್ದೞಿವಂ ||
ಮೆಱೆದು ಗುಣಗಣದ ಪೆಂಪಂ |
ನೆಱೆದು ವಿಶುದ್ಧಾತ್ಮನಾಗಿ ಸುಖಮಿರಲಾಗಾ || ೨೭ ||*

ವ|| ಪರದಂ ಲಾಭಮನೀವ ಭಂಡಮಂ[5]ಮಾಱುಗೊಳ್ಳದೊಡಂ, ಭವ್ಯಂ ಸುಗತಿಯನೀವ ಗುಣಮಂ ಕೆಯ್ಕೊಳ್ಳದೊಡಂ ಆತಂಗೀ[6]ಗಳಿನಲಾಭಮುಮಿಾಭವದಿಂಬುಮಿಾತಂಗೀಭವದ ಸುಖಮುಮುಱುಭವದಿಂಬುಮಾ[7]ಗದಿಂತಪ್ಪವಱೊಳ್—

ಉ|| ಶ್ರಾವಕನಕ್ಕೆ ಮೇಣ್ ತವಸಿಯಕ್ಕೆ ಕಷಾಯಮನಾಗಲೀಯದಿ |
ರ್ದೋವಿ ಗುಣಂಗಳಂ ವ್ರತಮನಾರ್ಪನಿತಂ ಸಲಿಸುತ್ತುಮು[8]ಕ್ತಿಯೊಳ್ ||
ಭಾವಿಸಿ ತತ್ತ್ವಮಂ ತುದಿಯೊಳೊಪ್ಪಿರೆ ಸರ್ವನಿವೃತ್ತಿಗೆಯ್ವುದೆಂ |
ಬೀ ವಿಧಿಯಿಂ ಕರಂ ತಿಳಿಯೆ ಪೇೞ್ವ [9]ಸುತತ್ತ್ವಮಿದೊಂದು ಸಾಲದೇ || ೨೮ ||

ವ|| [10]ಎನಿತಾನುಂ ಮಾತುಗಳೊಳೇನಾವೊಂಗಮಿಾನೆಗಱ್ತಿಯೆ ಕರ್ಮಕ್ಷಯಮಂ ಮಾಡುಗುಂ, ಅನನ್ತಸುಖದೊಳ್ ಕೂಡುಗುಂ. ಮತ್ತಂ ''ಜೀವನೆಲ್ಲಿಯುಮೊರ್ವನೆ'' ಯೆಂಬುದಂ[11] ಪ್ರಭುವಪ್ಪೊಡಮೇಕಾಕಿಯಾದನೆಂಬ ಕಥೆಯಂ[12] ಕೇಳ್ದಱಿಯಯಪ್ಪೊಡಂ ಕೇಳಾ—

## ದೃಷ್ಟಾಂತದ ಕಥೆ

[ ವರಾಂಗನ ಕಥೆ ]

ಕಂ|| ಉತ್ತಮ ವಸ್ತುಗಳಿ[13]ಂದ |
ತ್ಯುತ್ತಮಮೊಪ್ಪುವುದಱಿಂದಮೆಲ್ಲಿಯುಮದು ತಾ ||
ನುತ್ತಮಮಾಗಿರೆ ಪೆಸರಿಂ |
ದುತ್ತಮಪುರಮೆಂಬುದಾ[14]ದುದ [ಂತ] ದನಾಳ್ವಂ || ೨೯ ||

* ಈ ಪದ್ಯ (ಟ,ಛ) ಪ್ರತಿಗಳಲ್ಲಿಲ್ಲ, (1) ಅರಿದು (ಕ,ಖ) ಅಱಿಹು (ಛ) ಇಱಿದು (ಗ) (2) ಕುಳಮ (ಗ,ಖ) (3) ನೊರ್ಮೆ (ಛ) (4) ಲಳಿದು (ಜ) (5) ಕೆಯ್ಕೊಳ್ಳ (ಕ) ಕೊಳ್ಳ (ಛ) (6) ಗೀಗಳಿನಲಾಭಮು (ಗ) ದೀಭವದ ಸ.ಖಮಂ (ಜ) (7) ಗದದಱಿಂಪೆರವರೊಳೀಂ (ಕ, ಗ) ಪೆರವಱೊಳೀಂ (ಛ) (9) ಮಾರ್ಗಿಯಿಂ (ಕ,ಗ) (9) ಸುವೃತ್ತ (ಕ) ಪೇಳುವಸುನಿವೃತ್ತಮಿ (ಛ) ಪೇಳ್ದನಿವೃತ್ತ (ಗ) (10) ಎನೆ ಮಾತ್ರಗಳೊಳೇನಾವೊಂಗಮಾ (ಛ,ಗ) ಳೇನಾನುಮೊಂದನೀನೆಗಱ್ತಿ (ಟ) (11) ದಂ ಸಮಸ್ತಪರಿಜನಂಗಳಿರ್ದಂತೆ ಪ್ರಭುವಪ್ಪನೇಕಾಕಿ (ಕ) (12) ಕೇಳ್ದುನಂಬುವುದಂತೆನೆ (ಗ,ಛ) (13) ಳೊಳಮ। (ಕ) ಗಳೊಳಗಮ (ಛ) (14) ದಕ್ಕುಮಂತದ (ಟ) ದಾದುದದನಾಳ್ವರ (ಛ)

ವ|| ಧರ್ಮಸೇನ ಮಹಾರಾಜ[1]ನೆಂಬಂ. ಆತಂ ಮಹಾಮಂಡಳಿಕಶ್ರೀಯೊಳ್ ಕೂಡಿದ ಪೆಂಪಂ ತನಗಾವಗಂಮಾಡಿ ಸುಖಮಿರ್ಪನಾತ[2]ನ ಪಟ್ಟಮಹಾದೇವಿ ಗುಣವತೀದೇವಿಯೆಂಬಳ್. ಆಯಿರ್ವರ್ಗಂ ಪುಟ್ಟಿದೊಂ ವರಾಂಗನೆಂಬೊಂ, ಆತನತ್ಯಂತಸೌಂದರ್ಯವೀರ್ಯಶೌರ್ಯಪ್ರತಾಪ ಪರನಾಗಿರೆ ಬಂಧುವರ್ಗಮುಂ ತಳವರ್ಗಮುಂ ತನ್ನೊಳ್[3] ಕೂಡಿ ಕೂರ್ತು ನೆಗೞೆ[3] ನೆಗೞ್ದು[4] ಕೆಲದ ನೆಲದ ಬಲದರಸುಗಳುಂ ಪರಮಂಡಲಂಗಳು[5] ಮಱ್ಱುವಂತು ವಿಕ್ರಮೋಪೇತನಾಗಿರ್ಪನ್ನೆಗಂ ಆ ಧರ್ಮಸೇನ ಮಹಾರಾಜನ ಕಿಱಿಯರಸಿಯ ಮಗಂ ಸುಷೇಣನೆಂಬಂ ವರಾಂಗನ ತೇಜಕ್ಕಂ ಶ್ರೀಗ[6]ಂ ಬುದ್ಧಿಗಂ ಕಾಯ್ದು ತಾನುಂ ತಮ್ಮಬ್ಬೆಯುಂ ಆತಂ[7]ಗಪಾಯಮಂ ಬಗೆದುಪಾಯದೊಳೆರಡು ಜಾತ್ಯಶ್ವದ ಮಱಿಗಳಂ ಕೊಂಡು ಒಂದಂ[8]ರಾಜವಾಹನಮಾಗೆ ಸಮೆದುಮೊಂದಂ ವಿಪರೀತ ಗತಿಯೊಳ್ ಸಮೆದುಂ ವರಾಂಗನ ಪೆರ್ಗಡೆಯೊಳ್ ಸಮಕಟ್ಟಿದೊಡೆ ಆಪೆರ್ಗಡೆ ವರಾಂಗನಲ್ಲಿಗೆ[9]ವಂದು "ದೇವಾ ಬಿನ್ನಪಂ, ನಿಮ್ಮಡಿಗಳ್ಗೆ ಪರಮಂಡಳದಿಂ ಪಾಗುಡಂ ಬಂದು" ವೆಂದು ಪುಸಿದು[10] ವರಾಂಗಂಗೆ ಕುದಿರೆಗಳಂ ಮಣಿಕ[11]ನಕಮಯಾಯೋಗಾಳಂಕಾರಂಮಾಡಿ ತೋಱಿ "ಬನ್ನಿಮಿಾ ವೈಹಾಳಿಯೊಳೇಱಿ ನೋ[12]ೞ್ಪ" ಮೆಂದೊಡಗೊಂಡು ವರೆ ವರಾಂಗನತಿಶಯವಿಳಾಸ[13]ದಿಂ ಪೊೞಲಂ ಪೊಱಮಟ್ಟು—

ಚಂ|| ತುರಗಸಮೂಹಮಿರ್ಕೆಲದೊಳಂ ಬರೆ ಮುಂದೆ ಪತಾಕೆಗಳ್ ನಿರಂ |
ತರಮೊಗೆದೋ[14]ಳಿಗೊಂಡೆಸೆಯೆ ತೂರ್ಯರವಂ ಮಿಗೆ ಕೂಡೆ ತಳ್ತು ಸೀ ||
ಗುರಿಗಳನೇಕಮೊಪ್ಪುತಿರೆ ಚಾಮರಮಿಕ್ಕೆ ತಗುಳ್ದು ಕೀರ್ತಿಸು |
ತ್ತಿರೆ ಪಲರಿಂತು ಬಂದನತಿರಾಗದಿನಂದಮರೇಂದ್ರ[15]ಲೀಲೆಯಿಂ || ೩೦ ||

ವ|| ಅಂತು ಬಂದು[16]ವಾಹಳಿಯಂ ಪೊಕ್ಕಾಗಳ್ ಪರಮಂಡಳದಿಂ ಪಾಗುಡಂಬಂದ ತುರಗರತ್ನಂಗಳನೇಱಿ ನೋೞ್ಪಮೆಂದು ಸಾಮನ್ತಮಹಾಸಾ[17]ಮನ್ತ ಮಂಡಳಿಕಶ್ರೇಷ್ಠಿ ಸೇನಾಪತಿ ದಂಡನಾಯಕ ಮಂತ್ರಿಪುರೋಹಿತಾದಿಗಳ್ವೆರಸು ಕರಿತುರಗರಥಶಿಬಿಕಾಂದೋಳಂಗಳನೇಱಿ ಬಂದು ಬಳಸಿಯುಮಿರ್ದು ನೋಡೆ ಪೆರ್ಗಡೆ ತಂದವಟಯ್ಸಿದ ಕುದಿರೆಗಳನರಸಂ ನೋಡಿ ಮಚ್ಚಿ ನೀನೊಂದನೇಱೆಂದೊಡಾತಂ ಬೇಗಂ ಸುಶಿಕ್ಷಿತಮಪ್ಪಕುದಿರೆಯ ಬೆಂಗೆವಾಯ್ದೊಡೆ ಅದು ಲಂಘನವಲ್ಗನನೀಚ್ಛೈ[18]ಗರ್ತಾದಿಗಳೊಳಪ್ಪ ಕ್ರಿಯೆಗಳೊಡಂಬಡೆ ಬಲ್ಲರಚ್ಚರಿವಡೆ ಪರಿದೊಡೆಲ್ಲರುಮುದಂ ಪೊಗ[19]ೞ್ದೊಡೆ ಅದಱ ನಿದೊಳ್ಳಿತೆನೆ ವರಾಂಗನದನಾನೇಱಿ[20]ನೋೞ್ಪೆನೆಂದು ವಿಪರೀತ ಶಿಕ್ಷಿತಮಪ್ಪ ವಾಜಿಯ[21] ಬೆಂಗೆವಾಯ್ದೊಡಂ ಮುನ್ನಂ ಮೆಲ್ಪಿನೊಳ್ ಸ್ವಭಾವಮನಾರಯ್ವೆನೆಂದು

---

(1) ನೆಂಬೊಸರಸಂ (ಛ) (2) ನಮಹಾವೇ (ಛ) (3) ಪತ್ತಿ (4) ಕೆಲದರಸು (ಕ) ಕೆಲದನೆಲದರಸು (ಛ) ಕೂರ್ತುಪತ್ತಿನೆಗೞೆ (ಛ,ಜ,ಕ) (5) ಗಳಿಂ ತನ್ನೊಳಳುಕುಮಂ (ಕ) (6) ಶ್ರೀಗಂಕಾಯ್ದು (ಗ) (7) ಯ್ದುವರಾಂಗಂಗೆ ಬೇಗಮಪಾಯ (ಕ, ಟ) (8) ವಾರಿಪೂರಿತಮಾಗೆ ವಿಪರೀತ (ಗ, ಛ) (9) ಬಂದು ನಿಮ್ಮಡಿಗೆ ಪಾಗುಡಂ (ಟ,ಖ) ನಿಮ್ಮಡಿ ಪಾಗುಡಂ (ಜ) (10) ವರಾಂಗಂಗೆ ಪುಸಿದುಕುದಿರೆಗಳಂ (ಕ, ಜ) (11) ಕನಕಮಾಳಾಲಂಕಾರ (ಕ,ಜ) ಕನಕಮಯಾಳಂಕಾರ (ಖ) (12) ೞ್ಪಮೆನೆ (ಕ) (13) ದಿಂಪೊೞಮಟ್ಟು (ಕ,ಗ,ಟ) (14) ಳಿವಟ್ಟಿಸೆಯೆ (ಜ) (15) ನಂದದಿಂ (ಕ) (16) ವೈಹಾಳಿ (ಗ) (17) ಸಾಮನ್ತಮಂಡಳಿಕ (ಕ) ಮಂಡಳಿಕ (ಕ) ಮಂಡಳಿಕತುರಗಂಗಳನೇಱಿ (ಕ) (18) ಗರ್ತಾವರೋಹಣಾದಿ ಕ್ರಮ (ಕ) ಗರ್ತವಾರಣಾದಿಕ್ರಿಯೆ (ಗ,ಛ) (19) ೞ್ದೊಡಿದವೇರಿದೊಳ್ಳಿತು (ಕ,ಜ) (20) ಕೊಳ್ಪೆ (ಕ,ಜ) (21) ಮೇಲೆವಾಯ್ದು

ಕೊಸೆಯಂ ತೆಗೆದು ಬ[1]ಲ್ಲಿತ್ತುವಿಡಿದು ಪಾಯ್ದೇಱಿ ಅವುಂಕೆ ಪಾಱಿ ಪರಿಯಲ್ ತಗುಳ್ದೊಡೆ ಹೋಹೋ ! ಎಂದೆನುತೆನಿತೆನಿತು ಕೊ[2]ಸೆಯಂ ಬಲ್ಲಿತ್ತು ವಿಡಿಯಲನಿತನಿತೆ[3] ಲಂಘನದೊಳ್ ಪರಿದು ವಾಹಳಿಯಂ ಪೋಱಮಟ್ಟುತ್ತಮಜವದಿಂ ಪೋಗಿ ನೆಲನುಂ ಪೊಲನುಮನುಱಿಯೆ[4] ವಂದೊಂದು ಭೀಮಾಟವಿಯಂ ಪೊಕ್ಕು ಮರದುಱುಗಲೆಡೆಯೊಳ್ ಪರಿಯೆ ಮಕುಟಕೇಯೂರಹಾರನೂಪುರಾ ದ್ಯಾಭ[5]ರಣಂಗಳ್ ಮರದ ಕೊಂಬಿನೊಳ್ ತೊಡರ್ದು ಪೋಗೆ ಮುಳ್ಗೊಂಬಿನ ಪೊಯ್ಲೊಳ್ ಮೆಯ್ಯೊಳೆಲ್ಲಂ [6] ವ್ರಣಂಗಳೊಗೆಯೆ ಮತ್ತಂ[7] ಕಿಱಿದೆಡೆಯಂ ಪರಿಯುತ್ತುಂ ನಡುಪಟುವಿನೊ ಳೊಂದು ಪುರಾಣಕೂಪದೊಳಾತನೇಱಿದ ಕುದಿರೆ ಬಿೞ್ದ[8] ಸತ್ತಾಗಳ್ ಆತನಡ್ಡಪರ್ವಿದ ಬಳ್ಳಿಗಳಂ ಪಿಡಿದಡರ್ದು ಭಾವಿಯಿಂ ಪೊಱಮಟ್ಟು ಪಥಿಶ್ರಮದೊಳ್ ಸೇದೆಗೆಟ್ಟು[9] ಬೞಲ್ದು ಬರುತ್ತುಮಲ್ಲಿ ಯೊಂದು ಮರದ ನೆೞಲೊಳ್ ಕುಳ್ಳಿರ್ದು—

ಶಾ|| ಆ ನಾಡಾ ಪೊೞಲಾ ಮಹಾನಿಳಯಮಾ ಸ್ತ್ರೀಯರ್ಕಳಾ ತಂದೆ ಸಂ |
ದಾ ನೆಂಟರ್ ನೆಗೞ್ದಾ ಮದೇಭಹಯ[10] ಸಂತಾನಂಗಳಿರ್ದಂತೆ ಮ ||
ತ್ತೇನುಂ ಮಾಣದೆ ದುಷ್ಟವಾಜಿ ತರೆ ಬಂದೀ ಬಾವಿಯೊಳ್ ಬಿೞ್ದ [11] ಬಂ |
ದಾನಿಂತೊರ್ವನೆ ದುಃಖಭಾಜನನೆ[12] ನಿಪ್ಪಂತಾಯ್ತುದೇಂ ಕರ್ಮಮೋ || ೩೧ ||

ವ|| [13] ಎಲ್ಲಿಡೆಯೊಳವಾತ್ಮನೊರ್ವನೆಂಬುದೀಗಳುಮೆನ್ನೊಳ್ ನನ್ನಿಯಾಯ್ತೆಂದು ಚಿಂತಿಸುತ್ತುಮ[14] ಲ್ಲಿಂದಮೆೞ್ದು ಪೋಗಿ ದೆಸೆಗೆಟ್ಟು ತೊಳಲ್ವನನೊಂದು ಪೆರ್ವುಲಿ ಕಂಡು ಪಾಯಲ್ ಬಗೆದಾಗಳ್ ಬೇಗಮೊಂದು ಮರನೇಱಿದೊಡಾ ಪುಲಿ[15] ಬಂದಾ ಮರನ ಪಣೆವರಂ ಪಾಯ್ದಾತನ ನೆಯ್ದಲಾಱದೆ ಮಗುೞ್ದು (ತಗುೞ್ದು) ಬಿೞ್ದು ಮತ್ತಮಂತೆ ಲಂಘಿಸು[16] ತ್ತುಂ ಕಾಪುಗೊಂಡು ಪೋಗದಿರ್ದುದಂ ಕಂಡು ತುದಿಗೊಂಬನೇಱಿ ನಿದ್ರೆಯಾದೊಡೆ ಬೀೞ್ವೆನೆಂದೊಂದು ಬಳ್ಳಿ[17] ಯಿಂ ತನ್ನ ನಡುವಂ ಮರದ ಕೊಂಬಿನೊಳಡಸಿ ಕಟ್ಟಿಕೊಂಡಿರು[18] ಳೆಲ್ಲಮುಂ ನಿದ್ರೆಯಿಲ್ಲದಿರೆಯುಂ ಜೀವ ನೆಂತಪ್ಪವಸ್ಥೆಯೊಳಮೊರ್ವನೆಯೆಂಬೇಕತ್ವಮಂ ಬಗೆಯುತ್ತಿ[19] ರ್ದಂ. ಅನ್ನೆಗಂ ನೇಸಱ್ ಮೂಡಿ ದಾಗಳ್ ಯೂಥಾಧಿಪತಿಯಪ್ಪುದೊಂದುಮದಹಸ್ತಿ ಪೋಪುದಂ ಕಂಡಲ್ಲಿರ್ದು ಸರಂದೋಱಿದೊ ಡಾ[20] ಗಜೇಂದ್ರನೆೞ್ದುವಂದುದಂಕಂಡು ಪುಲಿ ನುನ್ನಂ ಕೋಳ್ದಪ್ಪಿದ ಮುನಿಸಿನೊಳಾನೆಯ ಕುಂಭ ಸ್ಥಳಕ್ಕೆ ಪಾಯ್ದೊಡೆ ಅದನಾನೆ ಪಿಡಿದುಕೊಂಡು ಮೆಟ್ಟಿ ಸೀೞ್ದೀಡಾಡಿಪೋ[21] ದೊಡೆ ತನಗುಪಕಾ ರಂಗೆಯ್ದುದೆಂದಾ ಕರೀಂದ್ರಮ[22] ನೆನಿತಾನುಂ ತೆಱದಿಂ ಪೊಗೞ್ದು[23] ಮರದಿಂದಿೞಿದು ಕಿಱಿದು ಪೊೞ್ತು ವಿಶ್ರಮಿಸಿರ್ದು ಪಸಿವುಂ ನೀರೞ್ಕೆಯುಂ ತಿಣ್ಣಮಾಗೆ[24] ದೆಸೆದೆಸೆಗಳಂ ನೋೞ್ಪಾಗಳ್—

(1) ಬಲುವಿಡಿದುಟ್ಟು ಪೊಯ್ದೇರಿ (ಛ) ತ್ತು ವಿಡಿಯೆ ಬೆರ್ಚಿಪಾಱಿಪರಿಯಲ್ (ಕ,ಜ) (2) ಕೊಸೆಗೊಳ್ಳು ಮನಿತನಿ (ಕ) ಎನುತೆನುತ ಕೊಸೆಗೊಳ್ಳು (ಜ) (3) ಲಂಘಿಸಿ (ಕ)' (4) ಪರಿದೊಂದು (ಕ,ಜ) (5) ರಣಂಗ ಳೊಳ್ ತೊಡರ್ದು (ಕ) (6) ಬ್ರಣಂಗಳಾಗೆ ನಡುಪಟುವಿನೊಳೊಂದು (ಕ) (7) ಕೀಱಿಪರಿಯುತ್ತು (ಗ) (8) ಸತ್ತತ್ತಾಗಳ್ (ಕ, ಛ) (9) ಬೞಲ್ದೊಂದು ನೆೞಲೊಳ್ (ಕ, ಜ) (10) ಸಂಘಾತಂ (ಖ, ಗ, ಛ) (11) ಬಳ್ದೇ (ಟ) (12) ನಪ್ಪಂತಾ (ಟ) ನೆಯಪ್ಪಂತಾ (ಜ) (13) ಎಲ್ಲಿಯು ಜೀವನೊರ್ವನೆ (ಕ) ಎಂತಪ್ಪ ದುಃಖದೊಳಮಾತ್ಮನೊರ್ವ (ಖ) (14) ಲ್ಲಿಂದೆೞ್ದು ಸೇದೆವಟ್ಟುತೊಳಲ್ವ (ಕ) ದೆರ್ದು ದೆಸೆವಟ್ಟು ತೊಳಲ್ವ (ಟ) (15) ಬಂದಾತನೇಱಿದ ಮರದಕೊನೆವರಂ (ಕ, ಜ) ಪಣೆವರಂ (ಟ) (16) ಸುತ್ತುಂ ಪೋಗ (ಖ,ಜ) (17) ಯಂ ತನ್ನ (ಖ) ಯೊಳ್ ತನ್ನ (ಕ) (18) ಳೆಲ್ಲಮುಂ ತೀರೆ (ಕ,ಛ) ಳೆಲ್ಲಮಂತಿರೆ (ಟ) (19) ತ್ತಿರ್ದು ನೇಸಱ್ (ಕ) (20) ಗಜಮೆಯ್ದುವುದುಂ (ಕ) (21) ಪೋದಾಗಳೆ (ಗ,ಛ) ಪೋದೊಡೆನಗು (ಜ) (22) ಪಲ ವುಂತೆಱದಿಂ (ಗ, ಛ) (23) ಅಲ್ಲಿಂದಿೞಿದು ವಿಶ್ರಮಿಸಿರ್ದು (ಕ,ಜ,ಟ) (24) ದೆಸೆಗಳಂ (ಕ)

ಕಂ|| ಜಳವಿಹಗಂಗಳ ಕಳ[1]ರವ |
ವಿಳೆಗೀಶನ ಕಿವಿಗೆ ತೀಡೆ ಬಱಿಯಂ ನೀರ್ವೂರ್ ||
ಗಳ ಕಂಪನೆತ್ತಿ ಮಂದಾ |
ನಿಳನೆಸಗೆ ಮನೋನುರಾಗದಿಂದಾ ದೆಸೆಯಂ || ೩೨ ||

ವ|| ನೋಡಿ ನಡೆದು ಸರೋವರಮನತಿಮನೋಹರಮಂ ಕಂಡಲ್ಲಿ ಪಾದಪ್ರಕ್ಷಾಳ[2]ನಂಗೆಯ್ದು [3]ಅರ್ಹತ್ಪರಮೇಶ್ವರಂಗೆ ಭಕ್ತಿಪೂರ್ವಕಂ ಸ್ತುತಿಗಳಂ ಪೇೞ್ದು ಪೊಡೆವಟ್ಟು ಬಱಿಕ್ಕೆ ನಡುನೀರ್ವರಂ [4]ಪೊಕ್ಕುವೊಂದುತಾವರೆಯೆಲೆಯೊಳ್ ನೀರಂ ಮೊಗೆದುಕೊಂಡು ಕುಡಿದು ಮಗುೞ್ವಾಗಳ್ ಕಾಲಂ ನೆಗಳ್[5] ಪಿಡಿಯೆ ಯೆನಗಿಂ ಪೆಱದಾಸೆಯಿಲ್ಲೆಂದಿಂತೆಂದಂ—

ಕಂ|| ಆ ಪಿರಿಯ [6]ಬಾವಿಯೊಳ್ ಬಱಿ |
ಕಾ ಪುಲಿ [7]ಪಾಯ್ವೆಡೆಯೊಳಿಂತು ಬರ್ದುಕಿದೆನೆನಗಿ ||
ನ್ನೀ ಪದದೊಳ್ ನೇಮಿಜಿನ |
[8]ಶ್ರೀಪದಮೆ ಸುಖಪ್ರದಂ ದಲೆಂದು ವರಾಂಗಂ || ೩೩ ||

ವ|| ಅಂತು ನೇಮಿಭಟ್ಟಾರಕರಂ ನೆನೆದು ಪಂಚನಮಸ್ಕಾರಮಂ [9]ಜಪಿಸುತ್ತಿರೆ [10]ಯಕ್ಷ ದೇವತೆ ತನಗಾಸನಕಂಪಮಾಗೆ ತನಗಮಾತಂಗಂ ವರ[11]ದತ್ತಭಟ್ಟಾರಕರೊರ್ವರೆ ಗುರುಗಳ ಪ್ಪುದಱಿಂದಾ[12]ತನುಪಸರ್ಗಕ್ಕೆ ತನಗಾಸನಕಂಪಮಾದೊಡೆ ಬಗೆದಱಿದು ಬಂದು ನೆಗಳಂ ಬಿಡಿಸಿದೊಡೆ ಮೆಲ್ಲ[13]ನಲ್ಲಂ ಪೊಱಮಟ್ಟು ಬಂದು ಕೊಳದ ತಡಿಯೊಳ್ ಕುಳ್ಳಿರ್ದೊಡಾ ಯಕ್ಷ ದೇವತೆ ವರಾಂಗನ ಪುರುಷ[14]ವ್ರತದಳವನಾರಯ್ವೆನೆಂದು ನವಯೌವನೆಯಪ್ಪ ಕುಮಾರಿಯಾಗಿ [15]ಬಂದಿದಿರೊಳ್ ನಿಂತಿಂದೆಂದಳ್.

ಕಂ|| ಅರಸರ ಮಗಳೆಂ ಕನ್ನೆಯೆ |
[16]ನೆರೆದೊರ್ವ ನೃಪಾತ್ಮಜಂಗೆ ಕುಡಲಿರ್ಪೆಡೆಯೊಳ್ ||
ನೆರೆ[17]ದು ವನೇಚರರಿಱಿದೊಡೆ |
ಪರೆದೋಡಿದರೆನ್ನ ಸಿವಿಗೆಯಂ ಬಿಸುಟೆಲ್ಲರ್ || ೩೪ ||

ವ|| [18]ಅಂತು ಪಲಂಬರೆಲ್ಲಮೋಡಿ ಪೋಗೆಯುಮೆನ್ನುವರೆಲ್ಲಂ ಜವನ ಬಾ(ವಾ)ರಿಗೆ ಸೋವತಮಾಗೆಯುಂ, ಆಗಳಾನೊರ್ವಳೆ ಪಱುವಿನೊಳಗಾದೆನೀಗಳೆನ್ನ ಪುಣ್ಯದಿಂ ನಿನ್ನನಿಲ್ಲಿ

(1) ರವಮುಮಿಳೆ (ಜ) (2)ನಮಂಗೆಯ್ದು (ಛ) ಸುಚಿತ್ತದೊಳ್ ಸರ್ವಜ್ಞಂಗೆ ಭಕ್ತಿಯಿಂ ಸ್ತುತಿಗೆಯ್ದು (ಕ,ಚ,ಟ) (4) ಪೊಕ್ಕುತಾವರೆ (ಕ,ಜ,ಟ) (5) ಪಿಡಿವೊಡೆನಗಿಂ (ಕ).ಪೆರವಾಸೆ (ಕ) (6) ಬಾವಿಯೆಡೆಯೊಳ್ (ಖ) (7) ಕೊಳ್ವೆಡೆಯೊಳಂತು (ಗ) (8) ಶ್ರೀ ಪಾದಮೆ ಸುಖಾಸ್ಪದಂದಲೆಂ (ಕ) ಪಾದಂಗಳೆಂದು (ಗ) (9) ಮನೋದುತ್ತಿರೆ (ಗ,ಛ) (10) ಯಕ್ಷಿಗಾಸನ (ಕ) (11) ದತ್ತಾಚಾರ್ಯರೊರ್ವರೆ (ಕ,ಜ) (12) ತಾನಾತನು ಪಸರ್ಗಮಂ ಮಾಣಿಸಲೆಂದು (ಕ,ಛ) (13) ಲ್ಲನೆಪೊಱ (ಕ,ಛ) (14) ವ್ರತದಳವಿಯನೋ(ಛ) ತದಳವುಮ(ಜ) ದಳವಂನೋಳ್ಪನೆಂದು (ಗ) (15) ಬಂದಿಂತೆಂದಳ್ (ಕ,ಛ) ಬಂದಿದಿರೊಳಿಂತೆಂದಳ್(ಜ,ಗ) (16) ನುರುಮುದ ದಿಂದೊರ್ವ ನೃಪಗೆ ಕುಡಲೊಯ್ವೊಡೆ (ಕ,ಜ) ಕುಡಲಿರ್ದೊಡೆ (ಛ) (17) ದುಂವನಚರರ (ಕ) (18) ಅಂತು ಪಲರುವಡೆಯುರುಮೆಮ್ಮವರೆಲ್ಲರಱ್ಕಡೆಯುಮಾನೊರ್ವಳೆಪಱುವಿನೊಳಿದೆನ್ನಪುಣ್ಯದಿಂನಿನ್ನಂ (ಕ, ಜ) ಅಂತು ಪರದಡೆಯು ಮೆಮ್ಮವರೆಲ್ಲರುಮಱ್ಕಡೆ (ಛ)

ಕಂಡೊ, ನೀವೆನಗೆ[1] ಗತಿಯುಂ ಪತಿಯುಮಪ್ಪೊಡಂ ನೀಮೆಯೆನ್ನಂ ಕೆಯ್ಕೊಳ್[2] ಳ್ವೇೞ್ಪುದು ಎಂದೆನಿತಾನುಂತೆಱದಿನಲಿಪಂ ತೋಱಿ ನುಡಿಯೆ ವರಾಂಗನಿಂತೆಂದಂ—

ಕಂ|| ಕುಲವಧುವ ನೀಯೆ ತಪ್ಪುದು |
ಬೆಲೆವೆಣ್ಣಂ ಬೆಲೆಗೆ ತಪ್ಪುದಲ್ಲದೆ ಮಱೆ[3]ವಾ ||
ೞೊಲಿವ ಕುಲವಧುಗೆ ಬಯಸಿದೊ |
ಡಲಂಘ್ಯಪುರುಷವ್ರತಕ್ಕೆ [4]ಬನ್ನಂ ಬರ್ಕುಂ || ೩೫ ||

ವ|| "ಒಲ್ಲೆ"ನೆನೆ "ನೀನೊಲ್ಲದೊಡಾನಮೋಘಂ ಸಾವೆ" ನೆನೆ "ಸತ್ತೊಡಂ [5]ನಿನ್ನ ಪ್ರಾಣಮೊಂದೞಿಗುಂ. ಶೌಚವ್ರತಮೆನಗೆ ಕೆಟ್ಟೊಡಂ ಪುರುಷವ್ರತಮುಂ ಶ್ರುತಮುಂ ಕುಲಮುಂ ಚಲಮುಂ ಮತಿಯುಂ ಗತಿಯುಂ ಕಿಡುಗುಮಿಂತಿನಿ[6]ತುಮಂ ಕಿಡಿಸಲಾಱೆಂ, ನಿನ್ನ ನೆಂತು ಮೊಲ್ಲೆಂ [7]ಮೆಚ್ಚಿಡದಿ" ರೆಂದಾಗಳ್ ಮೆಚ್ಚಿ ಯಕ್ಷಿದೇವತೆ ಗಗನತಳಕ್ಕೊಗೆದು ತನ್ನ ದಿವ್ಯಸ್ವರೂಪಮಂ ತೋಱಿ ವರಾಂಗಂಗಿಂತೆಂದಳ್— "ನಿನ್ನ ಶೌಚ[8]ವ್ರತದಳವನಾರಯ್ದು ಮೆಚ್ಚಿದೆಂ. ನೀನುಮಾನುಂ [9]ಸಧರ್ಮಿಗಳ್" ಎಂದಱಿಯೆ ಪೇೞ್ದದೃಶ್ಯೆಯಾಗಿ [10]ಪೋದೊಡಲ್ಲಿಂದೆೞ್ದು ಮುನ್ನಿನಂತೊರ್ವನೆ ಮುಂದಂತೆ ನಡೆದು ಪಸಿದಾಗಳ್ ಪಣ್ಪಲಂಗಳಂ ತಿಂದು ನೀರಡಸಿದಾಗಳ್ ನಿರ್ಝರೋದಕಮಂ ಕುಡಿದು ಬೞಲ್ದಾಗಳ್ ರಮ್ಯಮಪ್ಪೆಡೆಗಳೊಳ್ ವಿಶ್ರಮಿಸುತ್ತುಂ ಮತ್ತಂ [11]ತೊೞಲ್ವನಂ.

ಕಂ|| ಕಾ[12]ಡೆೞ್ದು ಕೂಡೆ [13]ಕರ್ಗಿದ |
ಕಾಡೆಮ್ಮೆತ್ತರ್ಪಂತೆ ಮಸಗಿ ಕವಿತಂದು [14]ಪಲರ್ ||
ಬೇಡರ ಪಡೆ ಕೊಲಲಂತಾ |
ಬೇಡರಸಂ ಪರಕೆಗುಡುವಮಾತನನುಯ್ವಂ || ೩೬ ||

ವ|| ಎಂದಡಸಿ ಪಿಡಿದು [15]ಜಡಿದೊಡಗೊಂಡುವರೆ 'ಶು[16]ಭಕರ್ಮದುದಯಮಿನ್ನು[17]ಮುಂಟದನೆಯ್ದೆನೋೞ್ಪೆ' ನೆಂದು ಬಗೆದು[18]ಪೋದೊಡೆ ಆತನನೊಯ್ವುವಂದರೀತನಂ ತಂದೆವೆಂದು ತಮ್ಮರಸಂಗೆ ತೋಱಿದೊಡೆ 'ನಾಳೆ[19]ಬಾವುದೆವಸದೊಳ್ ದೇವತೆಗೆ ಪರಕೆಗುಡುವಮಾ[20]ತನನಿಂದಿನದೆವಸಂ ಕಾದಿರಿ' ಮೆಂದೊಡೆ ಎಲ್ವಿನೊಳ್ ಮಾಡಿದ ಪಸಿಯತೊವಲೊಳ್ ಪೊದಯಿಸಿದ ಪಡುಕೆನಾರ್ಪ ಗುಡಿ[21]ಸಿಲೊಳಿರಿಸಿದೊಡೆ[22]ತೊವಲ ಕೊೞೆಯುಂ ಪುೞುಗಳುಂ ಮೇಲೆ (ಗೆ) ಸುರಿಯೆ ಪೊ[23]ನ್ನೊಣಂಗಳ್ ಮೇಗೆ ಮುಸುಱಿ ಮೆಯ್ಯುಂ ಕಡಿಯೆ ಮೂಗಂ ಮುಚ್ಚಿ ಕರಂ

---

(1) ಪತಿಯುಂಗತಿಯುಂ (ಕ) (2) ಕೆಯ್ಕೊಳ್ಳಂ ದೆನಿತಾನುಂ (ಕ) (3) ವಾಳ್ಗೊಗೆದಕುಲವಧುಗೆ (ಕ, ಗ, ಜ) ಮರೆವಾಳೊಲೆವಕುಲವಧುವಂ (ಟ) (4) ದೋಷಂ (ಕ, ಜ, ಟ, ಜ) (5) ಧರ್ಮಮೊಂದೇ ಪೋಕು ಸದ್ಧರ್ಮದ ವ್ರತಮೆನಗೆ (ಕ, ಜ) ನಿನ್ನವೊಂದೇಪ್ರಾಣಂ ಕಿಡುಗುಂ ಮೆನ್ನಶೌಚಂ (ಛ) (6) ತಿನಿತು ಕಿಡುಗು ಮಿಂತಿನಿತುಮಂ (ಜ, ಗ, ಛ) (7) ಲ್ಲೆನೆಂದೊಡೆಮಚ್ಚಿ (ಕ) (8) ವ್ರತಮಂ (ಕ) (9) ಸದ್ಧರ್ಮಿಗಳ್ (ಕ) ಸಧರ್ಮರೆಂದು (ಕ, ಛ) (10) ಪೋದಾಬೞಿಯಂ ಮತ್ತಮರಂತಂತೆ (ಕ, ಜ) (11) ಸುತ್ತುತ್ತೊೞಲ್ವಂ (ಜ) (12) ಡೆರ್ದು (ಕ) (13) ಮಸಗಿದ (ಕ, ಜ) (14) ಪಲರ್ ಬೇಡರಸ ಬೇಡಕೊಲಲ್ವೇಡರಸಂ (ಛ) ಕರ್ಗಿಕವಿತಂದು ಪಲರ್ ಬೇಡರ್ ಕೊಲವೇಡರಸಂ (ಜ) (15) ಕಟ್ಟಿಕೊಂಡುಯ್ವಾಗಳ್ (16) ಕರ್ಮದುದಯಂ (ಕ, ಜ) (17) ಟದಂ ನೋೞ (ಕ) (18) ಪೋದೊಡವಂದಿರೀತನಂ (ಕ, ಜ, ಛ) (19) ಜಾವದಿವಸದೊಳ್ ಪರಕೆ (ಕ) ಬಾಯದೆವಸ (ಗ) ಬಾಉದೆವಸದೊಳ್ (ಛ) (20) ಮಾತನಂ ಕಾದಿರಿಂ (ಕ) (21) ಸಿಱೊಳಗೊಯ್ದಿರಿಸಿ (ಛ) (22) ಪೊನ್ನಡವುಂ (ಕ) ಪೊನ್ನೊಣಂಗಳ್ (ಕ, ಛ) (23) ತೊವಲಕೊಳೆಯುಂ.

ಪೇಸಿಯೊ[1]ೞಕರಿಸುತ್ತುಂ ಚಿಂತಿಸುತ್ತುಮಂದಿನಿರುಳೊಂದುನರಕದೊಳಿರ್ದೊಂದುಭವದಂತಾಗೆ ತನ್ನೊಳಿಂತೆಂದು [2]ಬಗೆಗುಂ—

ಉ|| ಮುನ್ನಿನ ಸಾವನೆಯ್ದಿದೆಡೆಗಳ್ ಕಡುಲೇ[3]ಸವಱಿಂ ಕನಿಷ್ಠ[4]ವಃ |
ಲ್ಲಿನ್ನವು ದುಃಖ[5]ಮಿಲ್ಲಿದು ಮಹಾದುರಿತೋದಯಮಕ್ಕು ಮಾದೊಡೇ ||
ನಿನ್ನುಮವುಂಕೆ [6]ಬರ್ಪುವೊಳವಪ್ಪೊಡೆ ಬರ್ಕೆನಗಾನೆ ನೆಟ್ಟನೆಂ |
ದುನ್ನತಚಿತ್ತನಾದನನಿತೊಂದುಪಸರ್ಗಮೊಳಾ (ಳಂ) ನರಾಧಿಪಂ || ೩೭ ||

ವ|| [7]ಎಲ್ಲೆಡೆಯೊಳಮಾತ್ಮನೊರ್ವನೆಯೆಂಬೇಕತ್ವಮುಂ ಭಾವಿಸುತ್ತುಮಿರೆ ನೇಸಱ್ ಮೂಡಿದಿ[8]ಂಬಱಿಯಮಾತನಂ ದೇವತೆಯ ಮು[9]ದಣ್ಗೆ ತರಿಸಿ ಕೊಲಲೆಂದಿರ್ಪನ್ನೆಗಂ [10]ಅವ್ಯಾಧರಾಜನ ಮಗಂ ಕುಸುಂಬನೆಂಬವಂ ಬೇಂಟೆಗೆ ಪೋದಲ್ಲಿ ಪಾವು[11]ಕೊಂಡುದೆಂದು ಪೊತ್ತು ತಂದಿೞಿಪಿದೊ[12]ಡವನಂ ಕಂಡು ತಮಗೆಲ್ಲಂ ಆಗಳ್ ಪ್ರಳಯಂ[13]ತಗುಳ್ದಂತೆ ಸಂಕಟಂಬಟ್ಟು ಬಱಿಕ್ಕದರ್ಕೇಗೆಯ್ವಂ ? ಆರ್ಬಲ್ಲರ್ ? ಎನುತ್ತುಮಿರ್ಪನ್ನೆಗಂ ದೇವತೆಯ ಮುಂದಿರ್ದ ವರಾಂಗನಂ ಬೆಸಗೊಂಡೊಡಾ 'ತ ನಾಂ ಬಲ್ಲೆ' ನೆನೆ ಕರಮೊಳ್ಳಿತಾಯ್ತೆಂದು ಬೇಗಮಿದಂ ತೀರ್ಚಿಮೆಂ[15]ದಾಗಳ್ ಕಟ್ಟಂ ಬಿಡೆ ಮಡುವಿನೊಳ್ ಮಿಂದು[16]ದಾಕ್ಷಿಕನಂ ಶುಚಿಮಾಡಿರಿಸಿ ಮಂತ್ರವಿಧಿಯಿಂ ಸ್ತೋಭಂಗೊಳಿಸಿ ವಿಷಮುಂ [17]ಕಳೆದೆತ್ತಿಪೋದೊಡೆ ಅದಂ ಕಂಡು—

ಕಂ|| ತೊಟ್ಟನೆ ರಾಗಂ ಮನದೊಳ್ |
ಪುಟ್ಟಿ ಕಿರಾತೇಶನೊಸೆದು ಪಲವುಂಪೊನ್ನಂ ||
ಕೊಟ್ಟೊಡವಂ ಕೊಳ್ಳದೆ ನಾ[18] |
ಟ್ಬಟ್ಟೆಯ ದೆಸೆದೋೞಲಟ್ಟಿಮೆನಗದೆ ಸಾಲ್ಗುಂ || ೩೮ ||

ವ|| ಎಂದೊ'ಡಿದೇಂ ಪಿರಿಯನೊ !' ಎಂದು ಮನದೊಳ್ ಬಗೆದು ಕಿರಾತರಾಜ[19]ನಂದೊರ್ವನಂ ಕಳಿಪಲಟ್ಟಿದೊಡಾತನ ನೊಡಗೊಂಡು ನಾಡೆಯುಂತರಂ ಪೋಪಾಗಳ್ ತನ್ನ ನಾಡ ದೆಸೆಯತ್ತಲ್ ಪೋಗಲೊಲ್ಲದೆ ಲಲಿತಪುರದತ್ತಣ ಬಟ್ಟೆಯುಂ[20]ಬೆಸಗೊಂಡೊಡೆ ತೋೞಿ ಬೇಡಂ [21]ಮಗಲ್ದಾಗಳ್, ಬಟ್ಟೆವಿಡಿದು ಮುನ್ನಿನಂತೊರ್ವನೆ ನಡೆದು ನೇಸಱ್ಪಟ್ಟಲ್ಲಿಯೆ[22]ವಿಶ್ರಮಿಸಿ ಬಯ್ಗಿರುಳೆೞ್ದು ಪಯಣಂ[23]ಬೋಪಾತನಲ್ಲಿಯೊಂದು ಪಿರಿಯ[24]ಸಾರ್ಥಂ ಬೀಡುವಿಟ್ಟಿರ್ದೊಡಾ ಬೀಡಿನ—

---

(1) ಯೋೞಕರಿಸುತ್ತು (ಕ) (2) ಬಗೆವಂ (ಗ) (3) ಲೇಸಿದಱಿಂ (ಕ,ಜ) ಱಿಂದೆಕಷ್ಟ (ಗ) (4) ಮಿನಿಲ್ಲಳು (ಭ) (5) ಮಿಂತಿದು (ಕ) ಮಿಲ್ಲಿದು (ಜ) (6) ಬರ್ಪರೊ (ಕ) ಬರ್ಪನ (ಜ) (7) ಎಲ್ಲಿಯುಮಾತ್ಮ (ಕ, ಜ, ಟ) (8) ಡಿದಾಗಳ್ (ಕ) (9) ಮುಂದೆ (ಕ, ಜ) (10) ತದ್ವ್ಯಾಧ (ಕ,ಜ) (11) ಕೊಳಲ್ (ಗ) ಕೊಂಡೊಡೆ (ಕ) ಕೊಳಲೊಡಂ (ಭ) (12) ದೊಡದಂ (ಗ) ದಂಗಂಡುತನಗಾಗಳ್ (ಕ) ದಿೞಿಪಿದುದಂ (ಭ) (13) ಕವಿದಂತೆ (ಕ, ಭ, ಜ) (14) ದಕ್ಕಿನ್ನೇಗೆಯ್ವಂ (ಭ) ಬಟ್ಟೆದಾರ್ರ್ ಬಲ್ಲರೆನುತ್ತಿರೆ (ಕ) (15) ದಾಗಳ್ ಮಡು (ಕ) (16) ಕಾಕ್ಷಿಕನಂ (ಕ) (17) ಕಳೆಯೆ ಅತನೆರ್ದೊಡೆ (ಗ) (18) ನಾಡ್ಬಟ್ಟೆಯ (ಕ) ಯನೊ ಮನದೊಳೆಂದು ಮೆಚ್ಚಿ ವ್ಯಾಧರಾಟನೊರ್ವ (ಕ) ಯನೊಮುಹಾನುಭಾವನೊ (ಭ) (19) ಜನೊರ್ಬ ಕಿರಾತನನಟ್ಟಿದೊಡಾತನಟ್ಟೆ (ಭ) (20) ಬೆಸಗೊಳಲುಬ್ದಕಂ ಬಟ್ಟೆಯುಂ (ಕ) ಬೆಸಗೊಳೆಬೇಡಂತೋೞಿ (ಗ) (21) ಮಗುೞ್ದೊಡೆ ಬಟ್ಟೆಯಂನೋಡಿ (ಕ) ಬಟ್ಟೆಯಂನೋಡಿ ಮುನ್ನಿನಂ (ಜ) (22) ಪಟ್ಟುಮುನ್ನಿನಂತೊರ್ವನೆ (ಕ) (23) ಬೋಪಲ್ಲಿ (ಕ,ಜ) ಪೋಪನನಲ್ಲಿ (ಭ) (24) ಬೀಡು (ಕ, ಭ)

ಕಂ|| ಪೊಲಗಾಪಿನವರ್ ಕಾಣುತೆ |
ಪಲರುಂ ಪರಿತಂದು ಬೀಹುಬಂ[1]ದವನಿವನಂ ||
ಕೊಲೆ[2]ಗೆಯ್ದಿಸಿ ಮಿನ್ನೆಂದೊಡೆ |
[3]ಪಲಬರ್ ಪಿಡಿದುಯ್ವೆಮೆಂಬ ಬಗೆಯಂ ತಂದರ್ || ೩೯ ||

ವ|| ಎ[4]ಂದಾತನಂ ಪಿಡಿದುಕೊಂಡು ತಮ್ಮ ಬೀಡಿಂಗೊಯ್ದು ಸಾಗರಬುದ್ಧಿಯೆಂಬ ಸೆಟ್ಟಿಗೆ ತೋಱಿದೊಡೆ ಸೆಟ್ಟಿಯಾತನ ಶುಭಲಕ್ಷಣಾ[5]ಲಂಕೃತಮಪ್ಪ ರೂಪಂ ಕಂಡು ಮನದೆಗೊಂಡು ಸಾರೆ ಕರೆ[6]ದು 'ನೀನಾರ್ಗೆತ್ತಣಿಂ ಬಂದಿರೆಲ್ಲಿಗೆ ಪೊದಪಿರೆ'ನೆ 'ನಾಂ ದೇಶಾಂತರಿಗನೆಂ, ಕಶ್ಚಿದ್ಭ ಟ[7]ನೆಂಬೆಂ, ತೀರ್ಥಯಾತ್ರೆಗೆ ಪೋದಪೆಂ, ನಿಮ್ಮ ಬೀಡಿನೊಡನೆ ಬರ್ಪೆಂ' ಎಂದು [8]ಸಾಮಾನ್ಯಮಂ ನುಡಿದೊಡಂತಕ್ಕುಮಿಾತಂ ಸಾಮಾನ್ಯನಲ್ಲನುಂತುಂ ಮಹಾಪುರುಷನಾಗಲೆವೇಱ್ಕುಮೆಂದು ಕೆಯ್ಕೊಂಡಿರೆ ಬೀಡೆಲ್ಲಮಾತನ ತೇಜಕ್ಕಂ ಬುದ್ಧಿಗಂ ಮಚ್ಚಿ ಕೊಂ[9]ಡಾಡುತಿರೆ ಕೆಲವು [10]ದಿವಸ ದಿಂದಾ ಬೀಡನಿೞಿದು ಸೂಱೆಗೊಳಲೆಂದು—

ಕಂ|| ಕಾಳನುಮತ್ಯುಗ್ರಮಹಾ |
ಕಾಳನುಮೆಂಬರ್ ಕಿರಾತರಾಜರ್ ತಮ್ಮ ||
ಳ್ಪಾಳುಮು[11]ನುರ್ಕಾಳುಮನೊ |
ಳ್ಪಾಳುಮನೊಡಗೊಂಡು ಬಂದು [12]ತಾಗಿದರಾಗಳ್ || ೪೦ ||

ವ|| ಆ[13]ಗಳಾಸಾಗರಬುದ್ಧಿ ಕಂಡು ಸನ್ನಣಂಬೊಕ್ಕು ಬೀಡಿನಾಳೆಲ್ಲಮಂ ಕೂಡಿಕೊಂಡು ಕಶ್ಚಿದ್ಭಟನಂ ಸ್ತ್ರೀಜನಕ್ಕಂ ಬೀಡಿಂಗಂ ಕಾಪು[14]ವೇಱ್ದಿರಿಸಿ ಪೊಱಮಟ್ಟು ಕಾದಿ[15]ಬೇಡರಸನಂ ಬಿನ ಕೋಳ್ಗೆ ನಿಲಲಾಱದೆ ಬೀಡಿನ ನೆರವಿ ಪರಿದೋಡಿ ಪೋಗೆ ಬೇಡರ್ ಸೂಱೆಗೊಳಲ್ ಕವಿದು ಬಂದು ಪೆಂಡಿರುಡೆಯನುರ್ಚುವ[16]ಬೇಡರಂ ಕಶ್ಚಿದ್ಭಟಂ ಕಂಡೊಂದುಬಾಳನತ್ತಪರಮುಮಂ ಕೊಂಡಿದಿರ್ಚಿದರನೆ[17]ರಱ್ಕಡಿಯಾಗಿ ಪೊಯ್ದು ಮಿಱಿದುಂ ನಿಂದಿರ್ಪಿನಂ ಕಾಳನೆಂಬ ಬೇಡರಸನ ಮಗ[18]ನೆಯ್ದೆ ವಂದೊಡವನನಿಕ್ಕಿದೊಡೆ[19]ತನ್ನ ಮಗನಂ—

---

(1) ದನಿತಂ (ಟ) ವಂದನಿವಂ (ಗ) (2) ಗೆಯ್ದಿದೆನಿಸಿ (ಖ, ಗ) ಗೆಯ್ದದನೆಮ್ಮಿಂ (ಭ) (3) ಕೆಲಬರ್ (ಗ,ಭ,ಜ) (4) ತಂದಾತನಂ ಪಿಡಿದು ಬೀಡಂ (ಕ,ಜ) ಅಂತು ತನ್ನ ಪಿಡಿದುಕೊಂಡು ಬೀಡಿ (ಭ) (5) ಳಂಕಾರ ಮಪ್ಪ (ಗ) ರೂಪಂಕಂಡು ಮಹಾಪುರುಷನಾಗಲೆ (ಟ) (6) ದುಕುಳ್ಳಿರಿಸಿನೀನಾ (ಗ) ಕರೆದೆತ್ತಣಿಂ ಬಂದಿರೆಲ್ಲಿ ಗೋದಪಿರ್ಪೆಸರೇನೆಂಬುದನೆ (ಕ) ಲ್ಲಿಗೋದಪ್ಪಿರ್ಬೆಸರೇ (ಜ) (7) ನೆಂಬೆಂ ಆಂ ನಿಮ್ಮೊಡನೆ ಬರ್ಪೆನೆಂದು (ಕ,ಜ) (8) ಸಾಮಾನ್ಯವಚನಂಗಳಂನುಡಿವುದುಂ ಮಹಾಪುರುಷ (ಕ,ಜ) (9) ಡಾಡೆ (ಕ) ಮಚ್ಚಿನಚ್ಚಿ ಕೊಂಡಾಡೆ (ಗ) (10) ದೆವಸದಿಂದಾ ಬೀಡನಿೞಿದುಕೊಳಲೆಂದು (ಕ,ಜ) (11) ನೊಳ್ಪಾಳುಮನುರ್ಕಾಳುಮ (ಕ) (12) ಮುತ್ತಿದ ರಾಗಳ್ (ಗ,ಭ,ಜ) (13) ಸಾಗರವೃದ್ಧಿ ಸನ್ನಾಹಂ (ಭ) ಸನ್ನಾಹಂಗೆಯ್ದು (ಕ,ಜ,ಟ) (14) ವೇಱ್ದುಪೊಱ (ವ) (15) ಬೇಡರಬೀಡಿಂಗಳ್ಕಿ (ಕ) ಬೀಡಿನನೆರವಿಸೋಲೆ (ಕ) ಬೇಡರಂಬಿನಳ್ಕೇಱಿಂಗಳ್ಕಿ ಬೀಡಿನನೆರವಿಗೆ ಸೋಲ್ತು (ಭ) (16) ಬೇಡವಡೆಯಂ ಕಂಡುಕಚ್ಚಿದ್ಭಟಂ (ಭ) ಬೇಡರಂ ಕಶ್ಚಿದ್ಭಟಂಕಂಡು ಬೇಗನೊಂದು ಬಾಳಂ ಪಲಗೆಯುಮಂ (ಭ) ಬಾಳಮತ್ತಪರಮುಮಂ (ಖ) (17) ನೆರಱ್ಕಂಡಮಪ್ಪಿನಂ ಪೊಯ್ದುಕಾಳನೆಂಬ (ಕ) ನೆಱ ಱ್ಕಂಡಮಾಗೆ ಪೊಯ್ದು (ಕ) ನೆರಳ್ಬಂದ (ಟ) (18) ನೆಯ್ತಂದೊಡೆ (19) ತನ್ನಮಗನಂ

ಕಂ|| ಕೊಂ[1] ದೆತ್ತವುಗುವನವನಂ |
ಕೊಂದಲ್ಲದೆ ಮಾಣೆನೆಂದು ತಱಸಂ[2] ದುಱದೆ ||
ಯ್ತಂದ ಮಹಾಕಾಳನುಮಂ |
ಕೊಂದು ಕರಂ ನೊಂದು [3] ಬಿೞ್ದನಂದು ಕುಮಾರಂ || ೪೧ ||

ವ|| [4] ಆಗಳ್ ತಮ್ಮ ನಾಯಕರ್ ಸತ್ತು[5] ದಂ ಕಂಡು ಬೇಡವಡೆ ಪರೆದೋ[6] ಡಿ ಕೆಟ್ಟು ಪೋದೊಡದಂ ಕಂಡು ಸಾಗರಬುದ್ಧಿ ತನ್ನ ಪೆಱಪೋದಾ[7] ಳೆಲ್ಲಮಂ ಮಗುೞೆ ಕೂಡಿಕೊಂಡು ಬಂದು ಸತ್ತಬೇಡನಾಯಕರುಮಂ, ನೊಂದು ಬಿೞ್ದಿರ್ದ ಕುಮಾರನುಮಂ ಕಂಡು[8] ಒಸೆದಾತನನೆತ್ತಿ ಕೊಂಡು ಪು[9] ಣ್ಣನುಡಿಯಿಸಿ ಕೆಲವಾನುಂ ದೆವಸದಿಂ ಕುಮಾರಂಗಾಸೆಯಾದೊಡೆ ಬೀಡಿನ ಪ್ರಭು[10] ಗಳೆಲ್ಲರುಮಂ ನೆರೆಪಿ ಸೆಟ್ಟಿ[11] ಯಿಂತೆಂದಂ—

ಉ|| ಈತನೆ ಕಾದಿ [12] ಕೊಂದನೆಡರ್ಗೀತನೆ ತಾಂ ನಮಗಾದನರ್ಗ[13] ಮಿ |
ನ್ನೀತನೆ ಮಿಕ್ಕನೊಳ್ಪನೆಡೆಗೀತನೆ ತಕ್ಕನನೂನವೃತ್ತಿಯಿಂ ||
ದೀತನೆ ಮಿತ್ರನೀತನೆ ಸುಪುತ್ರನುದಾತ್ತಗುಣ[14] ಪ್ರಯುಕ್ತ ನಿಂ |
ತೀತನೆ ಶೌರ್ಯಧಾರಿ ರಿಪುಹಾರಿ ನಿಜಾನ್ವಯ[15] ಕಾರಿ ನಿಶ್ಚಯಂ || ೪೨ ||

ವ|| ಎಂದು ಪೊಗ[16] ೞ್ದೀ ಪದವಿಗೀತನೆ ಜ್ಯೇಷ್ಠಪುತ್ರನೆಂದು[17] ಕೊಂಡಾಡಿ ಸುಖದಿಂ ನಿಚ್ಚ[18] ವಯಣದಿಂ ಪೋಗಿ ಲಲಿತಪುರಮಂ ಪೊಕ್ಕು ಮಹೊ[19] ೀತ್ಸವದಿನಿರೆ ಕೆಲವು ದೆವಸದಿಂ ದಲ್ಲಿಯ ವೈಶ್ಯಪ್ರಭುಗಳ್ ನೆರೆದಾತನ ಬುದ್ಧಿಗಂ ಸಾಹಸಕ್ಕಂ [20] ಮಚ್ಚಿ ಪೊೞಲ್ಗೆಲ್ಲಂ ನೀನೆ ಸೆಟ್ಟಿ ಯಾಗಲ್ವೇೞ್ಕುಮೆನೆ ಮುಗುಳ್ನಗೆ ನಕ್ಕು ತಾನವರ ಮಚ್ಚಿಂಗೊಡಂಬಟ್ಟು ಸೆಟ್ಟಿವಟ್ಟಮಂ ಕಟ್ಟಿಸಿ ಕೊಂಡಲ್ಲಿಯೆ ರಾಜಶ್ರೇಷ್ಠಿಯಾಗಿ ಸುಖದೊಳಿರ್ಪನ್ನೆಗ ಮಿತ್ತಂ ಉತ್ತಮಪುರದೊಳ್ ವರಾಂಗನೊ ಡನೆ ಪೊಱಮಟ್ಟ[21] ರಾಜಭೃತ್ಯವರ್ಗಮೆಲ್ಲಂ ನಾಡೆಯುಂತರಂ ಕುದಿರೆಯ ಬೞಯುಂ ತಗುಳ್ದಿಯ್ದು ಲಾಱದೆ ಮಗುೞ್ದು ಬಂದು ಧರ್ಮಸೇನಮಹಾರಾಜನಂ ಕಂಡಱಯೆ ಪೇೞೆ[22] ಡೆಲ್ಲರುಂ ಚಿಂತಾಕ್ರಾಂತರಾಗಿರ್ದು—

---

(1) ದೆತ್ತವೋಪ (ಕ,ಜ) ದೆತ್ತಉಗುವ (ಛ) ದೆತ್ತವೊಗುವ (ಖ) (2) ದಿರದೆ (ಕ,ಜ) (3) ಬಿರ್ದ (ಕ) ಬಿದ್ದ (ಛ) (4) ಆಗಳ್ನಾಯಕರ್ (ಕ) (5) ದನಱದು ಬೇಡ (ಕ) (6) ಡಿತ್ತದಂ ಸಾಗರವೃದ್ಧಿ ಕಂಡು (ಛ) ಡಿತು ಮತ್ತದಂ ಸಾಗರ (ಜ,ಕ) (7) ಳೆಲ್ಲರುಮಂ ಕೂಡಿಕೊಂಡು (ಕ) ಳೆಲ್ಲರುಮನೊಡಗೊಂಡು (ಗ) ಳೆಲ್ಲಮ ನೊಡ (ಛ) (8) ನುಡಿಯಿಸುತಿರ್ದು (ಕ) ಯಿಸಿತಿರ್ದು (ಛ) ನುಡಿಯಿಸಿ ಬೀಡಿನ (ಗ,ಛ) (9) ಗೊಸೆದು ತನ್ನ ನೆತ್ತಿನುಡಿದು ಕೀರ್ತಿಸುತ್ತಿರ್ದ ಪ್ರಭುವಾಗಳುಂ ನೆರವಿಯುಂ ಬೀಡೆಲ್ಲಂಕೇಳೆ (ಟ) (10) ಪ್ರಜೆಗಳಂ (ಕ) (11) ನೆರೆದ ನೆರವಿಯು ಮೆಲ್ಲಂಕೇಳೆಸೆಟ್ಟಿ (ಕ) (12) ಕಾದ (ಕ,ಟ) ಗೆಲ್ದ (ಛ) (13) ಮಿಂತೀತನೆ (ಗ) (14) ಪ್ರಭು ಶಕ್ತಿಯಿಂದೀತನೆ (ಕ, ಜ) ಪ್ರಯುಕ್ತಿಯಿಂದೀತನೆ (ಟ) (15) ಭಾರಿ (ಗ) ಭಾಗಿ (ಛ) (16) ೞ್ದನ್ನಪದವಿ (ಗ,ಛ) ೞ್ದೀತನೆಜ್ಯೇಷ್ಠ (ಕ,ಜ) (17) ಮಾಡಿಕೊಂಡಾಡಿ (ಕ,ಛ,ಜ) (18) ಪಯಣಂ ಬೋಗಿ (ಗ) ಣದಿಂಪೋಗಿ (ಛ) (19) ತ್ಸಾಹದಿಂ (ಗ) (20) ಮಚ್ಚಿ ನೀನೆ ಸೆಟ್ಟಿಯಾಗಲ್ವೇೞ್ಕುಮೆನೆಯವರ ಮಚ್ಚಿಂಗೊಡಬಟ್ಟು ಮುಗುಳ್ನಗೆ ನಕ್ಕು ಸೆಟ್ಟಿವಟ್ಟಂಗಟ್ಟಿ (ಕ) ಗಟ್ಟಿಸಿಕೊಂಡಲ್ಲಿಯೆ ಸುಖದೊಳಿರೆ—(21) ರಾಜ ಪುತ್ರರೆಲ್ಲಂ (ಕ, ಜ) (22) ಡೆಲ್ಲಂ (ಕ)

ಕಂ|| ಸು[1] ರರಾನುಮಸುರರಾನುಂ |
ತುರಗಾಕೃತಿಯಿಂದಮೊಯ್ದುರೋ [2] ಪೇೞ್ಮಿದಂ ||
[3] ಭರದಿಂದ್ದಾರಯ್ಯದೆ ನಮ |
ಗಿರಲಾ[4] ಗೆಂದೆಲ್ಲದೆಸೆಗೆ[5] ಮಟ್ಟಿದನಾಗಳ್ || ೪೩ ||

ವ|| ಅಟ್ಟಿದೊಡೆ ಕೆಲಬರ್[6] ಪೋಗಿ ವರಾಂಗನ ಕುದಿರೆಯ ಪೋದ ಬೞಿಯಂ ತಗುಳ್ದಡವಿಯಂ ಪೊಕ್ಕು ಅಱಸಿ ನೋೞ್ಪಾಗಳ್ ಮರದ ಕೊಂಬುಗಳೊಳಂ, ಬಿದಿರ[7] ಮುರುಡಿನೊಳಂ ತೊಡರ್ದ[8] ಕಟಕಕಟಿಸೂತ್ರಕೇಯೂರಹಾರಾದ್ಯಾಭರಣಂಗಳಂ [9] ಕಂಡಂತಂತೆ ನೋೞ್ಪುದೊಂದು ಪೞವಾಪಿಯೊಳ್ ಪೊನ್ನಾ ಯುಗಂಗಳಂ ಕಂಡವೆಲ್ಲಮುಂ ಕೊಂಡು ಬಂದು ವರಾಂಗನಮೋಘಂ ಸತ್ತನೆಂಬುದನರಸಂಗಱಿಪಿ ಆತನ ತಾಯ್ ಗುಣವತೀದೇವಿಗಮನುಮತೀದೇವಿವೊದ[10] ಲಾದಾತನ ಪೆಂಡಿರ್ಗಂ ಬಂಧುವರ್ಗಕ್ಕಂ [11] ಪೊೞಲ್ಗೆಲ್ಲಂ ಪೇೞ್ದವಂ ತೋಱಿದಾಗಳ್ ಪ್ರಳಯಪ್ರಕ್ಷೋಭಮಾದಂತೆ—

ಕಂ|| ಅಂತೆಯ್ದಿದ [12] ದುಃಖಂ ಕಿ |
ಚ್ಚಂತೆಯ್ದೆ ತಗುಳ್ದು ತಾ[13] ಯ್ವಿರಂ ತಂದೆಯುಮಂ ||
ತಂತಃ[14] ಪುರಮಂ ಸುತ್ತಿರೆ |
ತಂತಮ್ಮನೆ ಬಡಿದು ಪುಯ್ಯಲಿಟ್ಟೞುತಿರ್ದರ್ || ೪೪ ||

ವ|| ಅಂ[15] ತಿರ್ದಾಗಳನುಮತೀದೇವಿ (ಯಾದಿಗಳ್) ಈ ಶೋಕಾಗ್ನಿಯೊಳ್ ಬೇಯಲಾಱೆಂ ಒರ್ಮೆಯೆ ಸತ್ತು ನೀಗು(ವ)ವೆಂ ಕಿ[16] ಚ್ಚಂದಯೆಗೆಯ್ಸಿಮೆಂದು ಮಾವನ ಕಾಲ್ಗ[17] ಳಂ ಪಿಡಿದೊಡೆ ಧರ್ಮಸೇನ ಮಹಾರಾಜಂಗೆ ಮತ್ತಂ ದುಃಖಮಿರ್ಮಡಿಸೆ ಸೈರಿಸಿರ್ದು "ಬನ್ನಿಂ ನಾಮೆಲ್ಲರುಂ ಗುರುಗಳ್ ಪೇೞ್ದಂತೆ ನೆಗೞ್ವ" ಮೆಂದು [18] ಸೊಸೆವಿರೆಲ್ಲರುಮನೊಡಗೊಂಡು[19] ಬಂದು ಯಮಧರರೆಂಬಾಚಾರ್ಯರಲ್ಲಿಗೆ ಪೋಗಿ ವಿನಯದಿಂ ಬಂದಿಸಿ ಧರ್ಮಮಂ ಕೇಳ್ದ[20] ಲ್ಲಮುನಱಿದು ಬೞಿಯಂ ಸ್ವಾಮಿ ವರಾಂ[21] ಗನ ಶರೀರಮನಾರುಂ ಕಂಡರಿಲ್ಲೆಂದು ಧರ್ಮಸೇನ ಮಹಾರಾಜಂ ಗುರುಗಳಂ[22] ಬೆಸಗೊಳೆ ನಿಮ್ಮಪುಣ್ಯದಿಂದಾತಂ ಬರ್ದುಂಕಿರಲಕ್ಕುಮೆಂದು ಪೇೞ್ದೊಡರಸಂ

(1) ಸುರರಾಜನುಮಸುರ ರಾಜನುಂ ತುರಂಗಕೃತಿ (ಜ) (2) ನೆಟ್ಟನಿದಂ (ಕ,ಛ) (3) ಚರರಿಂದಾ (ಕ) (4) ಲಾರೆಂದು (ಜ) (5) ಗೆನಟ್ಟಿದ (ಜ, ಕ) (6) ಪೋಗಿವರಾಂಗನಂ ಪೋದಬೞಿಯಂ (ಛ) ಕುದಿರೆಯ ಬೞಿಯಂ (ಕ,ಜ) (7) ಸಿಡುಂಬುಗಳೊಳಂ (ಛ) (8) ಕೆಲವೆಡೆಯೊಳ್ ತುರಗಂ ಸತ್ತಿರ್ದುದಂ ಕಂಡುವ ರಾಂಗನಮೋಘಂ (ಜ) ಕೆಲವೆಡೆಯೊಳ್ ಕಟಕಕಟಿಸೂತ್ರಹಾರಾ' (ಕ) (9) ಕಂಡೆತ್ತಿನೋೞ್ಪನ್ನೆಗಮೊಂದು ಪೞವಾವಿಯೊಳ್ ತುರಗಂ ಸತ್ತಿರ್ದುದಂ ಕಂಡು ವರಾಂಗನಮೋಘಂ (ಕ) ಕಂಡು ನೋಡುತ್ತುಂ ಪೋಪಾಗಳೊಂದು ಪೞವಾವಿಯೊಳ್ ಪೊನ್ನಾ (ಗ) (10) ಲಾಗೆ ವರಾಂಗನಪೆಂಡಿ (ಗ) ಲಾದ ಪೆಂಡಿತಿಯರ್ಗಂ ಬಂಧುಗಳ್ಗಂ(ಜ) (11) ಪೊೞಲ್ಗಂ ತೋಱಿಪೇೞ್ದೊಡೆ (ಕ,ಜ) (12) ದುಃಖದ (ಕ,ಛ,ಜ) (13) ತಾಯ್ವಂತಂದೆ(ಕ) ತಂದೆಯುಂ ತಾಯುಮನ್ತಃ (ಖ) ತಂದೆಯುಂ ತಾಯುಂ ಮಂತಾಪುರ (ಛ) (14) ಪುರಮುಂ ಪುರಮಂ| ತಂ (ಕ) (15) ಇರ್ದಾಗಳನುಮತಿ ಮಹಾದೇವಿ (ಕ,ಜ) (16) ೞ್ಚನೀಯಿಂ (ಕ,ಜ) (17) ಲಂ (ಕ) (18) ಸೊಸೆಯರೆಲ್ಲ (ಗ) (19) ಪೋಗಿ (ಕ,ಜ) ಬಂದುವಿನಯದಿಂ (ಖ) ಪೋಗಿ ಪೊಡೆವಟ್ಟು ಧರ್ಮ (ಕ) (20) ಪೇೞ್ದುದಿಂ ಬೞಿಯಂ (ಕ,ಜ) (21) ಗನೊಡಲಂ ಕಂಡೆವಿಲ್ಲೆಮ್ಮ ಪುಣ್ಯದಿಂ ಬರ್ದುಂಕಲೆಡೆಯುಂಟೆ? (ಕ) ಶರೀರಮಂ ಕಂಡರಾರುಮಿಲ್ಲ (ಗ) (22) ಬೆಸಗೊಂಡೊಡೆ ನೀವುಂ ಜಿನಪೂಜೋತ್ಸವಂಗಳಂ ಮಾಡುತಿರೆ ಕಾಣಲಕ್ಕುಮೆನೆ (ಕ) ಮನೆವೊಡೆವಟ್ಟು ಬೀೞ್ಕೊಂಡು (ಗ)

ಸೊಸೆವಿರೆಲ್ಲರುಮಂ ಸಂತೈಸಿ ಮನೆಗೊಡಗೊಂಡು ಬಂದು ದಾನಂ ಪೂಜೆ ಶೀಲಮುಪವಾಸಮೆಂಬ ನಾಲ್ಕುಂತೆಱದ ಧರ್ಮಮಂ ನಡೆಯಿಸುತ್ತುಮಿರ್ದರತ್ತಲ್ ಲಲಿತಪುರದೊಳ್ ವರಾಂಗಂ—

ಮ|| ಪುರ[1] ವಿಂಗಂ ಪ್ರಭುವ[2] ಪ್ಪುದೆನ್ನಳವಿಯೇ ಭೂಪಂಗಿದಲ್ತೆಂದು ಕೊ |
ಕ್ಕರಿಸುತ್ತುಂ ಸುಖದುಃಖಮೆಂಬೆರಡುಮಂ ತಾಳ್ದಿರ್ದು ಸಾಮಾನ್ಯಮ ||
ತ್ಯ್ರರವೋಲ್ ಮುನ್ನಿನ ಕರ್ಮದೊಂದುದಯ[3] ದೊಳ್ ಪಿಂಡಿಂದಗಲ್ದಿರ್ದ ಸಿಂ |
ಧುರಮಿರ್ಪಂತಿರೆ ಕಾಲಮಂ ಕಳಿಪುತುಂ ರಾಜೇಂದ್ರನಿರ್ಪನ್ನೆಗಂ || ೪೪ ||

ವ|| ಆ ಪೊೞಲನಾಳ್ವ ದೇವಸೇನನನಾನೆ[4] ಯುಂ ಬೇಡಿ ಪಡೆಯದಿಂದ್ರಸೇನನೆಂಬರಸಂ ಮೇಲೆತ್ತಿವಂದೊಡಾ ದೇವಸೇನನಾತನನಾವನೊರ್ವಂ ಕಾದಿ ಗೆಲ್ವನಾತಂಗೆ ತಮ್ಮಮಗಳುಮ ನರ್ಧರಾಜ್ಯಮುಮಂ ಕುಡುವೆನೆಂದು (ದೇವಸೇನಂ) ಗೋಸಣೆವಿಡಿಸೆ ಕಶ್ಚಿದ್ಭಟ[5] ನಾಗೋಸಣೆಯಂ ಕೇಳ್ದು ಪಿಡಿದು ತಾನೊರ್ವನೆ ಯುದ್ಧಸನ್ನದ್ಧನಾಗಿ ಪೊಱಮಟ್ಟೊಡರಸನುಂ ತನ್ನ ಚತುರಂಗ ಬಲಂ ಬೆರಸು ಆತನೊಳ್[6] ಕೂಡಿ ಪೋಗಿ ಕಾದೆ ವರಾಂಗನುಂ ತನ್ನ ಭುಜ[7] ಬಲಕ್ಕಾ ಬಲಂ ಸಹ ಕಾರಿಯಾಗೆ ಕಾದಿ ಮಾರ್ಪಡೆಯಂ ತವೆಯಱದಿಂದ್ರಸೇನನನೋಡಿಸಿ ಗೆಲ್ದು[8] ಬಂದು ಮಹೋ ತ್ಸಾಹದಿಂ ಪೊೞಲಂ ಪೊಕ್ಕಿರೆ ದೇವಸೇನಂ ಮೆಚ್ಚಿ ತನ್ನ ಮಗಳುಮನರ್ಧರಾಜ್ಯಮುಮಂ ಕೊಟ್ಟೊ[9] ಡೆ ಮಹಾವಿ[10] ಭೂತಿಯಿಂ ರಾಜ್ಯಂ[11] ಗೆಯ್ಯುತ್ತಿರ್ದನನ್ನೆಗಮಿತ್ತಲ್—

ಕಂ|| ಅತ್ತ ದುರಶ್ವದ ವಶದಿಂ |
ಸತ್ತಂ [12]ಮಹಿಪತಿ ವರಾಂಗನಿನ್ನೇನೆಂದು ||
ದ್ವೃತ್ತಪರಚಕ್ರನರಪರ್ |
ಮುತ್ತಿ ಕೊಳಲ್ ಮಸಗಿ ಬಂದರುತ್ತಮಪುರಮಂ || ೪೫ ||

ವ|| ಅಂತು [13]ಬರೆ ಧರ್ಮಸೇನಮಹಾರಾಜನಿಂತಪ್ಪವಸ್ಥೆಯನೆನ್ನ ಮೆಯ್ದುನಂಗಱಿಯೆ ಪೇೞ್ದಟ್ಟುವೆನೆಂದು ಲಲಿತಪುರಾಧಿಪತಿಯಪ್ಪ ದೇವಸೇನಂ[14] ಗಟ್ಟಿದೊಡಟ್ಟಿದೋಲೆಯಂ ಕಶ್ಚಿ ದ್ಭಟಂ ಕೇಳ್ದು ಕಣ್ಣನೀರಂ ಸೊಸಿಪೊ[15] ಡೆಮ್ಮ ಭಾವನ ಮಗಂ ವರಾಂ[16] ಗಂ ದುಷ್ಟಾಶ್ವಮೊಯ್ಯೆ ಸತ್ತನೆಂದು ಮುನ್ನೆ ಕೇಳ್ದೆ[17] ನೆತ್ತಾನುಂ ನೀ[18] ನಲ್ಲನೈ ಬಲ್ಲಾ ! ವರಾಂಗನೆ ಪೇೞೆಂದು ಕೇಱ ಬೆಸಗೊಂಡೊಡಿನ್ನುಂ ಪೇೞದಿರಲಾಗದೆಂದು ಕಶ್ಚಿದ್ಭಟಂ ದುಶ್ಶಿಕ್ಷ[19] ತಮಪ್ಪ ವಾಜಿ ತರೆ ಬಂದಲ್ಲಿಂ ಮೊದಲಾಗೆ ಸಾಗರಬುದ್ಧಿಯಂ ಕಂಡಲ್ಲಿವರಮಾದ[20] ವೃತ್ತಾಂತಮಂ ಪೇೞ್ದೊಡೊಸೆದು ದೇವ ಸೇನಂ ಮುನ್ನಮೆ ನಿನಗೆನ್ನ[21] ಮಕ್ಕಳಂಕುಡಲಿರ್ದೆನೆಂದು ಮನೋರಮೆ ಮೊದಲಾಗೆ ನೂರ್ವರ್

(1) ವಿಂದು (ಖ) (2) ವಾಗದೊಂದಳವಿ (ಗ) ವಪ್ಪುದೊಂದಳವಿ (ಛ) (3) ದಿಂ (ಕ,ಛ,ಜ) (4) ಯದಿಂದ್ರ ಸೇನನೆಂಬರಸಂ ಬೇಡಿ ಪಡೆಯದೆ ಮೇಲೆ (ಛ) (5) ಟಂಕೇಳ್ದಾಗೋಸಣೆಯಂಪಿಡಿದೊರ್ವನೆ (ಕ, ಛ) (6) ಕೂಡೆವೋಗಿ ಕಾದೆ (ಗ) (7) ಬಲಂಸಹಕಾರಿ (ಖ) (8) ಬಂದು ಪೊೞಲಂ (ಕ) (9) ಡೆಕೊಂಡು (ಕ) (10) ವಿಭವದಿಂ (ಕ,ಜ) (11) ಗೆಯ್ಯುತ್ತಿರೆ (ಕ,ಜ) ಗೆಯ್ಯುತಿರ್ದನಿತ್ತಲ್ (ಛ) (12) ಮಹಿನುತ (ಕ, ಛ, ಜ) (13) ಬರೆ (ಕ,ಜ) (14) ಗಟ್ಟಿವೋಲೆಯಂ (ಜ) ಗಟ್ಟಿದೋಲೆಯುಪದಕಮುಂ ಕಶ್ಚಿದ್ಭಟ (ಛ) (15) ಡೆನ್ನ (ಕ) (16) ಗನೆಂಬನಂದುರಶ್ವ (ಕ) ಗನೆಂಬೊಂ (ಛ) (17) ನಂತಾನುಂ (ಕ, ಜ) (18) ನೀನಲ್ಲೆವೊಲಾ (ಕ, ಜ) (19) ತವಾಜಿಯಂತರೆ (ಕ) (20) ಪ್ರಪಂಚಮೆಲ್ಲಮಂ (ಕ, ಜ) ದುರ್ಧರಮಾದುದಂ ಪೇೞ್ದುದೊಸೆದು (ಛ) (21) ಮಗಳಂನಿನಗೆ ಕುಡಲಿರ್ದೆ (ಗ)

ಯರಂ [1]ವಿವಾಹಮಹೋತ್ಸವದಿಂ ಕುಡೆ ಕೊಂಡು ತನ್ನ ಮಾವನುಮಂ ಸಾಗರಬುದ್ಧಿಯುಮ ಎಡಗೊಂಡುತ್ತಮಪುರಕ್ಕೆ ಪಯಣಂಬೋಗಿ—

ಉ|| ಮುಂದೆ ಪೊಱಲ್ಗೆ ತನ್ನ ಬರವಂ ತ[2]ಡವಾಗದೆ ಬೇಗಮಟ್ಟಿ ತಾಂ |
ಬಂದು ಮಹೋತ್ಸವಂ ಬೆರಸು ತತ್ಪುರಮಂ ವಿಭು ಪೊಕ್ಕು ತಾಯುಮಂ ||
ತಂದೆಯುಮಂ ಮನೋಮುದದೆ [3]ಕಂಡೊಸೆದಿರ್ದು ವಿರೋಧಿವರ್ಗಮೆ |
[4]ಯ್ತಂದಿರೆ ಮಾಣದಂದು ಚತುರಂಗಬಲಾನ್ವಿತನಾಗಿ ಕೋಪದಿಂ || ೪೬ ||

ವ|| ಪೋಗಿ ಪಗೆವರೆಲ್ಲರುಮನೋಡಿಸಿ[5]ಗೆಲ್ದು ಬಂದು ತನಗಪಕಾರಂಗೆಯ್ದುದಂ ಬಗೆದುದೆ ತನ್ನ ಪೆಂಪನೆ ಬಗೆದು ಸುಷೇ[6]ಣಂಗೆ ನಾಡುಮನುತ್ತಮಪುರಮಂ ಕೊಟ್ಟು, ತಮ್ಮಯ್ಯನುಮಂ ಸಾಗರಬುದ್ಧಿಯುಮನೊಡಗೊಂಡು ಪೋಗಿ ಪೆಱತೊಂದು ಮಂಡಲಮನೊತ್ತಿಕೊಂಡು ಸಾಗರಬುದ್ಧಿಗೆ ವಿದರ್ಭೆಯೆಂಬ ನಾಡಂ ಕೊಟ್ಟು ತಾನೊಂದು ಪೊಱಲಂ[7]ಮಾಡಿ ಮಹಾಮಾಂಡಳಿಕನಾಗಿ ಪಲವುಕಾಲಂ ರಾಜ್ಯಂ[8]ಗೆಯ್ದು ಸಂಸಾರನಿರ್ವೇಗಪರನಾಗಿ ತಪಂ[9]ಬಟ್ಟುಗ್ರೋಗ್ರತಪದೊಳ್ ನೆಗಲ್ದು ಕಡೆಯೊಳೇಕವಿಹಾರಿಯಾಗಿ ವಿಹರಿಸುತ್ತುಂ ದ್ವಾವಿಂಶತಿಪರೀಷಹಂಗಳಂ ಗೆಲ್ದು [10]ಶುಭಧ್ಯಾನದಿಂ [11]ಮುಡಿಪಿ ಸರ್ವಾರ್ಥಸಿದ್ಧಿಯುಮನೆಯ್ದಿದನಿಂತು—

ರಗಳೆ— ತುರಗಮೇಱಿ3ದುಯ್ವಲ್ಲಿ – ಪಿರಿಯಡವಿ[12]ಪೊಕ್ಕಲ್ಲಿ ||
ಬಾವಿಯೊಳ್ ಬಿಲ್ದಲ್ಲಿ – ನೋವುವೆರಸಿರ್ದಲ್ಲಿ ||
ಪುಲಿವಾಯೊಳಿರ್ದಲ್ಲಿ – ಜಲಚರಂ ಪಿಡಿವಲ್ಲಿ ||
ಬೇಡವಡೆ ಕಂಡಲ್ಲಿ – ನಾಡೆ ಜಡಿದೊಯ್ವಲ್ಲಿ ||
ಪರಕೆಗುಡಲಿರ್ದಲ್ಲಿ – ಪರದರಾಳ್ ಪಿಡಿವಲ್ಲಿ ||
ವನಚರರನಿಱಿವಲ್ಲಿ – ಜನವಿನುತನಾದಲ್ಲಿ ||
ಪಗೆವರಂ ಗೆಲ್ವಲ್ಲಿ – ಮಗುಳ್ದರಸನಪ್ಪಲ್ಲಿ ||
ಪರಭೂಮಿವಡೆದಲ್ಲಿ – ಧರಣಿಪತಿಯಪ್ಪಲ್ಲಿ ||
ಯತಿನಾಥನಪ್ಪಲ್ಲಿ – ಗತಿಗೆ ತಾಂ ಸಲ್ವಲ್ಲಿ ||
ಒರ್ವನೆ ನರೇಶ್ವರಂ – ಸರ್ವಜನಹಿತಕರಂ || || ೪೭ ||

ಕಂ|| ಅಂತಪ್ಪೈಶ್ವರ್ಯಂ ನೆಗ |
ೞ್ದಂತಪ್ಪನುಕೂಲಬಂಧುವರ್ಗಂ ತನ[13]ಗು ||
ಳ್ಳಂತೆ [14]ಹರಿವಶದೆ ಪೊಱಮ |
ಟ್ಟಂತೆಲ್ಲಿಯುಮೊರ್ವನಾದನೇಂ ವಿಸ್ಮಯಮೋ || ೪೮ ||

---

(1) ವಿವಾಹವಿಧಿಯಿಂ (ಕ)(2) ತಿಳಿವಂತಿರೆ (ಕ,ಜ) ತಿಳಿವಾಗಿರೆ (ಗ,ಛ) (3) ಕಂಡೊಡನಿರ್ದು (ಖ,ಗ) (4) ಯ್ತಂದೊಡೆ ಮಾಣೆನೆಂದು (ಛ,ಕ,ಟ) (5) ಬಂದು (ಖ,ಗ,ಛ) ಪಗೆವರೆಲ್ಲರನೋಡಿಸಿಗೆಲ್ದು (ಟ) (6) ಣಂಗ ಮಾನಾಡುಮುತ್ತ (ಕ) ಣಂಗಾನಾಡ (ಗ,ಟ) (7) ಮಾಡಿಸಿ (ಕ,-ಜ, ಟ) ಮಾಡಿಕೊಂಡು (ಗ) ಮಾಡಿಸಿಕೊಂಡು (ಛ) (8) ಗೆಯ್ದುನಿರ್ವೇಗಪರಾಯಣನಾಗಿ ವರಾಂಗಂ (9) ಘೋರವೀರತಪದಿಂದೇಕ (ಕ, ಜ) (10) ಶುದ್ಧ ( ಕ್ಲ ) ಧ್ಯಾನದಿಂ (ಕ) (11) ಮುಡುಪಿ (ಕ) (12) ಯೊಕ್ಕಲ್ಲಿ (ಕ) (13) ಗಿರ್ದಂತೆ (ಗ) (14) ಪರವಶದೆ (ಕ)

ಉ|| [1]ಇಂತು ವರಾಂಗನೆಂಬ [2]ಧರಣೀಶ್ವರನಾತ್ಮ[3]ಪರಿಗ್ರಹಂಗಳಿ |
ರ್ದಂದೆ ದುರಶ್ವ[4]ಮೊಯ್ಯೆ ಬಹುಮೃತ್ಯುಮುಖಂಗಳನೊರ್ವನೆಯ್ದಿ [5]ಬ ||
ಬ್ದಂತೆ ಬಲೌಕ್ಕೆ ವಿಕ್ರಮದಿನೊರ್ವನೆ ತಾಂ [6]ಸುಖಿಯಾಗಿ ಮತ್ತೆ ಲೋ |
ಕಾಂತಿಕನಾದನೆಂಬ ಕತೆಯುಂ ಬಗೆದಪ್ಪೊಡ[7]ಮೆಯ್ದೆ ನಂಬಿರೇ || ೪೯ ||*

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

[8]ಏಕತ್ವಾನುಪ್ರೇಕ್ಷಾ ನಿರೂಪಣಂ

ವರಾಂಗಕಥಾವರ್ಣನಂ

ತೃ ತೀ ಯಾ[9] ಧಿ ಕಾ ರ ಂ.

❋ ❋ ❋

---

* ಸಪ್ರಾತಿಹಾರ್ಯಾತಿಶಯಪ್ರಪನ್ನೋ—ಗುಣಪ್ರವೀಣೋ ಹತದೋಷಸಂಗಃ ||
ಯೋ ಲೋಕಮೋಹಾಂಧತಮಃಪ್ರದೀಪ—ಶ್ಚಂದ್ರಪ್ರಭಂ ತಂ ಪ್ರಣಮಾಮಿ ನಿತ್ಯಂ ||
ಈ ಸಂಸ್ಕೃತ ಶ್ಲೋಕವು–ಕ, ಚ, ಜ, ಘ ಪ್ರತಿಗಳಲ್ಲಿವೆ—

---

(1) ಅಂತು (ಖ) (2) ಪರಮೇಶ್ವರ (ಗ, ಛ) (3) ಕಳತ್ರಮೆಲ್ಲ ಮಿರ್ದಂ (ಕ, ಜ, ಟ) (4) ಮೊಯ್ಯೆ ಬನಮಂ ಬಹು (ಟ) (5) ಬಂದಂತೆ (ಗ, ಟ) (6) ಸುಖಿ ಭೋಗಿಯಾದನೆಂ|ದಿಂ ತಿರೆ ಪೇೞ್ದೊಡೊಂದು ಕತೆಯಂ ಬಗೆದಪ್ಪೊಡಮ್ಮೇನೊ ಕೇಳಿರೆ (ಛ) ಸುಖಭಾಗಿಯಾದಮೆಂ|ದಿಂತಿರೆ ಪೇೞ್ದದೊಂದು (ಟ) (7) ಮೇನೊ (ಕ) (8) ಏಕತ್ವಾಭಿಧಾನಂ ಚತುರ್ಥಾಧಿಕಾರಂ (ಕ, ಗ, ಜ) ಏಕತ್ವಾಭಿಧಾನಂ ತೃತೀಯಾಧಿಕಾರಂ (ಛ, ಟ) (9) ಯಾಶ್ವಾಸಂ (ಚ, ಟ)

|| ಚತುರ್ಥಾಧಿಕಾರಂ ||

## — ಅ ನ್ಯ ತ್ವಾ ನು ಪ್ರೇ ಕ್ಷೆ —

ಕಂ|| ಧನಮುಂ ಕಳತ್ರಜನಮುಂ |
ತನುವುಂ ತವದಗಲದಱಿಯದಿರವದಱಿಂದಂ ||
ಮನದೊಳವರ್ಕಾಟಿಸಿ ಕೆ |
ಮ್ಮನೆ ಮಱುಗದಿರನ್ಯವಸ್ತು ನಿನಗೆಂತಕ್ಕುಂ || ೧ ||*

* ಇದರ ಆದಿಯಲ್ಲಿಯ ಈ ಸಂಸ್ಕೃತ ಶ್ಲೋಕಟೀಕೆಗಳು (ಕ–ಚ–ಜ–ಘ) ಪ್ರತಿಗಳಲ್ಲಿವೆ—

ಗುಪ್ತಿತ್ರಯಂ ಪಂಚಮಹಾವ್ರತಾನಿ–ಪಂಚೋಪದಿಷ್ಟಾಃ ಸಮಿತಿಶ್ಚ ಯೇನ ||
ಬಭಾಣ ಯೋ ದ್ವಾದಶಧಾ ತಪಾಂಸಿ–ತಂ ಪುಷ್ಪದನ್ತಂ ಪ್ರಣಮಾಮಿ ನಿತ್ಯಂ || ೧ ||

ಚೈತನ್ಯಂ [1] ಜಡತೈಕತಾವಯವಿ ಸಂದೋಹೋದಿತಾ ನೇಕತಾ |
ನಿತ್ಯತ್ವಂ ಕ್ಷಯಿತಾ ಚ ಮೂರ್ತಿವಿಯುತಿರ್ಮೂರ್ತತ್ವಮಿತ್ಯಾದಿಭಿಃ ||
ಭೇದಂ ದೇಹಿಶರೀರಯೋರಗಣಯನ್ ಕಿಂ ನೇಕ್ಷತೇ ವೃದ್ಧಿಮ |
ದ್ದೇಹಂ [2] ಖೇದಿನಿ ದೇಹಿನಿ ಸ್ಥಿತಮತಿಕ್ರಾಂತೋಽತ್ರ ದುರ್ಮಿತ್ರವತ್ || ೨ ||

ಟೀ || ಚೈತನ್ಯಂ–ಚೈತನ್ಯಮುಂ, ಜಡತಾ—ಅಜ್ಞಾನಮುಂ, ಏಕತಾ–ಒಂದೆಯಹುದುಂ, ಅವಯ(ವ)ವಿಸಂದೋಹೋದಿತಾನೇಕತಾ–ಪರಮಾಣುಗಳ ನೆರವಿಯಿಂದಾದ ಬಹುಲತ್ವಮುಂ, ನಿತ್ಯತ್ವಂ–ಕೆಡದ ಸ್ವಭಾವಮುಂ, ಕ್ಷಯಿತಾ–ಕಿಡುವಸ್ವಭಾವಮುಂ, ಮೂರ್ತಿರ್ವಿಯುತಿಃ–ರೂಪಿಲ್ಲದುದುಂ, ಮೂರ್ತತ್ವಂ–ರೂಪುಳ್ಳುದುಂ, ಇತ್ಯಾದಿಭಿಃ ಇಂತಿವು ಮೊದಲಾದುವಱಿಂದ, ದೇಹಿಶರೀರಯೋಃ–ಜೀವ ಶರೀರಮೆಂಬೆರಡಱ ಭೇದಂ–ಬೇಱಪ್ಪ ಸ್ವರೂಪಮಂ, ಅಗಣಯನ್–ಎಣಿಸದಂ, ಕಿಂ ನೇಕ್ಷತೆ–ಏಂ ಕಾಣನೆ, ದೇಹಿನಿ (ಆತ್ಮಂ) ಖೇದಿನಿ–ದುಃಖಿಯಾಗುತ್ತಿರಲು, ವೃದ್ಧಿಮದ್ದೇಹಂ–ಹೆಚ್ಚುಳ್ಳ ಶರೀರಮುಂ, ಅತಿಕ್ರಾಂತೇ–ಆತ್ಮಂ(ಬಿಟ್ಟು) ಪೋದೊಡೆ, ಸ್ಥಿತಂ–ಇರ್ದುದಂ, ಅತ್ರ–ಇಲ್ಲಿ, ದುರ್ಮಿತ್ರವತ್–ದುಷ್ಟಮಿತ್ರನಂತೆ (ಶರೀರದತ್ತಣಿಂದಾತ್ಮಂ ಬೇಱೆಂಬನ್ಯತ್ವಾನುಪ್ರೇಕ್ಷೆ)

ಕ್ಷೀರನೀರವದೇಕತ್ರ ಸ್ಥಿತಯೋರ್ದೇಹದೇಹಿನೋಃ ||
ಭೇದೋ ಯದಿ ತತೋಽನ್ಯೇಷು ಕಳತ್ರಾದಿಷು ಕಾ ಕಥಾ || ೩ ||

ತಾ|| ಎಲೆ ಜೀವನೇ ನಿನ್ನೊಳ್ ಕ್ಷೀರನೀರನ್ಯಾಯದಿಂದೊಡವೆರಸಿರ್ಪ (ಪಾಲುಂ ನೀರುಂ ಬೆರೆದೊಂದಾಗಿ ತೋರ್ಪಂತಿರ್ಪ) ಶರೀರಮೆ (ನಿನ್ನಂ) ಬಿಟ್ಟು ಪೋಪುದೆಂದೊಡೆ—ತಿಲತಂಡುಲನ್ಯಾಯದಿಂ (ಎಳ್ಳುಮಕ್ಕಿಯುಂ ಬೆರೆದಿರ್ಪಂದು ಬೇರೆಬೇರೆಯಾಗಿರ್ದುಮೊಟ್ಟಗೆ ತೋರ್ಪಂತೆ) ಭೇದಮಾಗಿರ್ಪ ಕಳತ್ರಾದಿಗಳ್ ಬಿಟ್ಟು ಪೋಪುದಾಶ್ಚರ್ಯಮಲ್ತು—ಎಂಬೀ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂ ಗೆಯ್ವೆನದೆಂತೆನೆ—

(1) ಜರತಾ ? (2) ಭೇದಿನಿ ?

ವ|| ದ್ರವ್ಯಮುಂ, ಕಳತ್ರಮುಂ, [1]ತನುವುಂ ಜೀವಾ, ನಿನಗೆ ಕೂರ್ತು [2]ನಿಲ್ಪುವಲ್ಲವು.
ಅವುಂ ಬೇಱೆ, ನೀಂ ಬೇಱೆ ಎಂಬನ್ಯತ್ವಮುಂ ಭಾವಿಸು[3]ವುದು. ಅವುಂ ನಿನಗೆಂದು ಬಗೆವಂದೊಳ್ಳಿ
ತ್ತಾಗದು, ಬಿಸಿಲ್ಗುದುರೆಯುಂ ನೀರೆಂದಾಸೆವಟ್ಟು ಪರಿವ ಮೃಗಮುಂ, ಸಂಸಾರದೊಳ್ ತನಗಲ್ಲದವ
[4]ರ್ಗಾಟಿಸಿ ಪಡೆವ ನರನುಂ ಸೇದೆ[5]ವಡೆಗುಂ—

ಮ|| ತೊಱೆ [6]ಬರ್ಪಂದು ಕಲಂಕಿ ಮುಂ [7]ಕದಡು ನೀರ್ ಬರ್ಪಂತೆ ಸಂಕ್ಲೇಶದಿಂ |
ಮಱುಕಂ ಕೆಯ್ಮಿಗೆ ಚಿತ್ತಮುಂ ಕದಡುತುಂ ಬರ್ಕುಂ ಧನಂ ಬರ್ಪೊಡ ||
ಳ್ಳಿಱಿಯುತ್ತಿರ್ಪುದು ಕಾವ ಬೇವಸದೊ[8]ಳೋತಿರ್ಪಂದು ಪೋಪಂದು ಬೆ |
ಟ್ಕಱೆ ಪೋಕುಂ ಧನಮೆನ್ನದೆಂಬುದೆ ವಿಮೋಹಾಧಾರಿಯುಂ ವೈರಿಯಂ || ೨ ||

ವ|| ಅಂತು ಬರ್ಪೆಡೆಯೊಳಮಿರ್ಪೆಡೆಯೊಳಂ ಪೋಪೆಡೆಯೊಳಂ ಚಿಂತೆಯನೆ ಪಡೆವ ಕಸವರ
ಮನೆನಗೆಂಬುದೇಕೆ? ಮತ್ತಂ [9]ಮೆಯ್ಯ ಬಾೞ್ಕೆಗಾಗಿ ಸುಖಮಂ ಮಾಡುಗುಮೆಂಬಯಪ್ಪೊ[10]ಡೆ
ಅದಱಿಂ ಸುಖಮುಮಾಗದೆಂಬುದುಮನಾರಯ್ದು ನೋಡಾ—

ಕಂ|| ಪೋದುದು [11]ನಿನ್ನಿಂ ಗೆಂಟಾ |
ಯ್ತಾದಪುದೆಂಬುದುಮದೆಯ್ದೆವಾರದು [12]ನಿನ್ನಿಂ ||
ಪೋದುದಱಿಪ್ಪುದಱಿಡೆ[13]ಯಿನೆ |
ಪೋದಪುದತಿಸೂಕ್ಷ್ಮಮಲ್ಲಿ ನಿಲ್ಲದು ಸೌಖ್ಯಂ || ೩ ||

ವ|| ವಸ್ತುವಿನ ಬರವಿ[14]ನಿರವಿನ ಪೋಗಿನೆಡೆಯೊಳ್ ಸುಖಮಾಗದುದುಮಂ ಕೇಳ್ದೆ
ತ್ತಾನುಮಿನಿದಪ್ಪಾಹಾರಂ ದೊರೆಕೊಂಡೊಡಂ ಮಡಕೆಯೊಳಿರ್ದಲ್ಲಿ ಸವಿ[15]ತೋಱಿತಿಲ್ಲ. ಮುಂದೆ
ತಳಿಗೆಯೊಳ್ ತಂದಿಕ್ಕಿದಲ್ಲಿಯುಂ ಸವಿ ಪೊರ್ದಿದುದಿಲ್ಲ. ಕೆಯ್ಗೆ ವಂದೊಡಮಱಿಯಲಾಯ್ತಿಲ್ಲ.
[16]ಬಾಯೊಳಿಕ್ಕಿದೊಡಂ ಸವಿ ನೆಟ್ಟನಱಿಯಲಾಯ್ತಿಲ್ಲ. ಇಂತತೀತಾನಾಗತ (ವರ್ತಮಾನಕಾಲ)
ದೊಳೆಲ್ಲಿಯುಂ ಸವಿ ಪು[17]ಟ್ಟಿತ್ತಿಲ್ಲ ಸವಿಯನಱಿವ ನಾಲಗೆಯ ಮೊದಲನೆಯ್ದಿದಾಗಳ್ ಕ್ಷಣ
ಮಾ[18]ತ್ರಮಲ್ಲಿ ನಿಲ್ಲದೆ ಬಸಿಱತ್ತಪೋಯ್ತಿಂತು [19]ವರ್ತಮಾನಕಾಲದೊಳಂ ಸುಖಂ ನೆಲಸಿದು
ದಲ್ಲ. ಬಸಿಱತ್ತಪೋದಲ್ಲಿಯುಂ ಸವಿ[20]ಯನುಭವಣೆಯಿಲ್ಲದುದಱಿನತೀತಾನಾಗತವರ್ತಮಾನ
ಕಾಲದೊಳಂ ಸುಖಮಿಲ್ಲೇತರ್ಕಳಿಪುವಯ್ ? ದ್ರವ್ಯ[21]ಮಿಂತು ನಿನಗಿಲ್ಲದೊಡಂ [22]ಪೆಂಡಿರ್ಗೆಂದು
ಬಗೆವೆಯಪ್ಪೊಡಮವರಿಂ ಸುಖಮಕ್ಕುಮೆಂಬೆಯೆಂದೊಡವರ್ ನಿನಗಪ್ಪರೇ ?

---

(1) ಮೆಯ್ಯುಂ(ಖ,ಛ) (2) ನಿಲ್ಲವವು(ಘ) ನಿಲುವುವಲ್ಲ(ಜ) (3) ವದನನಗೆಂ(ಕ) ದವನನ್ನೆಗೆಂಬನಂ(ಛ) (4) ಗಾಟಿಪಡೆ (ಕ,ಜ) (5) ಗಿಡುಗುಂ (ಘ) (6) ಬರ್ಪಂತು (ಛ) ಬರ್ಪಂತೆ (ಖ) (7) ಕದಡಿತಾಂ (ಕ,ಜ,ಛ) (8) ದೊಳ್ಪರ್ಪಂದು ಪೋಪಂದು(ಕ,ಜ) ಳೋತಿರ್ಪಂತು ಪೋಪಂತು(ಚ) ಳೊಂದಿ(ಛ)(9) ಬಾರ್ತೆ (ಚ)ಯ್ಯೊಳ್ ಬಾೞ್ಕೆ (ಜ) (10) ಡೆಸುಖಮಾಗದುದ (ಕ,ಜ) ಡವಱಿ (ಛ) (11) ನಿನ್ನಿಂಗೆಂಟನ್ನಾದಪ್ಪುದುಮದೆಯ್ದೆ (ಕ,ಜ) (12) ನಿನಗಿಂ(ಛ) (13) ಯೆನಿತಾದಪುದ (ಛ,ಕ) (14) ಬರವನೀನಿರವಿನ(ಕ) (15) ಸವಿಯಣಮಿಲ್ಲ (ಕ,ಛ,ಜ) (16) ಬಾಯ್ಗೆವಂದೊಡಂ ನೆಟ್ಟನೆಯ್ದಿತಿಲ್ಲ (ಕ, ಜ) (17) ಟ್ಟಿದುದಿಲ್ಲ (ತ) (18) ತ್ರದಾಗಳೆ (ಛ) (19) ನಿನಗೀ ಮೂಱುಂಕಾಲದೊಳಂ ಸುಖಮಾಗದುವರ್ಕೇಕಳಿಪು (ಕ, ಜ) (20) ಸವಿಯಱಿಯಲಾಯ್ತಿಲ್ಲತೀತ (ಕ, ಜ) (21) ಮೆಂತುಂ (22) ಪೆಂಡಿರ್ಗೆಮಾಡಿದೊಡವರಿಂ

ಮ|| ನುಡಿ ನೀರಾನನಮಬ್ಜಮಕ್ಷಿಯುಗಳಂ ಮಿಾನ್ಗಳ್ ಕರಂ ಭಾವಕಂ |
ಕಡುಗುಣ್ಪಾಗಿರೆ ಪೆಂ[1]ಡಿರಂ ಕೊಳನೆಗೆತ್ತೆಯ್ತಂದು ಪೊಕ್ಕಿರ್ದೊಡಾ ||
ಯೆಡೆಯೊಳ್ ಪುತ್ರವಿಮೋಹ[2]ಮೆಂಬ ನೆಗಟಿಂತುಂ ನುಂಗೆ ದುಃಖಂಗಳೊಳ್ |
ತೊಡರ್ವೈ ನೀಂ ನಿನ[3]ಗೆಂದು ಸಂಸರಣವಲ್ಯಾಕ್ರಾನ್ತೆಯಂ ಕಾಂತೆಯಂ || ೪ ||

ವ|| ಪಿರಿದಪ್ಪ ಕೊಳನ ಶೋಭೆಗಂ ತಣ್ಪಿಂಗಂ ಸೋಲ್ತು ಸ್ವೈರಿ[4]ಸಲಾಱದೆ ನಡು[5]ನೀರ್ವರಂ [6]ಪೊಕ್ಕವನಂ ನೆಗಟ್ ಪಿಡಿವಂತೆ ಪೆಂಡಿರೊಳಾದಲ್ಪಸುಖ[7]ದಾಸೆಯಿನಗ್ಗಲಿಸಿ ಪತ್ತಿದೊಡೆ ಪುತ್ರ ವಿಮೋಹಂ [8]ತಗುಳ್ಗುಮದು ತಗುಳೆ ದುಃಖಂ ತಗುಳ್ಗು[9]ಂ ಮತ್ತಮವರಂ ನಿನಗೆಂಬಯ್—

ಕಂ|| ಕಡುಮುಳಿದು ನೋಡಿ ಕೊಲ್ವುದು |
ಗಡ ದೃಷ್ಟಿವಿಷಾಹಿ[10]ಯೆಂಬರದು ಪುಸಿ ಪೆಂಡಿರ್ ||
ಕಡೆಗಣ್ಣೋಟದೆ ಕೊ[11]ಲ್ವರ್ |
ನಡೆ ನೋಡಿದೊಡಱಿಯದಿರ್ಪ ಗಂಡರುಮೊಳರೇ || ೫ ||

ವ|| [12]ನೋಟಂ ವಿಷಮಪ್ಪ ಪಾವನಾರ್ ಕಂ[13]ಡರ್. ನೆಱನಂ ಕೊಂಡಂಬಿನಂತೆ ನಡೆ ನೋಡಿದೊಡಾರ[14]ಱಿಯರ್? ಗಱಿಸೋಂಕಿನಂಬಿನಂತಪ್ಪ ಕಡೆಗಣ್ಣೋಟದಿನಱಿಯ[15]ಲಾರ್ಪ ಪೆಂಡಿರೆಂಬ ದೃಷ್ಟಿವಿಷದ ಪಾವಂ[16]ಮುಚ್ಚುವಿರಿದೆಂತೋ !

ಚಂ|| ಮುಳಿಯದೆ ಕಾಲಮಲ್ಲ[17]ದಿರೆ ಕೊ[18]ಳ್ಳವು ಪಾವುಗಳಾ ವಿಷಕ್ಕೆ ಮ |
ರ್ದೊಳವಬಲೋಗ್ರಸರ್ಪ[19]ಮರೆನೋಡಿಯುಮುಂತವರೊಲ್ದು ನೋಡಿಯುಂ ||
ಮುಳಿ[20]ದೊಸೆದೆಂತುಮಿರ್ದಳವೆ ಕೊಳ್ವುವು [21]ಕೆ(ಕೊ)ಲ್ವಡೆದೊಂಗೆರಲ್ವವಂ |
ಗಳುಮಱಿದಲ್ದುಗುಂ ಲಲನೆಯೆಂಬ ವಿಷೋರಗಮೇಂ ಮಹೋಗ್ರಮೋ || ೬ ||

ವ|| ಪಾವೆನಿತು ಸಾರೆಯಾದೊಡಂ ಮುಳಿದೊಡಲ್ಲದೆ [22]ಕಾಲಮಲ್ಲದೆ ಕೊಳ್ಳದು, ಈ ಸ್ತ್ರೀಯೆಂಬ ಪಾವಿನ ವಿಷಂ ಮುಳಿದುನೊಸೆದು ಮೆಂತುಂ ಕೊಳ್ವು[23]ದು. ಆ ವಿಷಕ್ಕೆ ಮರ್ದುಂಟು ಈ ವಿಷಕ್ಕೆಮರ್ದಿಲ್ಲದಱಿಂ ಸ್ತ್ರೀಯ ವಿಷದಿಂದುಗ್ರಮಾದ ವಿಷಮಾವುದುಮಿಲ್ಲ.

---

(1) ಡಿರುಂ (ಖ) (2) ಮೆಂಬುದುನೆಗಟ್ ತಾಂ (ಕ, ಘ, ಜ) (3) ಗೆಂಬ (ಕ) (4) ರಿಸದೆ (ಕ, ಜ) (5) ನೀರಂ (ಖ) (6) ಕ್ಕನಂ (ಕ, ಜ) ಕ್ಕಾತನ (ಛ) (7) ದಾಸೆಯೊಳ್ಪತ್ತಿರ್ದನಂ ಪುತ್ರ (ಕ, ಜ) ಯೆಡೆಗಲಸಿ ಪತ್ತಿರ್ದೊಡೆ (ಖ) (8) ತಗುಳ್ಗುಮಂತಾಮೋಹದಿಂ ದುಃಖಂ (ಛ) (9) ಳ್ಗುಮೆಂತವರಂ (ಕ, ಜ) ಮಂತವರಂ (ಗ) (10) ಯೆಂಬುದದು (ಕ, ಜ) (11) ಕೊಲುವರ್ (ಕ) (12) ನೋಡಿದೊಡೆವಿಷ (ಕ, ಜ) (13) ಕಂಡೊಡಂನೆಱನಂ (ಜ) (14) ಡಳಿವರ್ (ಕ, ಜ) (15) ಲಾಱದಿರ್ಪ (16) ಮುಚ್ಚದಿರಿ (ಕ) ಮುಚ್ಚುವಿರೆಂಬುದು (ಖ) ಮುಚ್ಚಿದಿರೆಂತೊ (ಜ) (17) ಲ್ಲದೆರೆಗೊಳ್ಳ (ಜ) (18) ಕೊಲ್ಲವು (ಖ) (19) ಮಿರೆ (ಜ) (20) ದೊಸೆದಿರ್ದುಮೆಂತಳದಕೊಳ್ವ (ಕ, ಜ) ಮಂತಳಲೆ (ಛ) (21) ಕೊಲ್ವಡವಂಗೆ (ಖ) (22) ಕೊಲ್ಲದೀಪಾವಿನ (ಕ, ಜ) ಕೊಲ್ಲದೀಸ್ತ್ರೀಯೆಂಬ (ಛ) (23) ಕೊಲ್ವುದು (ಖ, ಜ)

*ಕಂ|| ಕೊರಲೊಳಗೆ ಕಾಲಕೂಟಮ |
ನಿರಿಸಿದೊಡಾ ಹರನ ನಾ ವಿಷಂ ಕೊಂದುದೆ ಪೆಂ ||
ಡಿರ ನೋಟಮೆಂಬ ವಿಷಮಾ |
ಹರನುಮನಱಂದತ್ತು ಯುವತಿವಿಷಮೇಂ ವಿಷಮೋ || ೭ ||

ವ|| ಕಾಳಕೂಟಮೆಂಬ ವಿಷಮಂ ಗೆಲ್ದೀಶ್ವರ[1]ನುಮಂ [2]ಪೆಣ್ಣೆಂಬ ವಿಷಂ ಕೊಂಡುದು, ಇಂತುಗ್ರಮಪ್ಪ ಪೆಂಡಿ[3]ರ ರೂಪಂ ಸುಖದ ರೂಪೆಂಬುದೇ ?

ಶಾ|| ಎಂದಿರ್ದುಂ ನಿನಗಲ್ಲರಿನ್ನವರ್ಗೆ ನೀನೆಂದಿರ್ದು[4]ಮಲ್ಲೈ ಗೆಲ |
ಲ್ಕೆಂದೀ ಪುತ್ರಕಳತ್ರಮಿತ್ರಸಹಜಾ[5]ನೀಕಂ ತಗುಳ್ದಿರ್ಪು[6]ದಿಂ ||
ತೊಂದುಂ ನಿನ್ನೊಡವಾರವಂತ್ಯದೊಳವರ್ ಪೋಪಂದು ನೀಂ ಪೋಗೆ[7]ಯೇ |
ನೊಂದುಂ ಕಾರಣಮಿಲ್ಲ[8]ದೆನ್ನವರೆನುತಿರ್ಪಂದ [9]ಮಾವಂದಮೋ || ೮ ||

ವ|| ತನಗಲ್ಲದರಂ ನಂಬಿ [10]ಬಟ್ಟೆಯೊಳೊಡವೋದರ್ ಕಿಡುವರೆಂದೊಡೆ ಭವಮೆಲ್ಲಮಂ [11]ತಪ್ಪಿ ನೆಗಲ್ದವರೇಂ ಕಿಡರೇ—

ಕಂ|| ಎನಿತೆನಿತು ಭವದ ನಂಟರ |
ನೆನಗೆಂಬೈ ಬಿಸುಟು ಬಂದ ತನುಗಳ್ಗೋ[12]ರಂ ||
ತೆನಿತೆನಿತಿರ್ಕುಮವಂ ನೆನೆ |
ನೆನೆದಳಿಪಲ್ ಬಂಧುಜನದ ಮುಯ್ಗಂ ಮೆಯ್ಗಂ || ೯ ||

ವ|| ಕೇಡಿಂಗಪ್ಪ ನಂಟರಾದೊಡಂ [13]ನಿಟ್ಟೆಗಪ್ಪ ಮೆಯ್ಯಾದೊಡಂ ಸ್ನೇ[14]ಹಮಂ ಮೋಹಮಂ ತ[15]ಗುಳ್ಚಲಕ್ಕುಮಾವಭವದೊಳಮಾ[16]ಗದೆ ಪೋಪ[17]ಮುಯ್ಗಮಱವ ಮೆಯ್ಗಂ ಏತರ್ಕೆ ಮೆಳ್ಪಡುವಯ್.

---

(1) ನಂ (ಕ) (2) ಪೆಂಡಿತಿ (ಖ) (3) ಡಿರಂ ಸುಖ (ಖ) (4) ಗೆಲ್ಲೈ (ಛ) ಮಲ್ಲೈಯೆನಲ್ಕೆಂ (ಕ,ಜ) (5) ತರ್ಕಗಳ್ (ಖ) (6) ವಿನ್ನೊಂದುಂ (ಕ, ಜ) (7) ಯಿನ್ನೊಂದುಂ (ಕ, ಜ, ಛ) (8) ಮೆನ್ನ (ಚ) (9) ಮೇನಂದ (ಚ) (10) ವೊಡವಟ್ಟೆವೋದರ್ (ಕ) ವೊಡಬಟ್ಟೆ (ಚ, ವಡವಟ್ಟೆ (ಜ) (11) ಮಂತಪ್ಪ ನೆಗಟ್ತೆಯೊಳೆಂ ನೆಗಟ್ತೆಗಿಕ್ಕಿದಡೆಕಿಡರಾರ್ (ಕ) ತಪ್ಪನೆಗಳ್ತೆಗಿಕ್ಕಿದೊಡೆ ಕಿಡರಾರ್ (ಜ) ಮೆಲ್ಲಂ ತವೆಪೊಲ್ಲ ನೆಗಟ್ತೆಯೊಳಂ ನೆಗಳ್ದವರ್ ಕಿಡರೇ (ಛ) ಮೆಲ್ಲಮಂ ಪೊಲ್ಲನೆಗಳ್ವರ್‌ಕಿಡರೇ (ಚ) (12) ಗಳ್ಗೋರಂತೆನಿತೆನಿತಕ್ಕರ್ಪೆಯವಂ (ಕ) ಗಳುವೋರೆಂತೆನಿ ತಕ್ಕುಂದಲ್ಲವಂನೀ (ಖ) ಗಳ್ಗೋರಂತೆನುತಿರ್ಪೆಯವಂ ನೀಂ ನೆನೆ (ಚ) ಳ್ಗೋರಂತೆನಿತನಿತಕ್ಕಾಪವರ್ಯಮಂ ನೆನೆದಳುಪಳು (ಛ) ತೆನಿತೆನಿತರ್ಕೈಪ್ಪ ಯವಂ (ಜ) (13) ನಿಷ್ಠೆಯಪ್ಪ (ಕ) (14) ನೇಹಮಂ (ಕ,ಜ) (15) ತಗುಳ್ಚಲಪ್ಪುದಾವ (ಕ,ಜ) ತಗುಳ್ಚಲಕ್ಕುಮಾಭವ (ಛ) (16) ಮಾಗೆ (ಚ) (17) ನಂಟರ್ಗಂ ಮೆಯ್ಯಗವೇತರ್ಕೆಮೆಳ್ಪಡುವುದೋ (ಕ, ಜ) ನಂಟರ್ಗಮಱಯದೊಯ್ನೆಂಡುವಿರಿ (ಛ) ಡುವಿರೋ (ಚ)

* ಈ ಕಂದವು (ಚ, ಛ, ಝ, ಜ) ಪ್ರತಿಗಳಲ್ಲಿಲ್ಲ

ಶಾ|| [1]ಕೆಯ್ವಾರಂ ನಿನಗಲ್ಲದನ್ಯರೊಳ[2]ದೇಂ ಸ್ವರ್ಗಾಪವರ್ಗಂಗಳ |
[3]ತ್ತುಯ್ವಾ ಧರ್ಮಮಮಾರ್ಮಮೆನ್ನದೆ ಕರಂ ದುರ್ಮೋಹದಿಂ ಸ್ನೇಹದಿಂ ||
ಮೆಯ್ವೆರ್ಚೆ[4]ರ್ದುಱುದುರ್ಕಿ ಸೊರ್ಕಿ ಮತಿ[5]ಗೆಟ್ಟಿಂತಂತೆ ಮೆಟ್ಟಿಟ್ಟು ನೀಂ |
ನಾಯ್ವಾಲಂ ಪಿಡಿದೇಕೆ ನಚ್ಚಿ ತೊಱೆ[6]ಯಂ ಪಾಯ್ದಟ್ಟಿಪೈ ಜೀವನೇ || ೧೦ ||

ವ|| ಉರಿಯ ನೆೞಲಂ ನೆೞ[7]ಲೆಂದಾಸೆವಟ್ಟು ಪೊರ್ದಿದೊಡಂ ಮೆಯ್ಸುಡಿದಾನಂಟರಂ ನಂಟರೆಂದು ನಂಬಿರ್ದೊಡಮಾತಂಗೆ [8]ತಣ್ಪು ಕೊಡದು. ಈತಂಗೆ ಸುಖಮಾಗದು—

ಕಂ|| ಕೂರ[9]ದಱುಮನಂತ್ಯದೊಳೊಡ |
ವಾಱ ದ[10]ಱುಮನಿಲ್ಲದಂದು ನಿನ್ನ ಯ ದೆಸೆಯಂ ||
ಸಾರದುಱಮನವರಿಂ ಗತಿ |
ಬಾರದುದುಮನಱಿದು ನಂಟರಿವರೆನಗೆಂಬಾ || ೧೧ ||

ವ|| ನಿನಗಾವೆಡೆಯೊಳಮಲ್ಲದ ಜೂಂಟರಂ ನಂಟರೆಂ[11]ದು ನಂಬಿ ಮೋಹಮನುಣ್ಟುಮಾಡಲುಂ ಧರ್ಮಮಂ ಗೆಂಟುಮಾಡ[12]ಲುಂ ಬೇಡ—

ಉ|| ಎನ್ನವರೆಂದು ಪುತ್ರ ಪಿತೃ ಮಿತ್ರ ಕಳತ್ರದ [13]ನಣ್ಪು ನಾಡೆ ನೋ |
ವಂ ನಿನಗುಂಟು[14]ಮಾಡೆ ಬಿಡದಟ್ಟುಱೆದುಃಖದೊ[15]ಳಟ್ಟೆ ಬರ್ದುವಯ್ ||
ನಿನ್ನ ಱ[16]ವೆಯ್ದೆ ವಂದಪು[17]ದದರ್ಕೆನಿತೊಂದಲಿಲ್ಲದಿರ್ಪೆ [18]ಯೇಂ |
ನಿನ್ನ[19]ದರಂದಮಾವುದೊ ಜರಾಮರಣಂಗ[20]ಳವಾಗವೆಂಬುದೋ || ೧೨ ||

ವ|| ಎಲೆ ಜೀವಾ, ನಿನ್ನಂ ನಿ[21]ನ್ನಂದಮನೆಯ್ದಲೀಯ[22]ದ ನಂಟರಂ ಎನ್ನವರೆಂಬವರ ಸಾವಿ[23]ನೊಳತಿದುಃಖಂಗೆಯ್ವೆ ; ಸಾರೆವರ್ಪ ನಿನ್ನ ಸಾವಿಂಗಂ ಕೇಡಿಂಗಮಱಲ್ವೆ[24]ಯಲ್ಲಿದೇಂ ವಿಪರೀತನಾದೆಯೋ—

---

(1) ಕೈಯ್ವಾರಂ (ಕ) ಕೈವಾರಂ (ಖ,ಛ,ಜ) (2) ಳಿದೇಂ (ಚ) (3) ತ್ತೊಯ್ವಿಂ (ಕ,ಜ) ತ್ತುಯ್ವಾ (ಚ) ತ್ರಯಿವೀಥ (ಛ) (4) ರ್ದಿಱದು (ಕ,ಜ) (5) ಗೆಟ್ಟಂತೇಕೆ (ಕ,ಛ,ಜ) (6) ಯೊಳ್ (ಕ) ಯಾಪಾಯಿದಿರ್ದ (ಛ) ದರ್ದಪೈ (ಜ) (7) ಲೆಂದುಪೊರ್ದಿ (ಖ) (8) ತಣ್ಪುಮಿಾತಂಗೆ ನಣ್ಪುಮಾಗದು (ಕ, ಜ) ಣ್ಪನೀಯದು (ಖ) (9) ಱದುದುಮ (ಕ) (10) ದುದುವ (ಚ) (11) ರೆಂದು ಮೋಹ (ಕ,ಜ) (12) ಡಲ್ವೇಡ (ಖ) (13) ಸಾವು (ಕ,ಜ,ಛ) (14) ಮಾಡಿ ಪಿಡಿದಳ್ತ್ತಿದು (ಕ,ಜ) ಮಾಡಿ ಬೞೞಕಿರ್ದತಿ (ಛ) (15) ಳರ್ದು (ಚ) ಳರ್ದುಬರ್ದಪು (ಛ) (16) ಮೆಯ್ಮೆ (ಖ) ನಿನ್ನನ್ನನೆ ಯೆದ್ದೆ (ಛ) (17) ದಿಧಕ್ಕನಿತುಂ (ಛ) (18) ಯಿಂ (ಕ,ಜ) (19) ನ್ನ ಱವಂದ ಮಾವುದೆಱ (ಖ) ನಿನ್ನಿರವಿಂತಿದಾಱುದೊ (ಜ, ಛ) (20) ಳವಾವುದೆಂಬುದೋ (ಛ) ದೆಂಬುದೇಂ (ಚ) (21) ನಿನಗೆ (ಚ,ಛ) (22) ಯದೆ (ಚ) (23) ನೊಳ್ದುಃಖ (ಕ) (24) ಯಲ್ಲೆಯ್ದೇಂ (ಕ) ಯಲ್ಲೆಯುದೇಂ (ಜ) ಯಲ್ಲಿಯಿದೇಂ (ಛ, ಘ)

ಕಂ|| ತನಗತ್ಯಂತಸುಖಂ ಮಾ |
ಳ್ಪನೆ ನಂಟಂ ದುಃ[1]ಖಮೆಯ್ದಿಪನೆ ಪಗೆ ಯದಱಿಂ ||
ತನಗತಿದುಃಖಂ ಮಿಗೆ ಸ |
ತ್ತ್ರ ನಂಟರಂ ಪಗೆವರೆಂದು ಸೈರಿಸು ಜೀವಾ || ೧೩ ||

ವ|| ಕುತ್ತ್ರಮಂ ಕಿಡಿಸುವುದೆ ಮದ್ದು, ನೋವಂ ಮಾಡದನೆ ನಂಟಂ, ನೋಯಿಸುವ[2]ನೆ ಪಗೆ, ಪೆಱರೆಂಬುದೇ ?

ಉ|| ಇಂಬ[3]ಱೆವಂದು ಬೇಸಱುವ ಪೆಂಡಿರ ಮಾಱ್ಕೆಯುಮಾತ್ಮಮೋಹದಾ |
ಳಂಬನಮಪ್ಪ ಮಕ್ಕಳಿಡಗಾಗದುದಂ ಧನಮುಳ್ಳನಂ ಕರಂ ||
ಡೊಂಬಿಸಿ ತಿಂಬರಿಲ್ಲದೊಡೆ [4]ಪೊರ್ದದ ನಂಟರ [5]ಪಾಂಗುಮೇವುವಿಂ |
ನಂಬಿಸ[6]ಲಾರ್ಪನೇ ಬಗೆಯೆ [7]ಪೇೞಲೆವೇೞ್ಪದೆ ಬೇಱೆಯಪ್ಪುದಂ || ೧೪ ||

ವ|| ಬಟ್ಟೆಯೊ[8]ಳ್ ಭಯುಮುಳ್ಳುದ[9]ನಱಿದು ದ್ರವ್ಯಂಗೊಂಡೊರ್ವನೆ ಕೆಯ್ದುವಿಲ್ಲದೆ ಪಯಣಂ ಬೋಪಾತಂಗಂ, ಪೆಂಡಿರ್ ಮಕ್ಕಳುಂ ನಂಟರ್ ಎಂ[10]ಬಿವರ್ ತನಗಾಗದುದನಱಿದುಂ ಮೆಚ್ಚಿಡು[11]ವಂಗಮೇನೆಂದು ಪೇೞ್ವುದೋ ?

ಕಂ|| ತಂದೆ ಮಗನಂ ಮಗಂ ತಾಂ |
ತಂದೆಯುಮಂ ಮೋಹವಶದಿನತಿಸಂಧಿಸುವೀ ||
ಯಂದಮೆ ಬೇಱಪ್ಪುದಱಿಕೆಂ |
ದಂದಮನಱಿ ಪುತ್ತ್ರಮಿರೆಯ್ಯುಮೆ[12]ನ್ನವರೆಂಬಾ || ೧೫ ||

ವ|| ನೆರಂ[13]ಬಂದವರಿಂಬಲ್ಲದೆಡೆಯೊಳ್ [14]ಭಯವಶದಿನಾಗದುದುಮಂ ಬಸಿ [15]ಱಿಕೊಳ್ ಬಂದವನರ್ಥದೆಡೆಯೊಳ್ ಮೋಹವಶದಿನಾಗದುದುಮನಱಿದುಮಾ[16]ಯಿರ್ಬರುಮ ನೆನಗೆಂದಾಸೆವ[17]ಡುವೆನೆಂಬುದದೇಂ ?—

---

(1) ಖಮ ನೆಯ್ದಿಪ (ಕ,ಜ) ಖನೆಯ್ದಿಪ (ಛ) (2) ವರೆಪಗೆವರೆಂಬುದು (ಕ, ಖ) (3) ಬಳಿದಂದು (ಕ, ಜ) ಮಿಂಬಱಪಂತು (ಛ) (4) ಪೊರ್ದುವ (ಛ) (5) ಪಾಂಗಿವೇಂಕರಂ (ಕ) ಪಾಂಗುಮಿಂತಿರೇಂ (ಛ) (6) ಲಾಪವೇ(ಕ) ಲಾಱವೇ ಬಗೆಯ (ಜ,ಛ) (7) ಪೇಳಲುವೇಳ್ವುದೆ ಬೇಱೆವೇಱೆ (ಕ,ಜ) ಪೇಳ್ವಲೆವೇಳ್ವುದು(ಛ) (8) ಯಲ್ಲು(ಕ,ಜ) ಯೊಳು (ಛ) (9) ಱದುಕೈದಿಲ್ಲದೆ ಪೋಪವಂಗಂ(ಕ,ಜ) ಱದೊರ್ವನೆ ಕಯಿದುವಿಲ್ಲದೆ(ಛ) (10) ಬವರಾಗದುದ (ಕ, ಛ, ಜ) ಬರ್ತನ (ಕ, ಛ, ಜ, ಟ) (11) ವಂಗೇನೆಂಬುದೊ (ಕ, ಜ) ಗೇನೆಂದು ಪೇಳ್ವುದು (ಛ) (12) ಮೆಂಬುವರೆಂಬಾ (ಕ,ಜ) (13) ನೆಱಂಬಂದನಿಂಬಲ್ಲೆಡೆಯೊಳ್ (ಕ,ಜ) (14) ಭವ (ಜ) (15) ಱಂ (ಕ) (16) ಮಾರುವನೆ (ಕ) (17) ವಡುವುದೇಕೆ (ಕ, ಜ, ಛ)

ಶಾ|| ಆಯುಷ್ಯಸ್ಥಿತಿ [1]ಬೇಱೆ ಬಂದ ಗತಿ ಬೇಱೀ ಜನ್ಮದಲ್ಲಿರ್ಪಭಿ |
ಪ್ರಾಯಂ ಬೇಱೆ ಬೞಿಕ್ಕೆ ಪೋಪ ಗತಿ ಬೇಱಿರ್ಪೋಜೆ ಬೇಱಣ್ಮ ಬೇ ||
ಱಾಯಂ ಬೇಱೆ ಪೊಡರ್ಪು ಬೇಱೆ ಬೆಸನಂ [2]ಬೇಱೇಕೆ ಮೆಚ್ಚಿಟ್ಟು ನೀಂ |
ಬಾಯಂ ಬಿಟ್ಟು ಕಳತ್ರದಲ್ಲಿ ತೊಡ[3]ರ್ವೈ ನಿಷ್ಕಾರಣಂ ಜೀವನೇ || ೧೬ ||

ವ|| ಆವೆಡೆಯೊಳಮೆಂತುಂ [4]ಬೇಱಪ್ಪವರ [5]ನೆನಗೆನ್ನದಿರು; ಪೊಲ್ಲಮೆಯಂ ಮಾಡದಿರ್ಪರೆ ನಿ[6]ನ್ನವರ್—

ಕಂ|| ಅಱಿದುಂ [7]ಕಂಡುಂ ನಂಟರ್ |
ಮಱೆಸುವ[8]ರೆಂತಪ್ಪ ತಪ್ಪು[9]ಮಂ ಸಾಮಾನ್ಯರ್ ||
ಮಱೆಸದಿರೆ ಬೆರ್ಚಿ ನಡೆವ[10]ಯ್ |
ಮಱಸೆ ಮನಂ ಪೆರ್ಚಿ ತಪ್ಪಿ ನರಕಂಬುಗುವಯ್ || ೧೭ ||

ವ|| [11]ಎಂತುಂ ನಿನ್ನ ದೋಷಮುಂ ಪೇೞದೆ ಮ[12]ಱೆಯಿಸಿ ನಿನಗೆ ಪಾಪಮಂ ಬರಿಸುವ ನಂಟರಂ ಪೆಱರ್ಮಾಡಿ ನಿನ್ನ ದೋಷಮುಂ ಮೆಱೆಯಿಸದ ಪೆಱರಂ ನಂಟರೆಂದು ಮಾಡಿ ಬಗೆವುದೆಲೆ ಭವ್ಯ ಜೀವಾ, ಕೇಳಿನ್ನುಂ ನಿನ್ನ ಮೆಯ್ ಬೇಱೆ ನೀಂ ಬೇಱೆಂಬು[13]ದಿಂತು—

ಮ|| ಕಿಡಲೆಂದಿರ್ಪುದು ದೇಹಮೆಲ್ಲತೆಱದಿಂ ಕೇಡಿಲ್ಲ ಜೀವಕ್ಕೆ ಮು |
ತ್ತೊಡಲಜ್ಞಾ[14]ನಿ ಸುಬೋಧದೃಷ್ಟಿ[15]ಗಳ ಮೆಯ್ ಜೀವಕ್ಕೆ ದೋಷಂಗಳಿ ||
ರ್ಪಡೆ ದೇಹಂ ಗುಣರತ್ನಮಿರ್ಪ ನಿಳಯಂ [16]ಜೀವಂ [17]ದಲೆಂತೆಂತು ನೋ |
ಱೊಡಮನ್ಯೋನ್ಯವಿರುದ್ಧಮೆಂತು ತನುವಂ ನೀಂ ಮುಚ್ಚಿದೋ[18] ಜೀವನೇ || ೧೮ ||

ವ|| ಒಂದೊಂದಕ್ಕೆ ವಿರುದ್ಧಮಪ್ಪ ಇರುಳಪ[19]ಗಲಿನ ಸಂದಿನೆಡೆಯಾ [20]ಪೊೞ್ತು ಕೆ[21]ಱಿದಪ್ಪಂತೆ ಕಿಡುವ ಮೆಯ್ಯುಂ ಕಿಡದ ಜೀವನ ಪುದುವಾೞ್ವ ದೆವಸಮೆನಿಸಿತಾ[22]ದಪ್ಪುದಂತಾಗಿಯುಂ ಮೆಯ್ ನಿನಗೊಳ್ಳಿಕೆಯ್ಯ[23]ಲಿರ್ದಪುದಲ್ತು—

---

(1) ಬೇರು (ಕ,ಜ) ಬೇಱು (ಖ,ಚ,ಛ) (2) ಬೇರಕ್ಕು (ಕ,ಜ) (3) ರ್ವೆ (ಕ,ಜ) (4) ಳಂ ಬೇರಪ್ಪ ಪೆಂಡಿರಂನಿನ (ಕ,ಜ) (5) ರನೆನ್ನದಿರ್ಪೊ (ಛ) (6) ನಿಮ್ಮವರೆಂದು ಭಾವಿಸು (ಕ,ಜ) ನಿನ್ನರೆಂದು ಭಾವಿಸು (ಛ) (7) ತಪ್ಪಂ (ಕ,ಜ) (8) ರೆನ್ನೊಂದು (ಖ,ಚ,ಛ) (9) ತಪ್ಪನನ್ಯರ್ ಮತ್ತಂ (ಚ) ತಪ್ಪನನ್ಯರ್ ತನ್ನೊಳ್ (ಖ) ತಪ್ಪನಂನ್ಯರ್ ಮತ್ತಂ (ಛ) (10) ವ್ವೆ (ಕ,ಜ) ವೆಂ (ಛ) ವರ್ (ಖ) (11) ಅಂತ—ಮಂಮಱಿಸಿ ನಿನಗೆ (ಛ) (12) ಮಱೆಯಿಸುವನಂಟರಂ ಪೆಱರೆಂದು (ಕ, ಜ) (13) ದಿಂತಲ್ತೆ (ಕ, ಜ, ಛ) (14) ಜ್ಞಾನ (ಖ) (15) ಗಳ (ಛ) (16) ಜೀವ ಮಿಂತೆಂದು (ಕ,ಜ) (17) ದಲಿಂತೆಂದು (ಚ) (18) ದ್ವೈ (ಖ) (19) ಪಗಲ (ಕ,ಜ) (20) ಡೆಯಪೊ (ಕ,ಜ) (21) ನೇಱಿದಂತೆ (ಖ) (22) ಮೆನಿಸಾದಪ್ಪು (ಕ,ಜ) ತಾದಪುವಂತಾ (ಖ) (23) ಲಿರ್ಪುದಲ್ತು (ಕ, ಜ) ಲಿರ್ದಪುದಲ್ತೆ (ಛ)

ಕಂ|| ಕಟ್ಟೆ ದುರಿತಂ[1]ಗಳಿಂ ಸೆಱೆ[3] |
ಯಿಟ್ಟಂತಾ[2]ಳ್ದಪುದು ನಿನ್ನ ನಿ[3]ೀ ಮೆಯ್ ನೀಂ ಮೆ ||
ಟ್ಟಿಟ್ಟು ಮತಿಗೆಟ್ಟು[4]ಚಿಃ ! ಬಾ |
ಯ್ವಿಟ್ಟು ಶರೀರಮನೆ ನಂಬಿ ಕಿಡ[5]ದಿರ್ ಜೀವಾ || ೧೯ ||

ವ|| ಕಳ್ಳರೊಳ್[6]ಮಚ್ಚಿದಂತೆ ರಕ್ಕಸಿಯಂ ಪಿ[7]ಡಿದೆಲಿದಾಳ್ದಂತೆ ತನ್ನ ವಶಂಮಾಡಿದ ಕರ್ಮಮಂ ಪೆರ್ಚಿಸಿ ನಿನ್ನಂ ಕಿಡಿಸಲಿರ್ಪ ಮೆಯ್ಯ[8]ವಶಮಾಗಲ್ವೇಡಾ--

ಚಂ|| ಎಡೆವಿಡದಿನ್ನೆಗಂ [9]ಕಳೆದನಂತಭವಾಂತರದೊಳ್ ಶರೀರಮಂ |
ಬಿಡದೆ ಕಡಂಗಿ ಪೊಟ್ಟು ತಿರಿತಂದುದನ[10]ಂದಿನ ನಿನ್ನ ನೊಂದುದಂ ||
ತಡೆಯದೆ ಚಿಂತಿಗೆಯ್ದು ನಿನಗೀಭವದೊಳ್ ಪಗೆ ಕೆ[11]ಯ್ಗೆ ವಂದುದಂ |
ಕಡೆಗಣಿಸಲ್ ತಪಃಕ್ರಮದೆ [ನೀನೆ] ಕಲಲ್ಕೊಡಲೆಂಬ ವೈರಿಯಂ || ೨೦ ||

ವ|| ಮುನ್ನಂ ತನ್ನನಾಪತ್ತುವಡಿಸಿದ ಪಗೆ ಕೆಯ್ಗೆವಂದೊಡಾ ಪಗೆಗೆಯ್ದೆ ಮುಳಿಯದೆಯುಂ, ಮೆಯ್ವಿಡಿ[12]ದಾ ಕೆಟ್ಟ ಕೇಡನ[13]ಱಿದುಂ ಬಗೆಗೆವಂದೊಡೀಮೆಯ್ಯಂ ವ್ರತದೊಳ್ ದಂಡಿಸದೆ[14]ಯುಮಿರ್ದೊಡೆ ಬಱಿಕ್ಕೆ [15]ಪಱಿಪಡಿಸಲ್ ಬರ್ಕುಮೆ ?

ಕಂ|| ಎನಗಿದುವಾನುಮಿದರ್ಕೆಂ |
ಬಿನಿತಂ ಬಗೆದಿರ್ದು [16]ಕೆಟ್ಟೆ ನಿನ್ನೆಗಮದಱಿಂ ||
ನಿನಗೀ ಮೆಯ್ಯೊಳ್ ಕೂರ್ಮೆಯಿ[17] |
ಡೆನಗೆತ್ತೆನಲಾಗ ನಿನ್ನ ಮನದೊಳ್ ಜೀವಾ || ೨೧ ||

ವ|| ತನಗಲ್ಲದ ಸೂಳೆಪೆಂಡಿತಿಯಂ ನಂಬಿ ಬಗೆಯಿ[18]ಲ್ಲದುಳ್ಳುದೆಲ್ಲಮಂ ಕೊಟ್ಟು ಕೆಡುವಂತೆ ಮುನ್ನಮೆ ನಿನಗಲ್ಲದ ಮೆಯ್ಯಂ ನಿನಗೆಂದು ನಂಬಿ ಕೂರ್ತು ಕೆಟ್ಟೆಯಿನ್ನಾದೊ[19]ಡವೊಳ್ಳಿ ಕೆಯ್ವುದು---

(1) ಗಳಂ (ಖ, ಚ) (2) ತಾದಪುದು (ಕ, ಜ, ಛ) (3) ಮೆಯ್‌ನೀಂ (ಛ) (4) ಟ್ಟು ಬಾಯ್ವಿಟ್ಟು (ಕ) ಟ್ಟು ಬಾಯಂಬಿಟ್ಟು (ಛ) (5) ದಿರು (ಕ, ಚ, ಜ) (6) ಪತ್ತುವಂತೆ (ಕ, ಜ) ಳ್ಳರೊಡನೆ ಮಚ್ಚುವಂತೆ (ಛ) (7) ಕಿಡಿದೆಳೆವಂತೆ (ಕ, ಜ) ಪಿಡಿದಳ್ವಂತೆ (ಛ, ಖ) ಪಿಡಿದಾಳ್ದಂತೆ (ಚ) (8) ಬಸ (ಛ) (9) ಕಿರಿದನಂತರದೊಳ್ ನಿನಗೀಶರೀರ (ಖ) ತಳೆದನನ್ತ (ಕ) ವಿಡಿದಿನ್ನೆಗಂ ಕಳಿದ (ಛ) (10) ನಂದಿನಿಂದೊದುದ್ದಂ (ಜ) ನಂದಿನಿಂದೊದುದ್ದಂ (ಜ) ನಂದಿನನಿನ್ನದೊಂದುವಂ (ಚ) ನಂದಿನನಿನ್ನಕೊಂಡುದಂ (ಛ) (11) ಕೈಗೆವಂದೊಡಿಂ (ಕ) ಕೈವಂಸೊಡಿಂ (ಜ) (12) ಡಿದು (ಕ, ಜ, ಛ) (13) ನರಿವರಿತಂಬಗೆ (ಕ, ಜ) ನಱಿವಱಿತಂ (ಛ) (14) ಯಂ ಹೇಂತಕ್ಕುಮೆ (ಖ) (15) ಸಾಧಿಸಲಕ್ಕುಮೆ (ಕ, ಜ, ಛ) ಸಲಕ್ಕುಮೆ (ಚ) (16) ಪುಟ್ಟುವಂತಿರೆ ಪುಟ್ಟಿ||ತ್ತೆನಗೀ (ಖ, ಚ) ಕೆಟ್ಟೆನಿನ್ನೆಗಮರಿದಿಂ|| (ಕ, ಜ) (17) ಯ ದೆನಿತಗಲ್ತೆನ (ಕ) ಇದೆನಿತಲ್ತೆ (ಖ) ಯಿದೆನಗಲ್ತೆ ನಗಾಗನಿಂಗ (ಛ) ಯೊಳೆನಗಲ್ತೆನ (ಚ) (18) ಯದುಳ್ಳ (ಕ, ಜ) ಯಲ್ಲಿದುಳ್ಳರ್ಥಮೆಲ್ಲ (ಛ, ಜ) (19) ದೊಡಯೊಳ್ಳಿ (ಜ) ಯಿನ್ನೊಳ್ಳಿ (ಖ)

ಶಾ|| ನಂಟರ್ ದ್ರವ್ಯದಿನಲ್ಲದಾಗಿ [1]ನೆಗಲಿರ್ ದ್ರವ್ಯಂಗಳುಂ ಪುಣ್ಯ[2]ಮೊಂ |
ದುಂಟಾಗಿರ್ದೊಡೆ ಬರ್ಕುಮಲ್ಲದೆನಿತುಂ ಮೆಟ್ಟಿಟ್ಟೊಡಂ ಬರ್ಕುಮೇ ||
[3]ಗೆಂಟಾದರ್ಥಕಳತ್ರಬ[4]ಂಧುಗಳುಮಂತಿರ್ಕನ್ನೆಗಂ ನಿನ್ನೊಳೇ |
ನುಂಟೆಂಬಂತಿರೆ ತನ್ನ ಕಾರ್ಯ ವಶದಿಂ [4]ಮೆಯ್ಯಿರ್ಪುದಂತಿರ್ಪುದೇ || ೨೨ ||

ವ|| ಬಸಿರ್ಕೊಳೞಂಗಿರ್ದ ಬಂಟನೊಂದು [5]ಪೊೞ್ತಿನೊಳ್ ಕೂೞ್ ತಪ್ಪಿದೊಡಮಗ ಲ್ವಂ[6]ತೆ ಯಾಹಾರವಿಲ್ಲದೊ[7]ಡಿನಿತುಬೇಗಂ ಕುಂದಿದೊಡೞಿವ ಮೆಯ್ಯುಂ ನಿನಗೆಂದು ನೆಗೞ್ವುದೇ ?—

ಕಂ|| ಎನ್ನಿಂ ಬೇಱಪ್ಪುದನಾ |
ನೆನ್ನಯ [8]ರೂಪೆಂದು ಮೆಯ್ಗೆ ಕೂರ್ತ[9]ಱಯದೆ ಮ ||
[10]ತ್ತಿನ್ನಾಂ ಮೆಟ್ಟಿಡಲನ್ಯರ |
ಚಿನ್ನಗೆ ಬಳೆದೊಡಿಸುವಂದಮುಂ ಪೋಲ್ತಿರ್ಕುಂ || ೨೩ ||

ವ|| ಎಂದಿಂತು[11]ತನ್ನಂ ತಾಂ ತನಗೆಮಾಡಿ [12]ಪೆಱದಂ ಪೆಱದಾಗಿ ಮಾಡಿ ಭಾ[13]ವಿಸಾ—

ಉ|| ಎತ್ತಣ ನಂಟರಾವಭವದೊಳ್ ತೊಡರ್ದಿರ್ದೊಡ[14]ವಾರರೀ ಧನಂ |
ಪತ್ತಿ[15]ದೊಡಾರ್ಗೆ ನಿಂ[16]ದಪುದು ಮುನ್ನಿನ ಮೋಹದೆ ನಿನ್ನ ಕೊಂಡ ಪೆ ||
ರ್ಗುತ್ತಮೆ ಸಾಲ್ಗುಮಾಗಳದು [17]ತಿರ್ದುವ ಬಟ್ಟೆಗೆ ವಂ[18]ದುದಿಂ ಕರಂ |
ಮತ್ತೆ ತೊಡಂಕಿ[19]ನಿಂ [20]ಮಱುಕಣಿಪ್ಪೊಡದಂ ಕಿಡಿಸಲ್ಕೆ ಬಲ್ಲರಾರ್ || ೨೪ ||

ವ|| ಕುತ್ತಮುಳ್ಳವಂ ಮರ್ದುವಡೆದವಕ್ರಿಯೆಯೊಳ್ ನೆಗೞ್ಚೊಡಂ ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮುಂ [21]ಮಱೆದು ನೆಗೞ್ಚೊಡಂ [22]ಬೆಜ್ಜುವೇೞಲ್ ಬಲ್ಲವರುಂ [23]ಧರ್ಮಂಬೇೞಲ್ ಬಲ್ಲವರುಮೇಗೆಯ್ವರ್ ?

---

(1) ನೆಗೞ್ದಾದ್ರ (ಚ) ದಾಪ ನೆಗಳಳ್ದ್ರ (ಛ) (2) ಮೆಂ (ಖ) (3) ಗೆಂಟೆಂದರ್ಥ (ಚ) ಗೆಟ್ಟೆಂಗರ್ಥ (ಖ) (4) ಮೆಂಬಿರುಮಂ (ಛ) (4) ಮೆಯಿಯಿರ್ಪ್ಪಡಂತಿ (ಛ) (5) ಪೊೞ್ತು ಕೊೞ್ಕಂದಿದಾಗ ಬೇಗಮುಗಲ್ವಂತೀ ಯಾಹಾರಮಿನಿತು (ಕ) (6) ಲ್ವಂ ತಾಹಾ (ಚ) ಲ್ವಂತೆಆಹಾ (ಖ) (7) ಡಿನಿಸು (ಖ) (8) ಮೆಯ್ಯೆಂದು (ಖ) (9) ಳಿದೆಂ (ಕ, ಚ) (10) ತ್ತಿನ್ನಾಂ ಪೆಱನಾಗೇ| ಕೆನ್ನಪೆಱಂ ಪೆಱದದೆಂತು ಮಾಂ ಪೆಱನಾಗೆಂ (ಖ) ತ್ತಿನ್ನೆನಗಾನೆ ಪೆಱಂ ಪೆಱನೆನ್ನದೆ ಪೆಱನೆಂದು ಮಾಂ ಪೆಱನಾದೆಂ (ಛ) (11) ತಾಂತನ್ನಂ (ಕ) (12) ಪೆರರಂ ಪೆರೆದು (ಕ) ಪೆಱದಂ ಪೆಱತ (ಚ) ಪೆಱತಂ ಪೆಱತೆ (ಛ) (13) ಭಾವಿಸುವುದು (ಕ, ಜ, ಛ) (14) ಲಾರದೀ (ಕ, ಜ, ಛ) (15) ದುದಾರ್ಗೆ (ಕ, ಜ) (16) ನಿಂದುದುಮು (ಕ, ಜ) ನಿಲ್ವದವಿವ್ರಮೂ (ಛ, ಜ) (17) ತೀರ್ದುವ (ಕ) (18) ವಂದು ನಿನ್ನಕರಂ (ಕ, ಜ) ವಂದು ನೀಂ ಕರಂ (ಚ) ವಂದುನಿಂದುದಿಂ (ಛ) (19) ಕಿಯಿಂ (ಕ, ಜ) (20) ಮರುತನಿಪ್ಪಡ (ಕ) ಕೂಗಿಪ್ಪಡ (ಜ) ಮಱುಕಣಿಸಿ ಪೋದೊಡದಂ ಕಿಡಿಸಲ್ಸಮರ್ಥರಾರ್ (ಛ) (21) ತೆಱೆದು (ಛ) (22) ಬೆಜ್ಜುವೇಳ್ವರುಂ ಧರ್ಮಂಪೇಳ್ವರು ಮೇಗೈವರ್ (ಕ, ಜ) ಬೆಜ್ಜುವೇಳಲುಂಧರ್ಮಂ [illegible]ಗುಮೇ (ಚ) (23) ಧರ್ಮಮಂ ಪೇೞಲ್ (ಛ)

ಕಂ|| ಮತಿಗಿಡದೇತಱನಾರಿಂ |
ಗತಿ[1] ಗಿಡದಾವುದು ಮಹಾವ್ರತಕ್ಕೆಡೆಯದೆ ಸ ||
ನ್ನುತ ಪಸ್ತುವರರೆ ! ನಂಟರ್ |
ನಿತಾಂತಮ[2]ದೆ ಮೆಯ್ಯ್ ವಿಶುದ್ಧಚಿತ್ತಂಗೆಂ[3]ದುಂ || ೨೫ ||

ವ|| ತನಗುಣಲಿಲ್ಲದುದಂ [4]ಪಸವೆನ್ನದೊಡಂ, ತನ್ನಂ ಕೋಟ್ಟಪ್ಪುದಂ ಡಾಮರಮೆನ್ನ[5]ದೊಡಂ, ಸಾವಡಸಿದು[6]ದಂ ಮಾರಿಯೆನ್ನದೊಡಂ, [7]ಮತಿಗಿಡಿಸುವರ್ಥಮಂ ವಿಷಮೆನ್ನದೊಡಂ, [8]ಗತಿಗಿಡಿಸುವ ನಂಟರಂ [9]ಪಗೆವರೆನ್ನದೊಡಂ, ಬಂಧಹೇತು[10]ಗಳಂ ಪೆರ್ಚಿಸುವ ಮೆಯ್ಯಂ ಪಾಪದ[10]ರೂಪೆನ್ನದೊಡಂ ನೀ[11]ಮಱವಿರ್—

ಉ|| ಪತ್ತಿ[12]ದ ಸ್ವೈಪು ವೆಯ್ದಿದತಿದುಃಖಮುಮೆನ್ನ ಪುರಾ[13]ಕೃತಾರ್ಥಸ |
ದ್ವೃತ್ತಿಯ ದುಶ್ಚರಿತ್ರದ ತಗುಳ್ಪಿನೊಳಾದ ಶುಭಾಶುಭಂಗಳಿಂ ||
ದೆತ್ತಮಿವಾದುವೆಂದೊಸಗೆಯಂ ಕರಮುಬ್ಬೆಗಮುಂ ವಿಮೋಹದಿಂ |
ಚಿತ್ತದೊಳಾಗಲೀಯದೆ ಸಮತ್ವದೊಳಿರ್ದೊಡೆ ದುಃಖಿಯಕ್ಕುಮೇ || ೨೬ ||

ವ|| [14]"ಬೆಂಕೆ ಕಿರ್ಚಿಂದಂ ತಣ್ಪು ನೀರಿಂದ"ಮೆಂಬಂತೆ "ದುಃಖಂ ಪಾಪದಿಂ ಸುಖಂ ಧರ್ಮದಿ"ನೆಂಬುದಂ ನಿಶ್ಚೈಸಿ ರಾಗದ್ವೇ[15]ಷಂಗಳನಿತುಮಂ ಗೆಂಟುಮಾಡುವಱತಮಂ ನಿನಗೆಂಬುದು. ಬಂಧಕಾರಣಂಗಳ[16]ಪ್ಪ ಕಳತ್ರಶರೀರಂಗಳಂ ನಿನಗೆನ್ನದಿರ್ ; ಎನೆಯುಂ ಬಗೆಯೈ. ತನ್ನ ವಸ್ತುಗ[17]ಳುಂ, ತನ್ನ ಪೆಂಡಿರುಂ, ತನ್ನವರುಂ, ತನ್ನ ಮೆಯ್ಯುಂ ತನಗಾಗದುವಂ ಪ್ರಸಿದ್ಧಪುರುಷರೊಳಾದ[18]ಕತೆಯುಂ ಜೀವಾ ನೀಂ ಕೇಳೀಕಾಗ್ರಚಿತ್ತದಿಂ—

---

## ಉದಾಹರಣ ಕಥೆ

[ ರಾವಣನ ಚರಿತ್ರಂ ]

ಕಂ|| ಬನಮೇಲುಂ ವನದುರ್ಗಂ |
ವಿನೂತ ವಿಳಸತ್ತ್ರಿಕೂಟಗಿರಿ ಗಿರಿದುರ್ಗಂ ||
ವನಧಿ [19]ಜಳದುರ್ಗಮಾಗಿ |
ರ್ದನುಪಮ ಸುರರಚಿತಮಪ್ಪ ಲಂಕಾಪುರಮುಂ || ೨೭ ||

---

(1) ವಡೆದಾ (ಛ) ಗಿಡದಿರ್ಪುದು (ಚ) (2) ಮದರಿಂ (ಕ, ಜ) ಮದಱಿಂ (ಛ) (3) ಗೆಂತುಂ (ಕ, ಜ) ಗೆಂದಂ (ಖ) (4) ಪಸಿವೆನ್ನ (ಕ) (5) ದೆಯುಂ (ಕ,ಜ) (6) ದೊಡಂ (ಕ,ಜ) (7) ಇಲ್ಲಿಂದ ಮುಂದೆ ಪಾಪ ರೂಪ ಎನ್ನುವವರೆಗೆ ಗ್ರಂಥ (ಖ) ಪ್ರತಿಯಲ್ಲಿಗಳಿತ (8) ಪಾಪಮಂಪೆರ್ಚಿಸುವ (ಕ,ಜ) (9) ಪಗೆಯೆನ್ನ (ಕ,ಜ) (10) ತುವಂ (ಕ,ಜ) (10) ರೂಪೆಂದು ಬಗೆಯದೊಡಂ (ಚ) (11) ಮರಿದಿರು (ಕ,ಜ) ಮರಿದಂ (ಘ) ದೊಡ ನಿಮಱಿವಿರಿ (ಛ) (12) ಪತ್ತಿದ ಮೆಯ್ಯ್ಕಿಡಿದತಿದುಃಖ ಮೆನ್ನ (ಛ) (13) ಕೃತ್ಯೈಕಸ (ಕ) (14) ಬೆಂಕಿ (ಕ,ಜ) (15) ದ್ವೇಷಮಂ (ಕ,ಜ) (16) ಪ್ಪಕಳತ್ರ (ಕ,ಜ,ಛ) (17) ಗಳುಂ ತನ್ನವರುಂ (ಕ,ಛ,ಜ) (18) ಕತೆಯಂ ಪೇಟ್ಟಪೆಂ ಕೇಳೇಕಚಿತ್ತದಿಂ (ಕ,ಜ) ಕಥೆಯುಂ ಕೇಳೇಕಚಿತ್ತ (ಖ) (19) ಜಳಧಿದುರ್ಗ (ಛ)

ವ|| ಅದನಾಳ್ವಂ ರಾಕ್ಷಸ[1] ವಂಶದ ಮೊದಲಿಗಂ ವಿದ್ಯಾಧರಚಕ್ರವರ್ತಿ ರಾವಣನೆಂಬ ಮಹಾ ಬಳಪರಾಕ್ರಮಂ. ಆತಂಗೆ ನಭೋ[2]ಗಾಮಿನೀವಿದ್ಯೆ, ಅಗ್ನಿವಿದ್ಯೆ, ಪನ್ನಗವಿದ್ಯೆ, [3]ಪಾತಾಳವಿದ್ಯೆ, ಭೇತಾಳವಿದ್ಯೆ ತಮೋವಿದ್ಯೆ, ಭಾಸ್ಕರವಿದ್ಯೆ[4], ತಮಸ್ತಮೋವಿದ್ಯೆ, ಗಿರಿವಿದ್ಯೆ, ಕಾಮರೂಪಿಣೀ ವಿದ್ಯೆ, ಬಹುರೂಪಿಣೀವಿದ್ಯೆ ಎಂ[5]ದಿಂತಿವು ಮೊದಲಾಗೆ ಮತ್ತಮೆನಿತಾನುಂ ಮಹಾ [6]ವಿದ್ಯೆಗಳ್ ಬೆಸನಂಪಾರು[7]ತ್ತು ಮಿರ್ಪುವು. ಮಂಡೋದರಿಮೊದಲಾ[8]ಗೊಡೆಯತಿಶಯರೂಪವಿಳಾಸ ವಿಭ್ರಮಂಗಳನುಳ್ಳಂತಃಪುರಮುಂ, ಸರ್ವರತ್ನಮಯಮಪ್ಪ ನವನಿಧಿಗಳುಂ, ತ್ರಿಜಗದ್ಭೂಷಣಂ ಮೊದಲಾಗೆನಿತಾ[9]ನುಂ ತೆಱದ ಭದ್ರಹಸ್ತಿಗಳುಂ, ಬಹುಕೋಟಿ[10]ಜಾತ್ಯಶ್ವಂಗಳುಂ ಮನೆಯೊಳಿರ್ಪುವು. ಭೂಚರ ಖೇಚರರೆಂ[11]ಬಿರ್ತೆಱದ ಕಲಿಗಳುಂ, ಬಲ್ಲಾಳ್ಗಳುಂ ತನಗಾ[12]ಳಾಗೆ ಶಕ್ತಿತ್ರಯಸಂಪನ್ನನಾಗಿರೆ ವಿಜಯಾರ್ಧಪರ್ವತದ ಮೇಗಣ ವಿದ್ಯಾಧರಶ್ರೇಣಿಗಳುಮಂ ರಥನೂಪುರಚಕ್ರವಾಳಮೆಂಬ ಪೊೞಲುಮನಾಳ್ವಂ. [13]ವಿಕ್ರಾಂತಾಕ್ರಾಂತಪರಚಕ್ರನಿದ್ರಾಂಕನೆಂಬಂ ವಿದ್ಯಾಧರಂ ತನ್ನ[14]ನಾಡುಂಪೊೞಲುಂ ಮೊದಲಾಗೆ ರಾಜ್ಯತಂತ್ರಮೆಲ್ಲಮನಿಂದ್ರತಂತ್ರಾಭಿಧಾನಂಮಾಡಿ (ತನ್ನ) ಮಯ್ಯಂ ನೋಡಿ ಯೈಶ್ವರ್ಯಮದದಿಂ ಪೆಱ[15]ರಾರೀ ಲೋಕದೊಳಾನೆ ದೇವೇಂದ್ರನೆಂದಿರ್ದುರ್ವಿನ ಮತ್ತಾತಂಗೆ ಸಂದುದುಮಂ, ಮತ್ತಂ ತಮ್ಮಜ್ಜನಪ್ಪ[16]ಮಾಲಿಯಂ ಕೊಂದುದು[17]ಮಂ (ರಾವಣಂ) ಕೇಳ್ದು ಮುನಿದು ಮೇಲೆತ್ತಿ ಕಾದಿ ಪಿಡಿದು ತಂದಿಂ ಬೞಿಯ ಮಾತನ[18]ಳವುಮನೇವೇೞ್ವುದೊ—

ಮ|| ಧರೆಯುಂ ವಾರಿಧಿಯುಂ ಮಹಾನದಿಗಳುಂ ದಿ[19]ಗ್ದಂತಿಯುಂ ಕಾಲಮುಂ |
ಗಿರಿಯುಂ [20]ನಿಲ್ವುವು ರಾವಣಂ ಮುಳಿಯೆನೆಂದಿರ್ಪನ್ನೆಗಂ ಕ್ರೋಧನಿ ||
ರ್ಭರನಾದಂ[21]ದವು ನಿಲ್ಲವೆಂಬಿನಿತು[22]ದಗ್ರೋದಗ್ರಪ್ರತಾಪಂಗಳಾರ್ |
ದೊರೆಯಾರ್ ಮಿಱುವರಾರಿದಿರ್ಚುವವರಾರ್ ವಿಕ್ರಾಂತಸಂಪನ್ನನೊಳ್ || ೨೪ ||

---

(1) ಶದವಿದ್ಯಾಧರ (ಛ) (2) ಗಮನವಿದ್ಯೆ (ಚ) (3) ಇದು ಹಲವುಪ್ರತಿಗಳಲ್ಲಿಲ್ಲ (4) ವಿದ್ಯೆಕಾಮದಾಯಿನಿ(ಕ) (5) ದಿಂತುಮತ್ತವೆನಿ (ಕ) (6) ವಿದ್ಯಾದೇವತೆಗಳ್ (ಕ,ಛ,ಜ) (7) ರುತ್ತಿರ್ಪರು (ಛ) (8) ೞಾಗೆಯತಿಶಯಮಪ್ಪಂತ (ಕ,ಜ) ಲಾಗೆನಿಬರನುಮತಿಯ ರೂಪುವಿಳಾಸ (ಛ) (9) ತಾನುಂ ಭದ್ರ (ಛ) (10) ಕೋಟಿಪ್ರಮಾಣದ (ಕ,ಜ) (11) ರರೆಂಬೆರಡುಂ ತೆರದ ಬಲ್ಲಾಲ್ಗಳುಂ (ಕ,ಜ) (12) ಮೊದಲಾಗೆಶಕ್ತಿ (ಕ, ಜ) ಆಳಾಗೆಶಕ್ತಿ (ಚ) (13) ಪುರಂಮೊದಲಾಗೆರಾಜ್ಯತಂತ್ರಮನಿಂದ್ರ ತಂತ್ರಾಭಿಧಾನಂ ಮಾಡಿಮುಯ್ಯಂ ನೋಡಿಪೆಱನೀಲ್ಲಾನೆ ದೇವೇಂದ್ರನೆಂದುರ್ವಿನಮಾತಂಗೆ (ಕ,ಜ) ವಿಕ್ರಾಂತಪರಾಕ್ರಮ ನಿಂದ್ರಾಂಕವಿದ್ಯಾ (ಚ) ಪರಚಕ್ರಮನುಳ್ಳನಿಂದ್ರನೆಂಬಂ ವಿದ್ಯಾ (ಕ) ವಿಕ್ರಾಂತಪರಾಕ್ರಮನಿಂದ್ರನೆಂಬೊಂ ವಿದ್ಯಾ (ಛ) (14) ನಾಡುಪೊೞಲುಮ ನಿಂದ್ರತಂತ್ರಾಭಿಧಾನಂ ಮಾಡಿ (15) ರಾರಿಲ್ಲೀಲೋಕ (16) ಮಹಾಬಲಿಯುಂ (ಕ, ಜ) ಬಾಲಿಯುಂ (ಛ) ಸುಮಾಲಿಯಂ (ಚ) (17) ದನೆಂಬುದಂಕೇಳ್ದ ರಾವಣಂ ಮುನಿದೆತ್ತಿ ಮೇಲೆರ್ದುಕಾದಿ- (ಕ, ಜ) (18) ನಳವನೇವೇೞ್ವೆಂ (ಚ) (19) ಭೂಮಿಾಶರುಂ (ಕ,ಜ) (20) ನಿಲ್ಲವು (ಕ, ಜ) ನಿಲ್ವುವೆ (ಛ) (21) ತವು (ಛ) (22) ನಿತುಗ್ರೋಗ್ರಪ್ರತಾಪನ್ನನೊಳು (ಕ)

ವ|| ಅಂತಗುರ್ವು ಪರ್ವಿ ನಿಲೆ ಕಿನ್ನರ ಕಿಂಪುರುಷ ಗರುಡಗಂಧರ್ವ ಯಕ್ಷ[1] ರಾಕ್ಷಸ ಭೂತ ಪಿಶಾಚ ಪ್ರಭೃತಿಗಳೆಲ್ಲರುಮಾತಂಗೞ್ಕಬೞ್ಕ ನಯಮನೆ ಮುಂದಿಟ್ಟು ನಡೆಯುತ್ತಿರ್ಪ[2] ರಂತೞಿಂ.

ರಗಳೆ— ಧರೆಯೊಳ್ [3] ಪೆಱರವನವೊಲಾರರಿಯರ್—ಸಿರಿಯೊಳ್ ಪೆಱರ[4]ವನವೊಲಾರ್ ಪಿರಿಯರ್ || ೧ ||
ಚಕ್ರಿಗಳವನಂದದಿ ನಾರುಗ್ರರ್ — [5] ವಿಕ್ರಮದಿಂ ದಾರನ್ನರುದಗ್ರರ್ || ೨ ||
ಕಲಿತನ[6]ದಿಂ ದವನಂತಾರಾದರ್ — ಚಲಮುಂ ಪೆಱರವನಂತಾರ್ ಕಾದರ್ || ೩ ||
ವಿದ್ಯಾಬಲದಿಂದಂತಾರೆಸೆದರ್ — ಚೋದ್ಯಂ ಮಿಗೆ ಪೆಱರಂತಾರ್ ಬೆಸೆದರ್ || ೪ ||
ದುರ್ಗಂಗಳಿನವನಂತಾರ್ ನೆಱೆವರ್ — ಸ್ವರ್ಗಾಧಿಪರವನಂತಾರ್ ಮೆಱೆದರ್ || ೫ ||
ಸುರರಿಂದವನಂತಾರ್ ಸಂಪ[7]ನ್ನರ್ — ಹಿತಬಲದಿಂ [8]ದಾವಂ ಪೆಱರನ್ನರ್ || ೬ ||
ದೆಸೆಯೆಲ್ಲಮನಂತಾರಂಜಿಸಿದರ್ — ಜಸದಿಂದಿಂತಾರ್ ಮಿಗೆ ರಂಜಿಸಿದರ್ || ೭ ||
ಕೈಲಾಸಮನಂತಾರೆತ್ತಿದವರ್ — [9]ಮೇಲಂತಾರ್ ಭುವನಮನೊತ್ತಿದವರ್ || ೮ ||
ಭೂಚರರಂತಾರ್ ಧಾತ್ರಿಯನಲೆದರ್—ಖೇಚರರಂತಾರ್ ಜಗದೊಳ್ಮಲೆದರ್ || ೯ ||
ಮೇಗಿ[10]ಲ್ಲಿಂದಂತಾವನೊ ಸಂದಂ — ಭೋಗಂಗಳೊಳಂತಾವನೊ ನಿಂದಂ || ೧೦ ||
ಅಂತಿಂ[11]ದ್ರಾಂಕನ ನಿೞಿದಾರ್ ಪಿಡಿದರ್ — [12]ಇಂತಾರ್ ಬಲ್ತನದೊಳ್ ನಡೆದರ್ || ೧೧ ||
ಭೀಕರ ಮಿಂತವನೊಂದಾಸುಕರಂ — ಲೋಕಕ್ಕ[13]ವನಳವುಮುಗುರ್ವು ಕರಂ || ೧೨ ||
||೨೯||

ಕಂ|| ಪೆಂಪಿನಗುರ್ವಪ್ಪುದನೇ |
ನಂ ಪೇೞ್ವೆಂ ಮೆಱೆಯಲೆಂದು [14]ಬವಣಿಗೆಗೆ ದಶಾ ||
ಸ್ಯಂ ಪೊಱಮಟ್ಟೊಡೆ [15]ಗದಗದ |
ಗಂಪಂ ಗೊಳುತಿರ್ಪು[16]ದೆಂದು ಧರಣೀಚಕ್ರಂ || ೩೦ ||

ವ|| ಅಂತಪ್ಪ ರಾವಣಂ [17]ಸೀತಾದೇವಿಯುಂ ತಂದೊಡೆ ರಾಮಸ್ವಾಮಿ ಭರಂಗೆಯ್ದಾ[18]ರಯ್ದು ಆೞಿದು ಮೇಗೆೞ್ದು ಸಮುದ್ರಮುಂ ಪಾಯ್ದು ಲಂಕೆಯಂ [19]ಭೇದಿಸಿ ಬಿಟ್ಟು[20]ಕೊಡುವುದುಂ, ರಾವಣನ ವಂಶದೊಳ್ ಮುನ್ನಂ ಧವಳಕೀರ್ತಿಯ ಕಾಲದೊ[21]ಳಾತಂಗೆ ಶ್ರೀಕಂಠನೆಂಬ

---

(1) ರಾಕ್ಷಸ....ಮಾತಂಗೞ್ಕನಯಮನೆಮುಂತಿಟ್ಟಪ್ಪರದೞಿಂ ರಗಳೆನಿತುದಗ್ರೋ....(ಎಂದು ಗ್ರಂಥ ನಿರಂತರವಾಗಿದೆ) (2) ರಂತಿರ್ಪುದೞಿಂ (ಖ) (3) ಪೆರರಾರವನವೊಲಾೞಿರಿಯರ್ (ಕ) ರರಾರವನಂತಾರ್ಯರ್(ಚ) ಪೆರರಾರವನ ವೊಲಾರೞಿಯರ್ (ಜ) (4) ರವನಂತಾರ್ (ಚ) (5) (ಕ,ಜ) ಇಲ್ಲಿ (6) ದಿಂದಾರವನಂ (ಖ,ಛ) (7) ಪನ್ನಂ (ಖ) (8) ದಾವೊಂ ಪೆಱನನ್ನಂ (ಖ) ದಾವನೆಂ ಪೆಱ (ಚ,ಛ) (9) ಕೇಳಂತಾರ್ (ಖ) (10) ಲ್ಲಿನಗೆಂದಾವನೊ (ಕ,ಜ) ಲ್ಲಿಂದಿಂತಾವ (ಜ,ಛ) (11) ತಿಂದ್ರಾರ್ಕನನಾವನೊಪಿಡಿದಂ (ಛ) (12) ಸಂತವಾರ್ ಬಲ್ಪಿಂದಂ ನಡೆದರ್ (ಖ) ದಿಂ ತಡೆದರ್ (ಜ) (13) ಕಳವಲ್ಲ ದಗುರ್ವು (ಛ) (14) ಬವಣೆಗೆ (ಕ) (15) ಕದಕದ (ಕ,ಜ) ಗಡಗಡ (ಚ) (16) ದೆಯ್ದೆ ಧರಣಿಸಮಸ್ತಂ (ಕ, ಜ) ದಖಿಳಧವಣಿಸಮಸ್ತಂ (ಛ) (17) ಸೀತೆಯಂ (ಚ) (18) ರಯ್ದುಮುಳಿದುಸಮುದ್ರ (ಕ) ರಯ್ದು ಅೞಿದು ಮುಳಿದು ಮೇಲೆಯ್ದೆ (ಚ) ಅೞಿದು ನೆಱೆಯೆ ಮೇಗೆರ್ದು (ಖ) (19) ಬಳಸಿ (ಕ,ಜ,ಛ) (20) ಕಾದುವುದುಂ (ಕ) ಕಾದುವಂದು (ಚ) (21) ಳಾತಂ (ಕ, ಜ)

ವಾನರ ವಂಶದ ಮೊದಲಿಗಂ ಮಿತ್ರ[1] ನಾಗಿ ನಡೆದಂತೆ ಅಪಾರಾವಾರಂಬರಂ ಬಂದ ಸುಗ್ರೀವಂ ಮೊದಲಾ[2]ಗೊಡೆಯ ವಾನರರಾಜರೆಲ್ಲಂ ರಾಮಸ್ವಾಮಿಯೊಳ್ ಕೂಡಿ ಬಂದು ಕಾದಿದೊಡವ ನೊಡವುಟ್ಟಿದ ವಿಭೀಷಣನುಮಣ್ಣನಂ ಬಿಸುಟ್ಟು–[3] ತನ್ನೊಳ್ ಕೂಡಿ ಬಂದಿಱಿದಂ. ಅವನ ವಿದ್ಯಾ ದೇವತೆಗಳುಂ [4]ಸೋಲ್ತುಗಲ್ದು ತೊಲಗಿಪೋದುವು. ದುರ್ಗಂಗಳುಂ ನವನಿಧಿಗ[5]ಳುಂ ಸಹಾಯ ಮಾಡುದಿಲ್ಲ. ಭದ್ರಹಸ್ತಿಗಳುಂ ಜಾತ್ಯಶ್ವಂಗಳುಂ ವೀರ ಭಟಸೇನೆಗಳುಂ ನೆರೆ(ಱೆ)ದು ನಿಂದುವಿಲ್ಲ. ತನ್ನ ಮನೆಯೊಳ್ ಪುಟ್ಟಿದ (ತನ್ನ) ನಚ್ಚಿನ [6]ಚಕ್ರ ರತ್ನಮುಂ ಪಗೆವನ ಕೆಯ್ದೆ [7]ಪೋಗಿ ಮಗುಟ್ದು ತನ್ನನೆ ಕೊಂದತ್ತು. ಕೈಲಾಸಮನೆತ್ತಿದ ಬಲಮನುಳ್ಳ [8]ಮೆಯ್ಯೊಂದಾಯುಧದೊಳೆ ಕೆಡೆದತ್ತು. [9]ಇಂತು ತನಗೆಂದಿರ್ದು ವನಿತುಂತೆಱದ ಕಾಪುಗಳುಂ ತನಗಾಗದಿರೆ ರಾವಣಂ ಸತ್ತು [10]ನರಕಕ್ಕೆ ಪೋದನೆಂಬೀ ಕತೆಯಂ ಕೇಳ್ದನ್ಯತ್ವಮಂ ಭಾವಿ[11]ಸು ಜೀವಾ! ನಿನಗಂ ದ್ರವ್ಯಮುಂ, ಕಳತ್ರಮುಂ, ಶರೀ[12]ರಮುಂ, ಎಂಬಿವರ್ಕಂ, ಸಂಬಂಧ[13]ಮಪ್ಪಂತಾವುದಂತರಂ ?

ಚಂ|| ಕಸವರಮೆತ್ತನಂತಗುಣಮೆತ್ತ ಕಳತ್ರದ ಸಿರ್ಕಿದೆತ್ತ ನಿ |
ನ್ನ ಸದೃಶ [14]ರೂಪದೂರ್ಧ್ವಗತಿ [15]ಭಾವನಿದೆತ್ತ ಕರಂ ವಿಮೋಹದಿಂ ||
ಕಿಸುಗುಳಮಪ್ಪ ಮೆಯ್ಯೊಳಿಂ[16]ವೆತ್ತ ಸುನಿಷ್ಕಲನಪ್ಪುದೆತ್ತ ಚಿಃ ! |
ಬಿಸುಡು ವಿರುದ್ಧದೊಳ್ ತೊಡರ್ದು ನಿಲ್ವುದು [17]ಪಾಟಿಯದಲ್ತು ಜೀವನೇ || ೩೧ ||*

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

ಅನ್ಯತ್ವಾನುಪ್ರೇಕ್ಷಾ ನಿರೂಪಣಂ — ರಾವಣ ಕಥಾವರ್ಣನಂ

ಚ ತು ರ್ಥಾ ಧಿ ಕಾ ರಂ.

---

(1) ನಾಗಿರ್ದಂತಂತೆ ಪಾರಂಪರ್ಯಂಬರಂ (ಕ) ಪರ್ಯಂ ಬಂದ (ಜ) ವಾಗಿನಡೆದಂತಾ ಪರಂಪರಂ ಪರ್ಯಾಯದಿಂ ಬಂದು (ಚ) (2) ಲಾಗೆ ವಾನರವಂಶದವರೆಲ್ಲಂ ರಾವಣನಂಬಿಟ್ಟು (ಕ,ಜ) ರಾಮನೊಳ್ ಕೂಡಿ ಕಾದಿದೊಡವರೊಡವುಟ್ಟಿದ (ಕ,ಜ) (3) ಟ್ಟಾತನೊಳ್ ಕೂಡಿ ಬಂದು ಕಾದಿದಂ (ಕ,ಜ) ರಾಮನೊಳ್ ಕೂಡಿ ಬಂದಿಱಿದಂ (ಛ) ತನ್ನನೆ ಬಂದಿಱಿದಂ (ಚ) (4) ಸೋಲ್ತು ಪೋದುವು (ಖ) ಸೋಲ್ತು ತೊಲಗಿ ಪೋದು (ಚ,ಛ) (5) ಳುಮಾಸೆಯಂದುವಿಲ್ಲ (ಕ,ಜ) ನಿಧಿಯುಮಾಸೆ ಯಾದುದುಮಿಂ ಭದ್ರ (ಛ) (6) ಚಕ್ರಮುಂ (ಖ) (7) ಪೋಗಿ ತನ್ನನೆ (ಕ,ಜ) ಪೋಗಿ ಬಂದು ತನ್ನ (ಛ) (8) ಮೆಯ್ಯುಮೆಯ್ಯೊಂಬಿವಕ್ಕಂ ಸಂಬಂಧಮಪ್ಪಂತಾವು ದಂತರಂ (ಚ) (9) ಮತ್ತಂ ತನಗಿರ್ದುವನಿತುಂ ತನಗಾಗದಿರೆ (ಖ) ಇಂತುತನಗೆಂದಿರ್ದುವೆ ನಿತನಿತುಂ ತನಗಾಗ ದಿರೆಯುಂ (ಛ) ತನಗೆಂದಿರ್ದವೆನಿತಾನುಂ ತೆರದ (ಕ, ಜ) (10) ನರಕಕ್ಕಿೞಿದನೆಂಬೀ (ಛ) ನೆಂಬುದಂಕೇಳ್ದನ್ಯ (ಖ) ಕೇಳ್ದನ್ಯತ್ವಮಂ ಜೀವಾ ನೀಂ ಭಾವಿಸುವುದು. ಎಲೆ ಜೀವಾ ನಿನಗೆ (ಕ, ಜ) (11) ವಿಸೂದೆಲೆ ಜೀವಾ ನಿನಗಾದ್ರವ್ಯ (ಛ) (12) ಮೆಯ್ಯೊಂಬಿವರ್ಕೆ (ಕ,ಜ) ಮೆಯಿಯೆಂಬುದ (ಛ) (13) ಮಪ್ಪಂದಮಾವುದೋ (ಕ,ಜ) (14) ಮಾಗುವೂರ್ಧ್ವ (ಕ, ಜ, ಛ) (15) ವಾಮಮಿದೆತ್ತ (ಛ) (16) ವೆತ್ತಿಮನಿಷ್ಕಲವ (ಕ, ಜ) (17) ನಿನ್ನಳವಲ್ತು ಜೀವನೇ (ಕ, ಜ)

* ಬ್ರಹ್ಮ ವ್ರತಾನ್ತೋ ಜಿನನಾಯಕೇನೋ – ತ್ತಮಕ್ಷಮಾದಿರ್ದಶಧಾಪಿ ಧರ್ಮಃ ||
ಯೇನ ಪ್ರಯುಕ್ತೇನ ತು ಬಂಧುಬುದ್ಧ್ಯಾ – ತಂ ಶೀತಲಂ ಶೀತಕರಂ ನಮಾಮಿ || — (ಕ,ಜ)

|| ಪಂಚಮಾಧಿಕಾರಂ ||

(ಪಲವುಂ ಪರ್ಯಾಯಂಗಳೊಳ್ ತೊಳಲ್ವುದೆಂಬ)

## — ಸಂಸಾರಾನುಪ್ರೇಕ್ಷೆ —*

ಕಂ|| ಗತಿಗಳ್ ನಾಲ್ಕುವಱೊಳಳಂ |
ಕೃತದಿಂ ಪದಿನಾಲ್ಕು ತೆಱದಿನಿರ್ದುವನೇಕಾ ||
ಕೃತಿಯಾಗಿ ತಿರಿವ ಜೀವ |
ಪ್ರತತಿಯ ತಿರಿತರುತು ಮಿರ್ಪುದೇ ಸಂಸಾರಂ || ೧ ||

ವ|| ಅವಾವುವೆಂದೊಡೆ:— ಏಕೇಂದ್ರಿಯ ಬಾದರಪರ್ಯಾಪ್ತಕಾಪರ್ಯಾಪ್ತಕಂ, ಸೂಕ್ಷ್ಮೈಕೇಂದ್ರಿಯ ಪರ್ಯಾಪ್ತ ಕಾಪರ್ಯಾಪ್ತಕಂ, ದ್ವೀಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ, ತ್ರೀಂದ್ರಿಯ ಪರ್ಯಾಪ್ತ ಕಾಪರ್ಯಾಪ್ತಕಂ, ಚತುರಿಂದ್ರಿಯ ಪರ್ಯಾಪ್ತ ಕಾಪರ್ಯಾಪ್ತಕಂ, ಅಸಂಜ್ಞಿ ಪಂಚೇಂದ್ರಿಯ ಪರ್ಯಾಪ್ತ ಕಾಪರ್ಯಾಪ್ತಕಂ, ಸಂಜ್ಞಿ ಪಂಚೇಂದ್ರಿಯ ಪರ್ಯಾಪ್ತ ಕಾಪರ್ಯಾಪ್ತಕಂ—ಎಂದಿಂತು ಚತುರ್ದಶಭೇದಜೀವಸಮಾಸೆ(ಮಾರ್ಗಣಾ ಭೇದಂ)ಗಳೊಳಿರ್ದ ಜೀವರಾಶಿಯ ಚತುರ್ಗತಿಗಳೊಳ್ ತೊಳಲುತ್ತುಮಿರ್ಪುದು ಸಂಸಾರಂ.

ವ|| ಆ ಸಂಸಾರದೊಳಗೆ ಪರಿಣಾಮವಶದಿಂ—

---

* ಈ ಸ್ಥಳದಲ್ಲಿ ಕೆಳಗೆ ಕೊಟ್ಟಿರುವ ಸಂಸ್ಕೃತ ಶ್ಲೋಕಟೀಕೆಗಳು (ಕ,ಚ,ಜ,ಝ) ಪ್ರತಿಗಳಲ್ಲಿವೆ—

ಜಿನಸ್ತುತಿ || ಕುವಾದಿವಾದಾ್ ಜಯತಾ ಮಹಾನ್ತಂ—ನಯಪ್ರಮಾಣೈರ್ವಚನೈರ್ಜಗತ್ಸು ||
ಜೈನಂ ಮತಂ ವಿಸ್ತರಿತಂ ಚ ಯೇನ—ತಂ ದೇವದೇವಂ ಸುಮತಿಂ ನಮಾಮಿ || ೧ ||

ವೃತ್ತ್ಯಾ ಜಾತಿಗತಿಷ್ವವಾಪ್ತಕರಣೋऽನಂತಾಂಗಹಾರಸ್ಸದಾ |
ಪ್ರೋದ್ಭೂತಿಪ್ರಳಯೋ ನರಾಮರಮೃಗಾದ್ಯಾಹಾರ್ಯಪರ್ಯಾಯವಾ್ ||
ಹಿತ್ವಾ ಸಾತ್ವಿಕಭಾವಜಾತಮಿತರೈಃ ಭಾವೈಃ ಸ್ವಕರ್ಮೋದ್ಭವೈಃ |
ಜೀವೋऽಯಂ ನಟವದ್ಭ್ರಮತ್ಯಭಿನವಃ ಸರ್ವತ್ರ ಲೋಕತ್ರಯೇ || ೨ ||

[ಈ ಶ್ಲೋಕ ಝ ದಲ್ಲಿಲ್ಲ]

ಟೀ || ವೃತ್ತ್ಯಾ—ಪರಿವರ್ತನದಿಂ, ಜಾತಿಗತಿಷು—ಏಕದ್ವಿತ್ರಿಚತುಃಪಂಚೇಂದ್ರಿಯ ಜಾತಿಗಳೊಳಂ – ನಾರಕತಿರ್ಯಙ್ಮನುಷ್ಯದೇವಗತಿಗಳೊಳಂ, ಅವಾಪ್ತಕರಣಃ – ಅಯ್ದಿಂದ್ರಿಯಂಗಳ ಸ್ವರೂಪಮನುಳ್ಳಂ, ಅನಂತಾಂಗಹಾರಃ—ಅನಂತ ಶರೀರಂಗಳ ಕೆಯ್ಕೊಳುಹಮನುಳ್ಳಂ, ಸದಾ—ಎಲ್ಲಾ ಕಾಲಂ, ಪ್ರೋದ್ಭೂತ ಪ್ರಳಯಃ—ಪಲವು ಪುಟುಗಳ ಮಾಂಸಾವುಗಳುಮನುಳ್ಳಂ ? ನರಾ......ಯವಾ್—ಮನುಷ್ಯದೇವ ಮೃಗಂಮೊದಲಾದ ಕರ್ಮದಿಂ ಮಾಡಲ್ಪಟ್ಟ ಪರ್ಯಾಯಮನುಳ್ಳಂ, ಸಾತ್ವಿಕಭಾವಜಾತಂ—ಸಹಜಾನಂತ ಜ್ಞಾನಸುಖಾದಿ ಸ್ವಭಾವಂಗಳಂ, ಹಿತ್ವಾ—ಬಿಟ್ಟು, ಸ್ವಕರ್ಮೋದ್ಭವೈಃ—ತನ್ನ ಕರ್ಮಂಗಳಿಂದಾದ, ಇತರೈಃ—ಉಳಿದ, , ದೌದ್ರೈ (ಕಾ) ತಾದಿ ? ಗಳಪ್ಪ ಭಾವೈಃ—ಪರಿಣಾಮಗಳಿಂ, ಅಯಂ—ಈ, ಜೀವಃ—ಜೀವಂ, ಅಭಿನವಃ—ಅಪೂರ್ವಮಪ್ಪ, ನಟವತ್—ಆಟಕಾರನಂತೆ. ಭ್ರಮತಿ—ತೊಳಲ್ಗುಂ, ಲೋಕತ್ರಯೇ—ಮೂರುಲೋಕದೊಳು, ಸರ್ವತ್ರ—ಎಲ್ಲೆಡೆಯೊಳಂ, ನಟಪಕ್ಷದಲ್ಲಿ (ವೃತ್ತ್ಯಾಜಾತಿಗತಿಷು – ಎಂಬ ಶಬ್ದಗಳಿಗೆ) ಭರತಪ್ರಯೋಗಾರ್ಥಮಂ ಪೇಱಿಕೊಳ್ವುದು. ಪಲವುಂ ಪರ್ಯಾಯಂಗಳೊಳ್ ತೊಳಲ್ವುದೆಂಬ ಸಂಸಾರಾನುಪ್ರೇಕ್ಷೆ—

ಉ|| ಎಲ್ಲೆಡೆ[1]ಯೊಳ್ ಚತುರ್ಗತಿಗಳೊಳ್ ಪರಮಾಣುಗಳೆಲ್ಲಮಂ ತಗು |
ಳ್ದೆಲ್ಲವೞಾಯುವಂ ಪೆಸರ್ಗಳಾದು[2]ವ ನೆಲ್ಲಮನಂತೆ ಮತ್ತೆ ರೂ ||
ಪೆಲ್ಲಮನೆಲ್ಲಕಾಲ ಸಮಯಂಗಳನು[3]ದ್ಭವಮಾದ ಸಂಖ್ಯೆಯಂ |
ತೆಲ್ಲಮನೆಯ್ದಿ ವಂದು ಪರಿವರ್ತಿಸುತಿ[4]ರ್ಪುವು ಜೀವರಾಶಿಗಳ್ || ೨ ||

ವ|| ಅದೆಂತೆಂದೊಡೆ :— ಒಂದೆಡೆಯೊಳ್ ಪುಟ್ಟಿಪೊಂದಿದ ಜೀವನೆನಿತಾನುಂಭವಂಗಳಂ ತೊಳಲ್ದು ಬಂದಾ[5] ಮುನ್ನಿನ ಪುಟ್ಟಿದೆಡೆಯ ಕೆಲದೊಳ್ ಪು[6]ಟ್ಟಿಯಂತಾ ಕ್ರಮದಿಂ ಚತುರ್ಗತಿಗಳೊಳಾದ ಕ್ಷೇತ್ರ ಮನಿತಱೊಳಂ ಕೂಡಿ ಪುಟ್ಟಿದೊಡೊಂದು ಕ್ಷೇತ್ರಪರಾವರ್ತನಂ, ಒರ್ಮೆ ಶರೀರಮಂ [7]ಕೆಯ್ಕೊಳ್ವಲ್ಲಿ ತೆಗೆದುಕೊಂಡ ಪರಮಾಣುಗಳಲ್ಲದೆ ಪೆಱಪೆಱವು ಪರಮಾಣು[8]ಗಳಂ ಕೊಂಡಂತೀ ಮೂಱು ಲೋಕದೊಳುಳ್ಳ ಪರಮಾಣುಗಳೆಲ್ಲಮಂ ಕೂಡಿಕೊಂಡೊಡದೊಂದು ಪರಮಾಣುಪರಾವರ್ತನಂ–ಒಂದು[9] ರೂಪಂ ಕೆಯ್ಕೊಂಡು ಬಿಸುಟ್ಟಂತೆ ಪೆಱಪೆಱವು ರೂಪಂ ಕೊಂಡಂತೆ ಲೋಕದೊಳುಳ್ಳ ರೂಪೆಲ್ಲಮಂ ಕೂಡಿಕೊಂಡೊಡದೊಂದು ರೂಪಪರಾವರ್ತನಂ–ಒಂದು ಪೆಸರ [10]ನೊರ್ಮೆಕೊಂಡು ಮತ್ತಂ ಪೆಸರ್ಗಳವೆನಿತು ಅನಿತುಮಂ ಕೆಯ್ಕೊಂಡು ಮುನ್ನಿನ ಕೊಂಡ ಕೆಲದ ಪೆಸರಂ ಕೊಂಡೊಡದೊಂದು ನಾಮಪರಾವರ್ತನಂ – ಒರ್ಮೆಯೊಂದು [11]ಸಮಯದ ಕಾಲದೊಳ್ ಪುಟ್ಟಿ ಸತ್ತು ತೊಳಲ್ದು ಬಂದಾ ಸಮಯದ [12]ಕೆಲದ ಸಮಯದೊಳ್ ಪುಟ್ಟಿ ಅನನ್ತ ಕಾಲಸಮಯಂಗಳೆನಿತೊಳವನಿತುಮಂ ಕೂಡಿ ಪುಟ್ಟಿದೊಡದೊಂದು ಕಾಲ ಪರಾವರ್ತನಂ— ಒಂದು ಪರಿಣಾಮಮಂ [13]ಮಾಡಿ ಮತ್ತಂ ಪರಿಣಾಮವೆನಿತೊಳವನಿತುಮಂ ಕೊಂಡು ಮುನ್ನಿನ ಪರಿಣಾಮದ ಕೆಲದ ಪರಿಣಾಮಮಂ ಕೊಂಡು ಮತ್ತಂ ನೆಱೆಯೆ ಕೊಂಡೊಡದೊಂದು ಪರಿಣಾಮ ಪರಾವರ್ತನಂ, ಒಂದಾಯುಷ್ಯಮನೊರ್ಮೆಕಟ್ಟಿ ಮತ್ತಮಂತೆ ಪೆಱಪೆಱವಾಯುಷ್ಯಮೆಲ್ಲಮಂ

---

ಯತ್ಸುಖಂ ತತ್ಸುಖಾಭಾಸಂ ಯದ್ದುಃಖಂ ತದ್ವದಾಂಜಸಾ ||
ಭವೇಲ್ಲೋಕಾಃ ಸುಖಂ ಸತ್ಯಂ ಮೋಕ್ಷ ಏವ ಸ ಸಾಧ್ಯತಾಂ || ೩ ||

ತಾ|| ಎಲೈ ಭವ್ಯರಿರಾ ಸಂಸಾರದೊಳ್ ಸುಖಮಾಗಿ ತೋರ್ಪುದು ಸುಖಾಭಾಸಮಲ್ಲದೆ ಸುಖಮಲ್ತು. ದುಃಖಮುಂ ಅನಂತದುಃಖಕಾರಣಪ್ಪುದು ನಿಶ್ಚಯಂ. ಅದಱಿಂದೆ ಸತ್ಯಮಾಗಿರ್ಪ ಸುಖಾಭ್ಯುದಯಂ ಮೋಕ್ಷದೊಳಪ್ಪುದಱಿಂದಾ ಮೋಕ್ಷಮೆ ಪಡೆಯಲ್ವೇಟ್ಕೆಂಬ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂ ಗೆಯ್ವೆನದೆಂತೆನೆ—

---

(1) ಯುಂ (ಟ) (2) ವವೆಲ್ಲವವಂತೆ (ಟ) (3) ಭಾವಶಂಕೆಯಿಂದೆಲ್ಲ (ಕ) ಭಾವಶಂಕೆ ತಾನಲ್ಲ (ಚ) ಭಾವ ಸಂಖೆ ತಾನೆಲ್ಲ (ಛ) ಕಾಲಸಂಖ್ಯೆಯಂ (ಟ) (4) ರ್ಪುದು ಜೀವನಾಗಳುಂ (ಕ, ಚ) (5) ಬಂದು ಮುನ್ನಂಪುಟ್ಟಿದ ಕ್ಷೇತ್ರದ (ಕ, ಟ) ಬಂದದಱಕೆಲ (ಛ) (6) ಪುಟ್ಟಿಮತ್ತೆನಿತಾನುಂಭವಂಗಳಂ ತೊಳಲ್ದುಬಂದದಱ ಕೆಲದೊಳ್ ಪುಟ್ಟಿಯಂತಾಕ್ರ (ಚ) ಪುಟ್ಟಿಯಥಾಕ್ರಮ (ಛ) (7) ಕೊಳ್ವಲ್ಲಿ (ಝ) ಕೊಳ್ವಂದು (ಕ, ಟ) (8) ಗಳಂತೀಲೋಕ (ಕ, ಟ) (9) ರೂಪು ಕೊಂಡುಬಿಸುಟ್ಟು ಮತ್ತಂತೆ ಲೋಕ (ಕ, ತ) ರೂಪಂ ಕೈಕೊಂಡು ಮಂತಂತೆ ಮೂಱುಂ ಲೋಕದೊಳುಳ್ಳ ಪೆಸರ್ಗಳೆನಿ (ಛ) (10) ಕೊಂಡದಂ ಬಿಸುಟು ಮತ್ತೊಂದು ಭವದೊಳೊಂದು ಪೆಸರಂ ಕೊಂಡಂತೆ ಮೂಱುಂಲೋಕದ ಪೆಸರ (ಕ, ಟ) ಕೊಂಡುಮತ್ತಂ ಪೆಸರ್ಗಳವೆನಿತೆನಿತುಮನೆಯ್ದೆಕೊಂಡು ಮುನ್ನಿನ ಕೊಂಡ ಕೆಲದ ಪೆಸರಂಕೊಂಡೊಡದೊಂದು (ಖ) (11) ಕಾಲಸಮಯದೊಳ್ (ಕ) (12) ಕೆಲದೊಳ್ ಪುಟ್ಟಿಯಂತಂತೆ ಕಾಲಮೆನಿತನಿತುಮಂ ಕೂಡೆಪುಟ್ಟಿ (ಕ) (13) ಮಾಗಿ ಪೋಗಿಯಂ ತಂತೆನಿತೆನಿತು ಪರಿಣಾಮಂಗಳನಿತುಮಂ ಕೊಡಿಕೊಂಡೊಡೊಂದು (ಕ, ಜ, ಟ)

[1]ಕಟ್ಟಿ ಬಿಸುಟ್ಟು ಮುನ್ನಿನಾಯುಷ್ಯದ ಕೆಲವಾಯುಷ್ಯಮಂ ಕೂಡಿ ಕಟ್ಟಿಕೊಂಡೊಡದೊಂದಾಯುಷ್ಯ ಪರಾವರ್ತನಂ-ಇಂತಿವು ಸಪ್ತಪರಾವರ್ತನಮೊಳೊಂಬತ್ತು ನಾಲ್ಕು ಲಕ್ಕೆ ಯೋನಿಮುಖದೊ[2]ಳ್ ಪುಟ್ಟಿ ಕುದಿವ ಕೂಟಂತೆಲ್ಲಿಯುಂ ನಿಲ್ಲದೆ ತೊಳಲ್ವ [3]ಸಂಸಾರಿಜೀವಂಗಳಂದಮಂ ಜೀವಾ ನೀಂ ಚಿಂತಿಸುವುದು—

ಕಂ|| ಮನದೊ[4]ಳೊಗೆದ ಶುಭಮತಿಯೆಂ |
ಬನಲನ ಘನಮೆಂಬ ವಹ್ನಿ ಕೊಳೆ ಸಂಸೃತಿಯೆಂ ||
ಬನವರತಮುರಿವ [5]ಕಾಟ್ಕಿ |
ಚ್ಚಿನ ಕೋಳ್ಗೊಳಗಾಯ್ತು ಭುವನ ಜೀವಮೃಗೌಘಂ || ೩ ||

ವ|| ಕಾಟ್ಕಿ[6]ಚ್ಚಿನ ನಡುವಾದ ಮೃಗಕ್ಕಂ ಸಂಸಾರದೊಳಗಾದ ಜೀವಕ್ಕಂ ಮಱುಕಂ ಸಾಮಾನ್ಯ[7]ಮಕ್ಕುಂ—

ಮ|| ಪಲವುಂ ಜನ್ಮಮೆ ವೃಕ್ಷಜಾತಿ [8]ವಿಷಯವ್ಯಾಬಾಧೆಗಳ್ ವ್ಯಾಧ ಸಂ |
ಕುಲಮೃತ್ಯುಗ್ರಕಷಾಯ ಸಂತತಿ ಮೃಗವ್ರಾತಂ [9]ಮಳಂಗಳ್ ಮಹಾ ||
[10]ಚಲಮಾಗುತ್ತಿರೆ ರೌದ್ರಮಾಗೆ ನೆಗಟ್ದೀ ಸಂಸಾರಕಾಂತಾರದೊಳ್ |
[11]ಪೊಲಗೆಟ್ಟಕ್ಕಟ ! ಸೇದೆವ[12]ಟ್ಟು ತಿರಿಗುಂ ಮಿಥ್ಯಾತ್ವಜೀವೋತ್ಕರಂ || ೪ ||

ವ|| ಸಂಸಾರದೊಳ್ ಮಿಥ್ಯಾದೃಷ್ಟಿಯ[13]ಪ್ಪಜೀವಂ ಸುೞಿವ ಬೇವಸಕ್ಕಂ ಕಾಂತಾರದೊಳ್ ಪೊ[14]ಲಂಬುಗೆಟ್ಟು ಸೇದೆವಟ್ಟು ತಿರುಗುವ ಕುರುಡನಾಪತ್ತಿಂಗಮುಳವಿಯುಂಟೇ ? —

ಕಂ|| ನೆರಪುವ[15]ಳಿಪುವ ವಿಕಾರಂ |
[16]ತಿರಿವೆ ಭವಾಂಬುಧಿಯ ನಡುವೆ[17]ಸೂೞ್ಸೂೞ್ ಕಡೆನೇ ||
[18]ಣ್ಬರವೆಡಬಲದೊಳ್ ತಿರಿಪು |
ತ್ತಿರೆ [19]ಕಡೆಗೋಲೆಂತು ತಿರಿಗು ಮಂತಿರೆ ತಿರಿಗುಂ || ೫ ||

ವ|| [20]ಕಡೆವ ಕಡೆಗೋಲ ನೇಣೆರಡುಂಕಡೆಯುಮೊಂದು ಸುತ್ತುವಾಗಳೊಂದೞಿವಂತೆ ಶುಭಾಶುಭಕ[21]ರ್ಮಮೆರಡುಮೊಂದು ತಗುಳ್ವಾಗಳೊಂದೞಿಗುಮಂತೆ ಸಂಸಾರದೊಳ್ ತಿರಿ[22]ವರ್ಮತ್ತಂ ನಿಮ್ಮಿ[23]ರ್ದೀ ಸಂಸಾರಸಮುದ್ರ[24]ಮೆಂತಿರ್ದುದೆಂಬಿರೆ—

---

(1) ಕಟ್ಟಿ ಬಿಸುಟಂತೆ ಸಂಸಾರದೊಳುಳ್ಳಾಯುಷ್ಯಮೆಲ್ಲಮಂ ಕೂಡೆಕಟ್ಟಿದೊಡೊಂದು (ಕ,ಜ) (2) ದೊಳೆಲ್ಲಿಯುಂ ಕುದಿವ (ಚ) (3) ಸಂಸಾರಿಗಳಂದ (ಖ) (4) ಳಗಮುಶುಭ (ಚ,ಛ) (5) ಕಾಟ್ಕಿಚ್ಚಿನೊಳೊಳಗಾಯ್ತಂತೆ ಜೀವನೆಂಬ ಮೃಗೌಘಂ (ಕ, ಜ, ಟ) ಚ್ಚಿನ ನಡುವಣ್ಗೊಯ್ತು ವಣದಾಯ್ತು (ಚ) (6) ಚ್ಚಿನನಡುವಣ್ಗೋದ (ಛ) (7) ಮಕ್ಕುಮೆ ? (ಕ,ಜ,ಟ) (8) ವಿಷಯಾತಂಕಾದಿಗಳ್ (ಛ) (9) ಮದಂಗಳ್ (ಕ,ಜ,ಛ,ಟ) (10) ಬಲ (ಟ,ಚ) (11) ಪೊಲೆ (ಖ,ಚ,ಛ) (12) ಗೆಟ್ಟು (ಟ,ಚ,ಛ) (13) ಯ ಸುೞಿಯಜೀವ (ಕ) ದೃಷ್ಟಿಜೀವ (ಛ,ಟ) (14) ಪೊಲಗೆಟ್ಟು ಸುೞಿವ ಕುರುಡ (ಕ,ಜ,ಟ) ಪೊಲೆಗೆಟ್ಟು ಸೇದೆ (ಖ) (15) ೞಿವಘು (ಕ,ಜ) ನಡಪುವೞಿಪಘು (ಟ) (16) ಕಿಡಿಪಿ (ಟ) (17) ಸುೞಿಯದೆ ಕಡೆನೇಣ್ (ಖ) ಸೊಟಿಸೊಳ್ಭರದಿಂ||ದೆಡಬಲ (ಟ,ಛ) (18) ಣ್ಬರದೆಡಬಲ (ಕ,ಜ) ಬಳದೆಡಬಲ (ಟ) (19) ಕಯಗೋಲಂತೆ (ಚ) ಕಡೆಗೋಲೆಂಬಂತೆ ತಿರುಗುವಂತಿರೆ ತಿರಿವರ್ (ಛ) ತ್ತಿರೆಕಡೆಗೋಲೆಂತು ತಿರಿಗುವಂತಿರೆತಿರಿವರ್ (ಕ,ಜ) (20) ಕಡೆದನೇಣೆರಡುಂಕಡೆ (ಚ) ಕಡೆಗೋಲಣೆಣೆರಡುಂ (ಕ,ಚ) (21) ಕರ್ಮಂಗಳೊಂದು ತಗುಳ್ವಾಗಳೊಂದೞಿವುತ್ತಿರೆ (ಕ,ಜ) (22) ವಿರ್ (ಕ,ಜ,ಛ) (23) ನಿಮಿರ್ದೀ (ಕ) ನಿಮಿರ್ದ (ಜ,ಚ) ನಿಮಿರ್ದೀಸಂಸಾರಮಂ (ಟ) (24) ದಂದಮಿಂತುಟಲ್ತೆ (ಛ) ದ್ರಮಿಂತಾಗಿರ್ದುದೆಂಬಿರೆ (ಖ)

ಮ|| ದುರಿತಂ [1]ನೀರ್ ಬಹುದುಃಖಮುಗ್ರಮಕರಗ್ರಾಹಾದಿಗಳ್ ಚಿಂತೆಗಳ್ |
ತೆರೆಗಳ್ ಹಿ[2]ಂಸೆ ಮಹೋಗ್ರಬಾಡಬಮುಖಂ ಮಿಥ್ಯಾತ್ವಸಂಯೋಗದು ||
ಷ್ಪರಿಣಾಮಂಗಳಗಾಧಮಪ್ಪ ಸುೞಿಗಳ್ ತಾಮಾಗೆ ಘೂರ್ಣಿಪ್ಪ ದು |
ಸ್ತರ ಸಂಸಾರಸಮುದ್ರದಲ್ಲಿ ಸು[3]ೞಿಗುಂ ಜೀವಂಗಳಜ್ಞಾನದಿಂ || ೬ ||

ವ|| [4]ಸಂಸಾರದೊಳಗಿರ್ದನ ಕೇಡಿಂಗಂ ಸಮುದ್ರದೊಳೞ್ದನ [5]ಸಾವಿಂಗಮೇಂ ಸಂದೆಯಮೆ? ಅದಱಿನಿಲ್ಲಿ ಸುಖಮಿಲ್ಲ—

ಕಂ|| ಒಂದಿಂದ್ರಿಯದೊಳಗೆಳ್ಳನಿ |
ತೊಂದೆಡೆಯದೆ ಸುಖಮದೆ[6]ನಿಸುಬೇಗಮದ[7]ರ್ಕಂ ||
ತೊಂದಿಪ ಮೆ[8]ಯ್ಯೆಲ್ಲಮನೊ |
ಕ್ಕೆಂದುಂ ನಮೆಯುತ್ತುಮಿರ್ಪುದು[9]ಱುಗುಮೆ ಜೀವಾ || ೭ ||

ವ|| ಅಂತೆ ಸಂಸಾರ[10]ಸುಖಮೆಲ್ಲಮಿಂದ್ರಿಯಂಗಳ ದೆಸೆಯಿಂದಿಂದ್ರಿಯಂಗಳೊ[11]ಳಮೆಳ್ಳನಿತುಪ್ರದೇಶದಲ್ಲಿಂದತ್ತದುವುಂ ಕ್ಷಣಮಾತ್ರದನಿತರ್ಕೆ ಮೆಯ್ಯೆಲ್ಲಮಂ ನೋವಿಂಗೊಡ್ಡಿನ[12]ಮೆವುದಾವುದುಱುಗುಮೆಲೆ ಜೀವಾ, ನಿನ್ನಿರ್ದಿರವಂ ನೋಡಾ—

ಉ|| ತೀವಿದ ಮೋಹಮೆಂಬ ತೊಱೆ ಕೊಂಡೆಱೆದರ್ಪುದು ನಿನ್ನನೀಗ[13]ಳಿಂ |
ಜೀವ ನಿವೃತ್ತಿಯೆಂಬ [14]ಭುಜಗರ್ವದಿನೀಸಿ ಬರ್ದುಂಕಿ [15]ಪೋಗು ಮ ||
ತ್ತಾವುದುಮಾಸೆಯಿಲ್ಲ [16]ಸುೞಿಯಲ್ ಕಡುವೇಗದೆ [17]ಪೋಗಿ ಮೃತ್ಯುವೆಂ |
ಬೋವದೆ ನುಂಗುವೊಂದು ನೆಗೞ್ಳ [18]ಭವಾಬ್ಧಿಯನೆಯ್ದದನ್ನೆಗಂ || ೮ ||

ವ|| ತೊಱೆಯೊಳ್ ಪೋಪಾತಂ ಸಮುದ್ರಮನೆಯ್ದದನ್ನೆಗಂ [19]ಪೊಡಪುರ್ಗೆಯ್ದಾಸುವುದು. ಸಂಸಾರದೊಳಗಾದಾತಂ ಸಾವೆಯ್ದದನ್ನೆಗಂ ಬೇಗಮ[20]ಱಿದು ನೆಗೞ್ವುದು—

---

(1) ನೀರ್ವಹು (ಕ,ಜ,ಛ) (2) ಮಾಳ್ಪತಿ ತೃಷ್ಣೆ ಮತ್ಸ್ಯನಿಕರಂ (ಕ,ಜ) ತೆರೆಗಳೆ ಮಾಳ್ಪತಿತೃಷ್ಣೆ ಬಾಡಬಮುಖಂ (ಛ) ಒಂಸೆಸರೌದ್ರಬಾಡಬ (ಚ) (3) ಸುಳಿಗಂ (ಕ) (4) ಸಮುದ್ರದೊಳಗರ್ದನ (ಕ) ಸಂಸಾರದೊಳರ್ದ (ಟ) (5) ನೋವಿಂಗಮೇ (ಛ) (6) ದಿನಿಸು (ಛ,ಖ) (7) ರ್ಕಂ (ಛ, ಜ) (8) ಯ್ಯೆಲ್ಲಂನೊಂದೆಂದುಂ (ಛ) ಯ್ಯೆಲ್ಲಂನೊಂದುಂನಮೆ (ಜ) ಯ್ಯೆಲ್ಲಮನೊರ್ಕೆಂದುಂ (ಛ) (9) ದುರಿಗುಮೆ (ಜ) (10) ದುಃಖಮೆಲ್ಲ (ಚ) ದೊಳಗೆಲ್ಲಮಿಂ (ಛ) ಸಂಸಾರಮೆಲ್ಲಂ (ಜ) (11) ಗಳೊಳೆಳ್ಳನಿತು ಪ್ರದೇಶದ ನಿತುಮಂತಸುವುಂ ಕ್ಷಣಮಾತ್ರಸುಖದ ನಿತೆಯಪರ್ಕೆ (ಕ,ಜ) ಗಳೊಂದೆಳ್ಳನಿತುಪ್ರದೇಶದನಿತಲ್ಲದಿಲ್ಲದುಮಂ (ಛ, ಚ) (12) ನಮೆವುತ್ತಿರ್ಪುದು ಬುದ್ಧಿಯಲ್ತು (ಕ) ತ್ತುಮಿರ್ಪು ದುರಗುಮೆ ಜೀವಾನೀನಿರ್ದ (ಜ) (13) ಳೀ (ಕ, ಜ, ಛ) (14) ಬಲಗರ್ವ (ಕ,ಜ,ಛ) (15) ಪೋಗಿ (ಚ) (16) ಕಡಲೊಳ್ (ಚ, ಕ, ಛ, ಜ) (17) ನೀನೆ (ಚ) (18) ಭವಾಂಬುಧಿಯೆಯ್ದದ (ಕ) (19) ಪೊದಲ್ದೀಸುವುದು (ಕ) (20) ದಾತುರ್ನೆಗ (ಕ,ಜ,ಛ)

ಕಂ|| ಪತ್ತಿರ್ದನಂತಭವಮುಮ |
ನಿತ್ತೆಯ್ದುಂವಿಷಯವೈರಿಗ[1]ಳ್ಗಱದೈ ನೀಂ |
[2]ಮತ್ತಿನ್ನು ಕೇಳ್ ಪರತ್ರೆನಿ |
ಮಿತ್ತಂ ನಿನಗೊಂದುಭವಮನೀ[3]ಯಲ್ಕಾಗಾ || ೯ ||

ವ|| ಮುಂ ಪೋದನಂತಭ[4]ವಮೆಲ್ಲಮಮಂ ಬಸನಕ್ಕೆ ಕೊಟ್ಟು ಕೆಟ್ಟೆಯಿನ್ನಪ್ಪೊಡಂ ನಿನಗೊಂದು ಭವಮಂ [5]ಕುಡೆ ಕೊಂಡು ಬಱಯಂ ಸುಖಮಿರ[6]ಲಾಗಾ !—

ಚಂ|| ಕುದಿಯಿಸು ವಿಂದ್ರಿಯಂಗಳ[7]ನಟಲ್ದು ಬಟಲ್ದು ಮನಕ್ಕೆ ವಂದುದೆ |
ಯ್ದುದೆ ಕಡುನೊಂದು ಬೆಂದು ಮಱುಗುತ್ತಱದಕ್ಕಟ ಸೇದೆ[8]ವಟ್ಟು ಬ ||
ರ್ದಿದೆ[9]ಯಱ ನೀರ್ಗೆ ನೀರಡಸಿ ಬೇಸಗೆಯೊಳ್ [10]ಬಡಗೊಂದೆ ಬಂದು ತಾಂ |
ಪದೆ[11]ದಱನೀರನೆಯ್ದದೆಯುಮಲ್ಲಿಯ ಕೊಟಕ್ಕೆಸಱಲ್ಲಿ ಬೀಳ್ವವೋಲ್ || ೧೦ ||

ವ|| ಕರ್ಮವಶದಿಂ ಸೇದೆಗೆಟ್ಟ ಜೀವನಿಂದ್ರಿಯಸುಖಕ್ಕಾಸೆವಟ್ಟು ನೆಗಲ್ತೊಡಂ ಬಡಗೊಂದೆ ಕೆಸರ ನಡುವಣ ನೀರ್ಗಾಸೆವಟ್ಟು ಪುಗುವೊಡಮಾತಂ ಸುಖಮನೆಯ್ದದೆ ದುಃಖದೊಳಾಟ್ಗು [12]ಮದು ನೀರನೆಯ್ದಲಾಱದೆ ಕೆಸಱೊ[13]ಳಾಟ್ಗುಮಪ್ಪುದಱಂ ಅಲ್ಪ ಸುಖಕ್ಕಾಸೆ[14]ವಟ್ಟೊಡೊಳ್ಳಿತಕ್ಕುಮೆ ?—

ಕಂ|| ಕಡುದುಃಖಮೆಂಬ ಕಿರ್ಚಿಂ |
ಕಡುಗಾಯ್ದಾ ಜೀವನೆಂಬ [15]ಲೋಹದ ಗುಂಡುಂ ||
ಕಿಡುಗುಮೆ ಸುಖ [16]ಶೀಕರದಿಂ |
ದಡಂಗುಗುಂ ನಿನ್ನ ಕಾಯ್ಪು ಮುಕ್ತ್ಯಂ[17]ಬುಧಿಯೊಳ್ || ೧೧ ||

ವ|| ಕರಂ ಕಾಯ್ದು [18]ಕಬ್ಬೊನ್ನ ಬಟ್ಟು ಸೀಪರದ ಪನಿಯೊಳಾಱುಗುಮೆ ? ಸಮುದ್ರ [19]ದೊಳಿಕ್ಕಿದೊಡಾಱುಗುಮಂತೆ ನಿನ್ನೊಳ[20]ನಾದಿಯಷ್ಟಷ್ಟವಿಧ ಕರ್ಮೋದಯದಿನಾದ ಮಹಾ ದುಃಖಮಲ್ಪಸುಖದೊಳಾಱುಗುಮೆ ? [21]ಮುಕ್ತ್ಯಂಬುಧಿಯೊಳಾಱುಗುಮೆಂಬುದಂ ಬಗೆವುದು ಜೀವಾ, ನಿನ್ನಿರ್ದಿರವಿಂತಲ್ತೆ ?

---

(1) ಳ್ಗಱವೈ (ಕ, ಚ, ಛ) ಳ್ಕದೆ (ಟ) (2) ಮತ್ತೆಲ್ಲಕೇಳ್ಪರತ್ರಕ್ಕೆನಿ (ಖ) ದೀಯಲುಮಾಗಾ (ಕ) ನೀಯಲ್ಕಾಱಾ (ರಾ) (ಜ,ಖ) (4) ಭವಂಗಳೆಲ್ಲಮಂ (ಕ) (5) ಕುಡು ಕೊಟ್ಟು ಬಱಕ್ಕೆ (ಕ,ಚ,ಛ) ಕೊಟ್ಟು ಬಱಯಂ (ಜ) (6) ಲಾಗದೇ (ಚ) (7) ನಗಲ್ದು (ಕ,ಜ,ಟ,ಛ) (8) ಗೆಟ್ಟು (ಖ) (9) ಮೆಳೆನೀರ್ಗೆ (ಘ) (10) ಬೆಡೆಗೊಂಡೆ (ಕ) ಬಡಗೊಂಡೆ (ಜ) (11) ದಮನೀರ (ಖ,ಚ) ನೀರನೆಯಿದಡೆಯುಮ (ಛ) (12) ಮಿದು ನೀರನೆಯ್ದೊದೆ-(ಕ) ಮಾತಂ ನೀರ (ಚ) (13) ಬೀಳ್ಗುಮ (ಕ,ಜ) (14) ವಟ್ಟು ನೆಗಳ್ದೊಡಂತದೊಳ್ಳಿತಕ್ಕುಮೆ (ಕ) (15) ಕಬ್ಬುನಗುಂಡೇಂ (ಕ,ಜ,ಛ) (16) ಸೀವರ (ಚ) (17) ಮುಕ್ತ್ಯಂಗನೆಯೊಳ್ (ಕ) (18) ಕಬ್ಬುನದ ಗುಂಡು (ಕ, ಛ) ಕಬ್ಬೊನ್ನಬಟ್ಟು (ಜ, ಖ, ಟ) (19) ದೊಳುಳಾರುಗುಮಂತೆ (ಕ) ದೊಳಿಕ್ಕಿದೊಡಾರುವಂತೆ (ಜ,ಘ) ದೊಳಾಂಕಿದೊಡಾರುವಂತೆ (ಟ) (20) ಳಾದಿಕರ್ಮೋದಯದಿ (ಕ,ಛ) ಳನಾದಿ ಸಂಬಂಧಿಯಷ್ಟಷ್ಟವಿಧ ಕರ್ಮ (ಜ, ಘ) (21) ಮೋಕ್ಷಸುಖದೊ (ಕ, ಚ, ಛ)

ಉ|| ನಿನ್ನೊಡವುಟ್ಟಿದೊಳ್ಪುಱುತಮಂ ಮಿಗಿಲಾಗುವನಂತಸೌಖ್ಯಮಂ |
ತನ್ನ [1]ಮಹತ್ವದಿಂ [2]ಕಿಡಿಸಿ ಪೊ[3]ಲ್ಲುಣಿಸಂ ಪೊ[4]ಱಗಿಕ್ಕಿ ಕಾವವೋಲ್ ||
[5]ನಿನ್ನಯಶೇಷದಿಂದ್ರಿಯಸುಖಂಗಳ[6]ನೂಡಿ ತೊ[7]ಡರ್ಚಲಂದು ನೀಂ |
ಬನ್ನಮನೇನುಮಂ ಬಗೆಯದಿರ್ಪುದೆ ನಾಣಿಲಿಯಾಗಿ ಜೀವನೇ || ೧೨ ||

ವ|| ಸೆಱೆಯೊಳಿರ್ದನಾಹಾರಂಗೊಳ್ವನಿತರ್ಕೆ [8]ಮೆಯ್ಮಱೆದೊಡಂ, ಸಂಸಾರದೊಳಗಿ[9]ರ್ದನಿಂದ್ರಿಯಸುಖಮನೋರೊರ್ಮೆ ದೊರೆಕೊಳ್ವನಿತರ್ಕೆ ಧರ್ಮಮಂ ಮಱೆದೊಡಮಾತನ ಸೆಱೆಯುಂ ಈತನ ಕರ್ಮಮುಮೆಂತುಂ ಪತ್ತುವಿಡವು. ಮತ್ತಂ [10]ನಿನ್ನೆ(ನ್ನಿ)ರವಿಂತು [11]ನೋಡಾ ! —

ಕಂ|| ಮನೆ ಸೆಱೆವನೆ ಧನಮಿಂಧನ |
ಮನುಕೂಲದ ತನಯವರ್ಗಮನಯಂ ಪೆಱ[12]ದೇಂ ||
ವನಿತೆ ಕರಂ [13]ಪಾಪಂ ನೆರೆ |
ವನಿತೆ ಮಹಾಮೋಹಬಂಧನಂ ಬಂಧುಜನಂ || ೧೩ ||

ವ|| ಎಂದು ಬಗೆದು ಭಯಸ್ಥ[14]ನಾಗಿ ನೆಗಲ್ವು[15]ದಲ್ಲದೊಡೆ ಮಱೆದಿರ್ಪುದೇಕೆ ?—

ಮ|| [16]ನೆಱನಂ ದುಷ್ಕೃತಮೆಂಬ ಜೇನನೊಟಮೇಂ ಪಾ[17]ಯ್ದೂಱವೇ ಬಂದು ಬೆ |
ಟ್ಟುಱೆ ದುಃಖಜ್ವಲನಾರ್ಚಿಗಳ್ ಬಳಸಿಯುಂ [18]ತಳ್ತಿಲ್ವವೇ ಪೊಯ್ಸು [19]ಸಾ ||
ವಱೆಗಳ್ [20]ಬೆಚ್ಚದೆ ತೀಡವೇ ಕಿ[21]ವಿಗಳೊಳ್ ದುರ್ಮೋಹನಿದ್ರಾಪ್ತಿಯಿಂ |
ದೊಱಗಿರ್ದುಂ ಮಗುಲ್ದಿನ್ನು[22]ಮೆಚ್ಚಱದುದೇನೊಳ್ಪಿತ್ತೆ ಪೇಱ್ ಜೀವನೇ || ೧೪ ||

ವ|| [23]ದುಃಖಾವಸ್ಥೆಗಳಂ ಬಗೆಯದೆ ದುರ್ಮೋಹದೊಳಿರ್ಪೊಡ[24]ಮೆಂತುಮೆಚ್ಚಱದ ನಿದ್ರೆಯೊಳಿರ್ಪೊ[25]ಡಮದಂ ಕೇಡುಂ ಸಾವುಮೆನ್ನದೆಯುಂ ಪೆಱತೇನೆಂ[26]ಬುದೋ !—

---

(1) ಮಹಾತ್ಮದಿಂ (ಕ,ಛ) ಮಹಾತ್ಮ್ಯದಿಂ (ಜ) (2) ಮರಸಿ (ಕ) ಮಱಿಸಿ (ಛ) (3) ಪುಲ್ಲಣಸಂ (ಕ,ಛ) ಪೊಲ್ಲುಣಸಂ (ಖ) (4) ಸೆರೆಗಿಕ್ಕಿ (ಕ,ಜ) ಸೆಱೆಯಿಕ್ಕಿ (ಚ) (5) ನಿನ್ನನಶೇಷಮಿಂ (ಖ) ನಿನ್ನಸು ಪೇಸದಿಂ (ಚ) (6) ನೋಡಿ (ಕ, ಛ) (7) ತೊಡರ್ಚ ಬಯ್ಸು (ಕ) ಬಯಿತ (ಛ) ಬಯ್ತೊ (ಜ, ಝ) ಬಯ್ತೆ ನೀಂ (ಟ) (8) ಮೆಯ್ಗರೆ (ಚ) (9) ಗಿರ್ದಿಂದ್ರಿಯ (ಟ) (10) ನಿಂದಿರ್ದಿರವು (ಚ,ಛ) (11) ಕಾಣಾ (ಕ, ಚ, ಛ, ಜ) (12) ಪೆಱತೇಂ (ಖ) (13) ಪೋಪಂ (ಚ) (14) ರಾಗಿ (ಚ) (15) ಬ್ಬುದುಮಱೆ (ಚ) (16) ನೆರನೆವ್ವ ವೃಕ್ಷಂ ಎಂದು ಚಿಕ್ಕಕ್ಷರದಲ್ಲಿ ಓಲೆಯಮೇಲ್ಗಡೆಬರೆದಿದೆ (ಜ) (17) ಪಾಯ್ದಾರವೇ (18) ತಳ್ತಳುರ್ವವೆ (ಕ,ಜ) ತಳ್ತಳ್ದಾರ್ವದೇವಾಯ್ದು (ಝ) ತಳಳ್ವಲೇವಾಯ್ದು (ಖ) (19) ಸಾಯ್ಪರೆಗಳ್ (20) ಪೆಚ್ಚ (21) ಕಲಿಗಳೊಳ್ (ಛ) (22) ಮೆಚ್ಚರ (ಕ,ಜ) ಟ್ದಿಂತು ಮೆಯಿಮಱೆದುದೇನೊ (ಛ, ಜ) (23) ಎಂದು ದುಃಖಾ (ಕ, ಟ) (24) ಮೆಂದುಮೆಚ್ಚರ (ಛ) (25) ರ್ಪೊಡಾಮುದಂ(ಟ) ಮದಂಕೇಡೆನ್ನದೆಯುಮಿದಂಸಾವೆನ್ನದೆಯುಂ ಮತ್ತೇನೆಂ ಬುದೊ (ಕ,ಜ,ಛ) (26) ಬುದು (ಖ)

ಕಂ|| [1]ಎನಿತಂ ವಸ್ತುಗಳಂ ನೀ |
ನನುಭವಿಸಿದೆಯಕ್ಕುಮಪ್ಪೊಡಂ ತಣಿವುಂಟೇ ? ||
ಘನಮೋಹರಿಪುವನೋಡಿಸಿ |
ವಿನುತಜಯಧ್ವಜಮನೆಱ[3]ದುಕೊಳ್ಳದೊ[2]ಡಿಲ್ಲಂ || ೧೫ ||

ವ|| ಎನಿತು ಪ[3]ರಬಲಮನಿಱಿದೊಡಂ ನಾಯಕನನಿಕ್ಕಿದೊಡಲ್ಲದೆ ಗೆಲ್ಲಮಿಲ್ಲದಂತೆ ಎನಿತು ವಸ್ತುಗ[4]ಳೊಳನುಭವಿಸಿದೊಡಂ ಮೋಹಮಂ [5]ಬಿಸುಟಲ್ಲದ ತಣಿವಿಲ್ಲ. ಏಕೆನೆ ?—

ಚಂ|| ಬಡತನಮುಳ್ಳವರ್ ಮಱುಗುವರ್ ಧನಮಂ ಪಡೆಯಲ್ಕೆ [6]ಸೇದೆಯಿಂ |
ಪಡೆದ[7]ವರುಂ ಕರಂ ಮಱುಗುವರ್ ತಣಿವಿಲ್ಲದೆ ನೆಟ್ಟನುಳ್ಳ[8]ನುಂ ||
ಬಡವನು ಮಲ್ಲದಿಲ್ಲ ಮನುಜರ್ ಸುಖ[9]ಮಾರೊಳಮೆಂತುಮಿಲ್ಲ ಮೆ |
ಲ್ಪಡದಿರಿಮೊಳ್ಳಿಕೆಯ್ದು ಪಡೆಯಿಂ ಸುಖಮಂ [ಪೆಱತೇಂ] ಪರತ್ರೆಯೊಳ್ || ೧೬ ||

ವ|| ಬಡವ[10]ನೊಡೆಯನೆಂಬಿರ್ವರೊಳಂ ಸುಖಮಿಲ್ಲದೊಡಂ ಆಸಡಿ ಸುಗ್ಗಿಯೆಂಬೆರಡುಂ ಕಾಲದೊಳಮೊಕ್ಕಲ್ಗುಣಲಿಲ್ಲದೊಡಮೇ[11]ಕಲ್ಲಿ ಸುಖಮನಾಸೆವಡುವು[12]ದೇಕಾರಣಮಾರಂಬಂಗೆಯ್ವುದು ? ಮತ್ತಮಿಂತು—

ಕಂ|| ಒಡೆಯಂ ತಣಿಯದೆ ಮಱುಗುವ |
ನೊಡೆಯನನಳಿಪೊದವೆ [13]ಬೇಡುವಂ ಪಡೆಯದೆ ತಾಂ ||
ಕಡುನೋವನಿರ್ವರಲ್ಲಿಯು |
ಮೊಡರಿಸಿತಱಲರ್ಥ ಮೇವು[14]ದೆಂಬರ್ ಸುಖಿಗಳ್ || ೧೭ ||

ವ|| ಪುಟ್ಟಿದೆಡೆಯುಮಂ ಪೊರ್ದಿದೆಡೆಯುಮಂ ಸುಡುವ [15]ಕಿರ್ಚುಮನರ್ಥಮುಮಂ ಗೆಂಟು ಮಾಡುವನೆ ಸುಖಿ, ನೀಮೆಂತು[16]ಮಿಲ್ಲಿ ಮೆಲ್ಪಡದಿರಿಂ—

---

(1) ಎನಿತೆನಿತು ವಸ್ತುಗಳ ನೀ (ಕ,ಟ) ಎನಿತುಂ ವಸ್ತುಗಳೊಳ್ (ಭ) (2) ಡೆಲ್ಲಂ (ಟ) (3) ಪಲರನಿಱಿದೊಡಂ (ಕ,ಜ) (4) ಗಳನನು (ಕ,ಟ) ಗಳೊಳ್ನೀ (ಭ) (5) ಕಿಡಿಸಿದೊಡಲ್ಲದೆ ಸುಖಮಾಗದೆಂತೆನೆ (ಕ,ಟ,ಜ) ಬಿಟ್ಟದಲ್ಲದೆ ತಣಿ (ಚ) (6) ಸೇದೆಯಂ (ಕ,ಟ,ಜ) (7) ವವರುಂ (ಟ) (8) ರುಂ (ಭ) (9) ಮುಳ್ರ್ವಱುಗೊಂಡು ದಿಲ್ಲಿ (ಖ) ಮೊಬ್ಬುಳಿಯಂದದಿಲ್ಲವೆ(ಟ) (10) ದೊಡೆಯರೆಂ (ಕ,ಟ) ಮೇಕೆ ಸುಖಮನರಸು (ಕ,ಟ,ಜ) (12) ದೇಕಾರಂಬಂಗೆಯ್ವು (ಕ,ಟ,ಭ) (13) ಬೇಡಿದಂ (ಚ) (14) ದೆಂದರ್ (ಕ, ಟ, ಜ) (15) ಕಿಚ್ಚಂ ಗೆಂಟುಮಾಡುವಂತರ್ಥಮಂ (ಕ,ಜ,ಭ) (16) ಮೆಲ್ಲ (ಖ)

ಚಂ|| ಮನಸಿಜನೆಂಬ ಬೇಡರಸನೀ ಖಳಸಂಸೃತಿಯೆಂಬುದೊಂದು ಕಾ |
ಪಿನೊಳಬಳಾಂಗಮೆಂಬುಱೆಯೊಳಿರ್ದಖಿಳೇಂದ್ರಿಯಮೆಂಬ ಬೇಡರಿಂ ||
ಮನದೞಲೆಂಬ [1]ಕಿರ್ಚನಿಡಿಸುತ್ತುಮೆ ಪಾರ್ದಿಸುವಾಗಳೀ ಜಗ |
ಜ್ಜನತತಿಯೆಂಬ ಬೆಳ್ಮಿಗ[2]ಮುವೇಂ ಗೞಿ ಸಾಯದೆ ಪೋಗಲಾರ್ಕುಮೇ || ೧೮ ||

ವ|| ಕಿರಾತರಾಜನ [3]ಬೇಂಟೆಯ ಕೆಯ್ಯೊಳಗಾದ [4]ಬೆಳ್ಮಿಗಮುಂ, ಕಾಮ[5]ದೇವನ ಬಸಮಾದ ಮಾನಸ[6]ರು ಮಾತನ ಮೊನೆಯಂ[7]ಬು ತಾಂಗೆಯುಮಿಾತನ ನನೆಯಂಬು ತಾಂಗೆಯುಂ ಸತ್ತುವು ಕೆಟ್ಟರೆಂಬುದೇವಿರಿದು ? — ಅದೇಕೆ ಮೋಹಿಸುತಿರ್ಪೆ ? ಮೋಹಾಗ್ನಿಯಳವಮಿನ್ನು ಮಱೆಯಾ !

ಕಂ|| ಪೆರ್ಚು[8]ವುದು ಪುಳ್ಳಿಯಿಂದಂ |
ಬರ್ಚುವುದದು ಕುಂದೆ ಕಿರ್ಚು ಮೋಹಾಗ್ನಿ ಕರಂ ||
ಪೆರ್ಚ್ಚುವುದರ್ಥಂ ಬರೆಯುಂ |
ಪೆರ್ಚ್ಚುವುದದು ಬಾರದಿರೆಯುಮೇಂ ವಿಸ್ಮಯಮೋ || ೧೯ ||

ವ|| ಕಿರ್ಚಿಂಗಂ ಮೋಹಾಗ್ನಿಗಮಾವು[9]ದಂತರಮೆಂಬೆಯಾ ! ಕಿರ್ಚು ಪುಳ್ಳಿಯುಳ್ಳಾಗಳ್ [10]ಪೆರ್ಚುವುದು, ಅದು ಇಲ್ಲದೊಡೆ [11]ಕುಂದುವುದು. ಮೋಹಾಗ್ನಿ [12]ಧನಮುಳ್ಳೊಡಂ ಪೆರ್ಚುವುದದಿಲ್ಲದೊಡಂ ಪೆರ್ಚುವುದೆಂದತಿಮೋಹಮಂ ಬಿಸುಟ್ಟುದಾರಶಕ್ತಿಯೊಳ್ ನೆಗೞ್ವ ವಸ್ತುಪುರುಷರಿಂ ವಸ್ತುಗ[13]ಳೇ ನಗ್ಗಳಮೆ ?—

ಮ|| ಪ್ರಿಯದೊಳ್ ಕೂಡಿದ ದಾಸಿಯಿಂ ಮಿಗಿಲೆ ಪೇೞ್ ಕಲ್ಪಾಂಘ್ರಿಪಂ ಚಂದನಂ |
ದಯೆಯಿಂ ತಣ್ಣಿತೆ ತಕ್ಕನಿಂದಮೃತಮೇಂ ಲೇಸೇ ವಿಷಂ ದುಷ್ಟನಾ ||
ಶಯದಿಂ [14]ದುಗ್ರಮೆ ಬೇಡಿ ಬಾೞ್ವ ನರನಿಂ ಪುಲ್ ನೊಚ್ಚಿತೇ ಮಾನುಷ |
ಕ್ರಿಯೆಯಿಂದಪ್ಪ ಮಹೇಂದ್ರ ಜಾಲ[15]ಮದುವೀ ಸಂಸಾರದಿಂ ಚೋದ್ಯಮೋ ? || ೨೦ ||

ವ|| ಈವಸ್ತು ವಿಂದಂ ಮಾಡುಗು ಮಿಾವಸ್ತುವಿಂದಂ ಕಿಡಿಸುಗು[16]ಮೆಂದೆರಡರಂತರಮನಱಿದು ನೆಗೞ್ವುದು[17]ಕೆಮ್ಮನಿರವೇಡಾ !

---

(1) ಕಿಚ್ಚನಿಡಿಸುತ್ತಿರೆಪೊರ್ದಿದಾಗಳೀ (ಕ) ಕಿಚ್ಚನದಿಪುತ್ತಿರದಾರ್ದಿಸುವಾತನಿಂ (ಚ) ರ್ದಿಸುವಾರನೀಂ(ಟ) ನಿಡಿಸುತ್ತಿರದಾರ್ದಿಸುವಾತನಿಂ (ಖ) ಪೋರ್ದಿಸುವಾಗ (ಗ) (2) ಮದಿಂಗಳ (ಕ,ಜ) (3) ಬೇಂಟೆಯೊಳ(ಕ,ಜ) ಬೇಂಟೆಗೊಳ (ಛ) (4) ಬೆಳುಮೃಗಕ್ಕಂ.(ಕ, ಜ) ಬೆಳ್ಮಿಗಕ್ಕ (ಟ) (5) ರಾಜನ (ಚ,ಛ) (6) ಸರ್ಗಮಾ (7) ಯಂಬು ಮಿಾತನ ನನೆಯಂಬುಕೊಳ್ಳದೇಕಿರ್ಪುವಾಸರತ್ಕೊಳೆ ಸತ್ತರೀಸರಲ್ ಕೊಳೆ ಕೆಟ್ಟರೆಂಬುದೇಂಚೋದ್ಯಮೇಕೆಮೋಹಿಸುತಿರ್ಪ ಮೋಹಾಗ್ನಿಯನರಿಯಿರಾ (ಕ) ಯಂಬುಕೊಳೆಸತ್ತುವಾಮೃಗಂಗಳೀತನನನೆಯಂಬು ಕೊಳೆ ಕೆಟ್ಟರಿಂತೀ ಜನಂಗಳೆಂಬುದೇವಿರಿದೇಕೆ ಮೋಹಿಸುತಿರ್ಪ ಮೋಹಾಗ್ನಿಯಳವನಱಿಯದೆ (ಛ,ಚ) ಮೋಹಾಗ್ನಿಯಳವನರಿಯಿರೇ (ಚ) (8) ಪೆರ್ಚೂದು (ಚ, ಛ) ಬೆಚ್ಚೂದಮು (ಛ) (9) ದಂತರಂ (ಚ, ಛ) (10) ಪೊರ್ಚುದು (11) ಕುಂಮೂದು (ಚ) (12) ಕಸವರಮುಳ್ಳೊ (ಚ) ಧನಮುಳ್ಳೊಡಮಿಲ್ಲದೊಡಂ (ಕ,ಜ) (13) ಗಳಗ್ಗಮೇ? (ಕ,ಛ,ಜ) ಗಳಿನಗ್ಗಳಮೇ (ಖ) (14) ದುರ್ಗಮೆ (ಟ) (15) ಮಿದುವೀ (ಚ) (16) ಮೆಂದವರಂತರಮ (ಕ) ಮೆಂವೆರಡಂತರವ (ಛ) ಮೊದಱಿದವಱತರವರೆಂನೆಗ (ಖ) (17) ನೀನಿಂತಿರ ವೇಡಾ (ಛ) ಮ್ಮನೆನೀನಿಂತು (ಖ)

ಕಂ|| ಏಕಱನನುಱದೆ ನೆಗೞ್ಪಪೆ |
ಯೇಕೆಱಗುವೆಯಱಸುಖಕ್ಕೆ ಶಾಶ್ವತಮಿರ್ಪ್ಪಂ ||
ತೇಕೆ ಬೆಸೆದಿರ್ಪಯಾರುಮ |
ನೇಕಲಲಿಪೆ ಯೇಕೆ [1]ನಂಬುವಯ್ ಸಂಸೃತಿಯಂ || ೨೧ ||

ವ|| [2]ಠಕ್ಕನಂ ನಂಬಿ ಒಟ್ಟೆವೋಪೊಡಂ ಸಂಸಾರಮಂ ನಂಬಿ ಮುಟ್ಟಿ[3]ದಂತೆ ಪಾಪದೊಳ್ ನೆಗೞ್ದೊಡಮಾತಂಗಮಿಾತಂಗಮೊಳ್ಪಿತ್ತಾಗದೆಂದೆ [4]ಬಗೆದೊಳ್ಗುಣಂಗಳನೆ [5]ಕೆಯ್ಕೊಂಡು ನೆಗೞ್ವುದಿಂ [6]ಭ್ರಾಂತಿಸಲ್ವೇಡಾ !—

ಚಂ|| ಅಱಯಮೆಯಾಯ್ತು ಕೂಸುತನದೊಳ್ ಪೊಸಜವ್ವನದಲ್ಲಿ ಪೆಂಡಿರ |
ತ್ತೆಱಗುವುದಾಯ್ತು ಮಧ್ಯಮದೊಳರ್ಥಮನಾರ್ಜಿಪುದಾಯ್ತು ಮುಪ್ಪಿನೊಳ್ ||
ನೆಱೆಯದ ಶಕ್ತಿಯಾಯ್ತು ಮನುಜತ್ವದೊಳೆಲ್ಲಿಯು[7]ಮೊಳ್ಪಿತಪ್ಪುದೊಂ |
ದಱಕೆಯನಪ್ಪುಕೆಯ್ಯಲೆಡೆಯಿ[8]ಲ್ಲೆಮಗೆಂದೊಡೆ ಕೆಟ್ಟು ಪೋಗರೇ ? || ೨೨ ||

ವ|| ಸಮುದ್ರದೊಳ್ [9]ಮಿಾಯಲೆಂದು ಪೋಪಾತಂ ತೆರೆಯಡಂಗಿದಾಗಳ್ [10]ಮಿಾವೆನೆಂದಿರ್ದೊಡಂ, ಸಂಸಾರ[11]ದೊಳಗಿರ್ದಾತ ನಾಪತ್ತಿಲ್ಲದೆ [12]ಪದುಳಮಾಗಿರ್ದಾಗಳ್ ಧರ್ಮಂಗೆಯ್ವೆನೆಂದಿರ್ದೊಡಂ, ಆತಂಗೆ [13]ಮಿಾವುದಿಲ್ಲಮಿಾತಂಗೆ ಧರ್ಮಂ[14]ಗೆಯ್ವುದಿಲ್ಲಂ. ತಡೆದಿರ್ಪಂತು [15]ಸಂಸಾರಮೇಕಸ್ಥಿತಿಯೇ ?

ಕಂ|| ಕಡು[16]ಗೆಳೆಯನೊಂದು ಭವದೊಳ್ |
ಕಡುವಗೆ[17]ವಂ ತಾನೆಯಾಗಿ ಕೊಲಲೆಂದಿರ್ಕುಂ ||
ಕಡು ಚೆಲ್ವನುಮೊಂದೆಡೆಯೊಳ್ |
ಕಡುಕಿಸುಗುಳನಾಗಿ ಪುಟ್ಟುಗುಂ ಸಂಸೃತಿಯೊಳ್ || ೨೩ ||

ವ|| [18]ಅಂತುಮಲ್ಲದೆಯುಂ—

---

(1) ನಂಬುವೈ (ಜ) ನಂಬಿದೊ (ಕ, ಛ, ಜ, ಟ) (2) ರಕ್ಕಸನ ನಂಬಿದೊಡವಟ್ಟೆವೋಪೊಡಂ (ಚ, ಛ) (3) ದಂತೆನೆಗ (ಕ, ಚ, ಟ) (4) ಬಗೆದಱದೊಳ್ಗುಣಂ (ಚ, ಛ) (5) ಕೊಂಡು (ಟ) ಕೆಯ್ಕೊಳ್ವುದು (ಚ, ಛ) (6) ಭ್ರಾಂತುವೇಡಾ (ಕ, ಜ) (7) ಮೊಳ್ಪಿತ ಕೆಯ್ಯದೊಂದರಿತಮ (ಚ) ಳ್ಪಿತಮುಪ್ಪುದೊಂದಱತಮ (ಛ) (8) ಯಿಲ್ಲೆನಗೆ (ಛ, ಟ) ಯಿಲ್ಲೆನಲೆಂದೊ (ಕ, ಜ) (9) ಮಿಾಯಲುಪೋ (ಕ) ಪೋಪಾತಂ (ಛ) (10) ಮಿಾಯಲೆಂ (ಕ, ಜ) (11) ದೊಳಗಾತನಾಪತ್ತಿನೊಳಲ್ಲದೆ (ಚ) (12) ಸುಖಮಿರ್ದಂದು (ಕ, ಜ, ಟ) (13) ಮಿಾರುವುದು (ಕ) ಮಿಾಉದುಮಿಾ (ಜ) (14) ಗೆಯ್ವುದುಮಿಲ್ಲದೆ ಪೋಕುತಡೆದಿರ್ಪುದೆಂತು (ಕ, ಜ) (15) ಸಂಸಾರದಂದಮೇ (ಕ, ಚ) (16) ಕೆಳೆಯ (ಕ, ಜ) (17) ವಗೆಯಂ (ಛ) (18) ಮಗನಕ್ಕು—ಎಂಬ ೨೫ ನೆಯ ಕಂದ ಇಲ್ಲಿದೆ (ಖ, ಛ)

ಉ|| ನಾರಕನಪ್ಪುದೊಂದೆಡೆಯೊಳೊಂದೆಡೆಯೊಳ್ ಕೃತಪುಣ್ಯಬಂಧದಿಂ |
ಚಾರುಗುಣಾಮರಾಧಿಪತಿಯಪ್ಪುದು ದೇಸಿಗನಪ್ಪುದೊಂದು ಸೂೞ್ ||
ಧಾರಿಣಿಗೀಶ[1]ನಪ್ಪುದಿರದೊಂದೆಡೆಯೊಳ್ ಮಗುೞ್ದೊರ್ಮೆ ಕರ್ಮದಿಂ |
ಕಾರುಕನಪ್ಪುದೊಂದೆಡೆಯೊಳುತ್ತಮ[2]ಜಾತಿಯುಮಾಗಿ ಪುಟ್ಟುಗುಂ || ೨೪ ||

[3]ವ|| ಅಂತಾಗಿಯುಂ—

ಕಂ|| ಮಗನಕ್ಕುವೊಂದು ಭವದೊಳ್ |
ಮಗ[4]ನುಂ ಬೞಿಕೊರ್ಮೆ ತಂದೆಯಕ್ಕುಂ ಮತ್ತಂ ||
ಮಗನಕ್ಕುಮೊರ್ಮೆ ಮಗಳುಂ |
ಮಗುೞ್ದು ಭವಾಂತರದೊಳೊರ್ಮೆ ಪೆಂಡಿತಿಯಕ್ಕುಂ || ೨೫ ||

ವ|| ಇಂತಪ್ಪವಸ್ಥಾಂತರದೊಳ್ ನಿಲ್ಲದೆ ಮತ್ತಂ—

ಚಂ|| ಮದಕರಿಯಪ್ಪುದೊಂದೆಡೆಯೊಳೊಂದೆಡೆಯೊಳ್ ನರಿಯಪ್ಪುದೊಂದು ಜ |
ನ್ಮ[5]ದೊಳಱನಾಯುಮಪ್ಪುದಿರದೊಂದೆಡೆಯೊಳ್ ಮೃಗರಾಜರೂಪನ ||
ಪ್ಪುದು ತೃಣಮಪ್ಪುದೊಂದೆಡೆಯೊಳೊಂದೆಡೆಯೊಳ್ ಕ್ರಿ[6]ಮಿಯಪ್ಪುದಿಂತು ಪಾ |
ಪದ ಫಲದಿಂ ತೊೞಲ್ತ[7]ರುತುಮಿರ್ಪುದು ಜೀವನನೇಕರೂಪದಿಂ || ೨೬ ||

ವ|| ಮತ್ತ[8]ಮೆಂತುಂ ಮಾಣದೆಯುಂ—

ಕಂ|| ಒಂದೆಡೆಯೊಳ್ ಮರುಳಾಗಿಯು[9] |
ಮೊಂದೆಡೆಯೊಳ್ [10]ಬುದ್ಧಿಗೊಡೆಯನಾಗಿಯು ಮಿರದೋ[11] ||
ರೊಂದೆಡೆಯೊಳ್ ಕಲಿಯಾಗಿಯು |
ಮೊಂದೆಡೆಯೊಳ್ ಪಂದೆ[12]ಯಾಗಿಯುಂ ತಿರಿತರ್ಕುಂ || ೨೭ ||

ವ|| ಇಂತು ಭವಾಂತರದೊ[13]ಳೆಂತಪ್ಪವರುಮೆಂತಾಗ[14]ರೊಂದೇಭವದೊಳ್ ವಿಪರೀತ ಸಂಬಂಧಮಾದ ಕತೆಯಂ ಪೇೞ್ವೆನದೆಂತೆನೆ—

---

(1) ನಪ್ಪುದಧೊಂದೆಡೆ (ಕ,ಜ) (2) ಜಾತಿಯಾಗಿ (ಕ,ಜ,ಭ) ಜಾತಿಯೆಯಾಗಿ (ಘ) ಜಾತಿಯುಮಾಗಿ (ಟ) (3) ಇಲ್ಲ ಇಂತವ ಸ್ಥಾಂತರದೊಳಿಲ್ಲದೆ_ಎಂಬ ಮುಂದಣವಾಕ್ಯವಿದೆ(ಚ)ಅಂತಾಗಿಯುಮಿರೆ(ಭ) (4) ಮಗನೆ ಬೞಿ ಕೊ್ಕರ್ಮೆ (ಕ,ಜ,ಭ) (5) ನ್ಮದನಳಿನಾ (ಭ) ನ್ಮದನಳಿನಾಯಿಯ (ಖ) (6) ನರಿ(ಖ) (7) ಲ್ತ ರುತಿರ್ಪುದು(ಭ) (8) ಮಂತುಂ (ಕ,ಜ) (9) ಯು ದೊಂದೆಡೆ (ಭ) (10) ಳ್‌ಪುಟ್ಟೆ (ಖ) (11) ನಿಂತೆಂದೊಡೆ (ಕ, ಜ, ಭ) (12) ಯಾಗಿಯುಂದರಿತರ್ಕುಂ (ಕ,ಟ) ತಿರಿತರುತಿರ್ಕ್ಕುಂ (ಜ) (13) ದೊಳುಳೆಂತಪ್ಪ (ಕ,ಜ) (14) ರೆಂದೊಡೆ ಭವದೊಳ್ವಿಪರೀತಮಾದ ಸಂಬಂಧ ಕಥೆಯಂ (ಟ) ವಿಪರೀತಸಂಬಂಧರಾದರ ಕಥೆ (ಭ)

## — ನಿದರ್ಶನ ಕಥೆ —

[ ವಸಂತತಿಲಕೆಯೆಂಬ ವೇಶ್ಯೆಯ ಕಥೆ ]

ಕಂ|| ಅಲಘುತರವಸ್ತುವಿಸ್ತೃತ |
ಮಲಂಘ್ಯ[1] ಮುಜ್ಜೇನಿಯೆಂಬ ಪೊೞಲಾ ಪೊೞಲೊಳ್ ||
ವಿಲಸಚ್ಛ್ರೀಯುತ ಗಣಿಕಾ ||
ಕುಲತಿಲಕೆ ವಸಂತತಿಲಕೆಯೆಂಬಳ್ ಪೆಸರಿಂ || ೩೮ ||

ವ|| ಆಕೆಗೆ [2]ನವಯೌವನದ ಭಾಗ್ಯದ ಗರ್ವದ ಮೇಲೆ ಗರ್ಭಮಾದಾಗಳಾಗರ್ಭದೊಳ್ ಗರ್ವಂ[3]ಗೆಟ್ಟು ಬಡಪಟ್ಟು ಕಂದಿ ಕುಂದಿ ಕೆಱಂಕುಂ ತುಱುಯುಮಾಗೆ, ವಿಳಾಸಂ ಪೋಗೆ [4]ಮೆಯ್ ಪೊಲಸು ನಾಱೆ, [5]ಸೊಬಗು ಪಾಱೆ ಕಂಡರ್ ಪೇಸುವಂತಾದೊಡೀ [6]ಬಸಿಱ ಕೂಸೆನ್ನ ಪಗೆ [7]ಯಕ್ಕುಮಾದೊಡಮೇಂ? [8]ಎಂದಿರ್ದು ನವಮಾಸಂ ನೆಱೆದು ಗಂಡುಪೆಣ್ಣುಮಪ್ಪಮಳ್ಗಳಂ [9]ಪಡೆದು ಪೆತ್ತಾಗಳಿರ್ವರ್ ತೊೞ್ತಿರಂ ಕರೆದು "ನೀಮಿರ್ಬರು ಮಿಾಯೆರಡು ಕೂಸುಗಳು[10]ಮಂ ಈ ಪೊೞಲೊಳೆರಡುಂ ದೆಸೆಯೊಳಮಿಾಡಾಡಿ ಬನ್ನಿ" ಮೆಂದೊಡ[11]ವಂದಿರಂತೆ ಗೆಯ್ವಮೆಂದು ಕೊಂಡು ಪೋಗಿ ಪೊೞಲ ಪೊಱಗೆ ಮೂಡಣದೆಸೆಯೊಳೊಂದಂ ಪಡುವಣದೆಸೆಯೊಳೊಂದಂ ಬಿಸುಟ್ಟು ಬಂದರನ್ನೆಗಂ—

ಉ|| ತೆಂಕಣಿನಾ ಪುರಕ್ಕೆ ಪರದರ್ ನರದೇವಕುಬೇರಕಾಂತನಾ |
ಮಾಂಕಿತ[12]ರೞ್ತಿಯಿಂ ಪರದುವಂದು [13]ಮಹಾಧನರಾಗಿ ಮತ್ತೆಯುಂ ||
ತೆಂಕಲೆ ಪೋಗಲಿರ್ದರುಮೆರೞ್ದೆಸೆಯೊಳ್ ಪೊಱವೀಡುವಿಟ್ಟು ತ |
ವ್ಮಾಂ ಕರಮಾಸೆವಟ್ಟೊಡನೆ ಬ[14]ರ್ಪರುಮಿರ್ಪಿನಮಿರ್ದರಿ[15]ರ್ಪಿನಂ || ೩೯ ||

ವ || ಅಂತಿರ್ದು ಮೂಡಣದೆಸೆಯೊಳ್ ಬಿಟ್ಟಿರ್ದ [16]ಕುಬೇರಕಾಂತನ ತೊೞ್ತಿರತ್ತಿತ್ತ ಪೋಪವಂದಿರೊಂದು ಗಿಡುವಿನಡಿಯೊಳ್ ಪೆಣ್ಗೂಸಂ ಕಂಡು ಎತ್ತಿಕೊಂಡು ಪೋಗಿ ತಮ್ಮ ಸೆಟ್ಟಿಗೆ ತೋಱಿದೊಡೆ ಅೞ್ತಿಯೊಳೆತ್ತಿಕೊಂಡು ತಾಂ ಕಮಳೆಯೆಂದು ಪೆಸರಿಟ್ಟು ಕೂಸಂ ನಡೆಪುತ್ತುಂ ಪಯಣಂ[17]ಬೋದಂ — ಪಡುವಣದೆಸೆಯೊಳ್

---

(1) ಮುಜ್ಜೈನಿ (ಟ) (2) ಸೌಭಾಗ್ಯದ ಜವ್ವನದ(ಕ) (3) ಗೆಟ್ಟುಕಂದಿ (ಕ,ಜ) ಗೆಟ್ಟುಕಂದಿಕುಂದಿರೆ(ಛ) (4) ಮೆಯ್ಯೆಲ್ಲಂ ದುರ್ಗಂಧಂನಾಱೆ (ಕ,ಜ,ಟ) (5) ಶೋಭೆ (ಛ) (6) ಬಸುರ (ಘ) (7) ಯಾಗಲೆವೇೞ್ಕುಂ (ಚ) (8) ಎಂದಿರ್ದು ಗಂಡುಪೆಣ್ಣು (ಕ,ಜ) (9) ಪೆತ್ತು ಇರ್ವರ್ ತೊೞ್ತಿರಂ (ಕ,ಜ) (10) ಳುಮನೆಮ್ಮೂರೆರಡುಂ ದೆಸೆಯೊಳಂ (ಕ,ಜ,ಛ) (11) ವಂದಿರದ (ವ) ನೆತ್ತಿ (ಕ,ಜ) (12) ರರ್ತ್ಥಿ (ಕ, ಜ, ಛ) ರತ್ರಿ (ಚ) (13) ಮನೋಮುದರಾಗಿ (ಕ,ಜ,ಛ) (14) ಬರ್ಪರುಬರ್ಪಿನ (ಕ,ಜ,ಛ) (16) ನರದೇವನಮನೆಯ ತೊೞ್ತಿರುಮತ್ತಿತ್ತ ಸುೞಿಯುತ್ತುಮಾಗಂಡುಗೂಸಂ ಕಂಡೆತ್ತಿಕೊಂಡು ಪೋಗಿ ತನ್ನಸೆಟ್ಟಿತಿಗೆ ಕೊಟ್ಟೊಡೆ ಧನದೇವನೆಂದು (ಕ, ಜ) ನರದೇವನಸೂಳೆಯರ್ ಸುೞಿಯುತ್ತುಮಾಗಂಡುಗೂಡಂ (ಛ) (17) ಬೋದರ್ ಪಡುವಣ ದೆಸೆಯೊಳ್ ಬಿಟ್ಟಿರ್ದ (ಚ)

ಬಿ[1]ಟ್ಟಿರ್ದ ನ[2]ರದೇವನ ಮನೆಯ ದಾಸಿಯೊರ್ವಳಾಗಂಡು ಗೂಸಂ ಕಂಡೆತ್ತಿಕೊಂಡು ಪೋಗಿ ತಮ್ಮ ಸೆಟ್ಟಿಗೆ ತಂದು ತೋಱಿದೊ[3]ಡಲ್ತಿಯಿಂ ಕೊಂಡು ಧನದೇವನೆಂದು ಪೆಸರನಿಟ್ಟು ನಡೆಪುತ್ತುಂ ಪಯಣಂಬೋ[4]ಗಿ ದಕ್ಷಿಣ ಮಧುರೆಗೆ ಬಂದು ಸುಖಮಿರ್ದಂ. [5]ಆಕುಬೇರಕಾಂತನುಂ ಪಲವು ದೆವಸದಿಂದಾ ಪೊೞಲ್ಗೆ ವಂದು ಕೆಲವಾ[6]ನುಂ ದೆವಸದಿಂ ನರದೇವಂ ತನ್ನ ಮಗನಪ್ಪ ಧನದೇವಂ ಯೌವನನಾದೊಡಾತಂಗೆ—

ಕಂ|| ಅನುಪಮಕುಬೇರಕಾಂತನ |
ತನೂಜೆ[7]ಯಂ ಕಮಳೆಯೆಂಬಳಂ ಬೇಡಿ ಕರಂ ||
ಮನಮೊಸೆದು ಮಾಡಿ ಮದುವೆಯ |
[8]ನನುನಯದಿನವರ್ಗೆ ಬೇಱೆ ಮೊದಲಂ [9]ಕೊಟ್ಟಂ || ೩೦ ||

ವ|| [10]ಅಂತು ಕೊಟ್ಟು ಬೇಱೊಂದು ಮನೆಯೊಳಗಿರಿಸಿ ತಾಂ ಜಲಯಾತ್ರೆಗೆ [11]ಪೋದಂ. ಇತ್ತಲ್ ಧನದೇವಂ ಕಮಳೆಯೊಡ[12]ನತಿ ಸ್ನೇಹಿತನಾಗಿ ಪುದುವಾೞುತ್ತು ಮಿರ್ದೊಂದು ದೆವಸಂ ಇಂತೆಂದು ಬಗೆದಂ— "ಎಮ್ಮಯ್ಯನಿತ್ತುದನಾನೆನಿತುಕಾಲಮನುಭವಿಸುವೆಂ, ಆನುಂ ಪರದು [13]ಪೋದಪೆಂ" ಎಂದು ಆಕೆಯಂ ಪೆಱಗಿರಿಸಿ ಬಡಗಲ್ ಮಾ[14]ಱುವಂತಪ್ಪ ಬಂಡಮಂ ಕೊಂಡುತ್ತರಾಪಥಕ್ಕೆ ವಂದಂತೆ ತೊಳಲುತ್ತುಂ ಬಂದುಜ್ಜೇನಿಯಂ ಪೊಕ್ಕು ತನ್ನ ತಂದ [15]ಬಂಡಮಂ ಮಾಱಿ ಪಿರಿದುಂ ಲಾಭಂಬಡೆದು ಮನದ ಪೆರ್ಚಿನೊಳಲ್ಲಿಯ ಸೂೞೆಗೇರಿಯಂ ಪೊಕ್ಕು ನಾಡೆ ನೋಡಿ ಮುನ್ನಿನಂತು ವಿಳಾಸಂ ಬೆರಸಿರ್ದ ವಸಂತತಿಳಕೆಯಿಂ ಕಂಡೊತ್ತೆ[16]ಗೊಟ್ಟು ನಿಂ[17]ದು ವಲ್ಲಭನಾಗಿ ಪತ್ತಿ ಪತ್ತುವಿಡದೆ [18]ಮಚ್ಚಿರ್ದನನ್ನೆಗಂ—

ಕಂ|| ಇತ್ತಲ್ ಕಮಳೆಯ ಗೃಹಕ |
ತ್ಯುತ್ತಮಮುನಿ ಚರಿಗೆ [19]ವಂದೊಡಾದರದಿಂದಾ ||
ವೃತ್ತಕುಚೆ ನಿಲಿಸಿದಾಗಳು |
ದಾತ್ತಾವಧಿಬೋಧರಱಿದರಾಕೆಯ ತೆಱನಂ || ೩೧ ||

ವ|| ಅಱಿದು [20]ನಿಲಲೊಲ್ಲದೆ ಮಗುೞ್ದು ಪೋದೊಡೆ ಕಮಳೆ ಸಿಗ್ಗಾಗಿ [21]ತನ್ನ ದೇಹಾರದೊಳಿರ್ದ ಕಂತಿಯಂ ಬೆಸಗೊಂಡೊಡೆ, "ಬಾ! ನಾಮುಮವರನೆ ಪೋಗಿ ಬೆಸಗೊಳ್ವ"ಮೆಂದೊಡ

---

(1) ಪಟ್ಟಿರ್ದ (ಕ,ಜ) (2) ಕುಬೇರಕಾಂತನ ಮನೆಯ ತೊೞ್ತಿ ರತ್ತತ್ತ ಪೋಗುತ್ತೊಂದು ಗಿಡುವಿನಡಿಯೊಳ್ ಪೆಣ್ಗೂಸಂಕಂಡೆತ್ತಿಕೊಂಡು (ಕ, ಜ) (3) ಡರ್ತ್ಥಿಯಿಂ (ಕ, ಜ, ಚ,) (4) ಬಂದು ದಕ್ಷಿಣಮಧುರೆಯನೆಯ್ದಿ (ಕ,ಜ,ಟ) (5) ಆನರದೇವನುಂ (ಕ,ಜ) (6) ವುದಿವಸದಿಂ ತನ್ನಮಗಂ(ಕ,ಜ) (7) ಜೆಯೆಂಬಳಂ ಕಮಳೆಯಂ ಬೇಡಿಕರಂ (ಚ) (8) ನನುರಾಗದಿ (ಕ,ಜ,ಫ,ಟ) (9) ಕೊಟ್ಟರ್ (ಛ) (10) ಕೊಟ್ಟುಬೇರೆಮನೆಯೊಳೆ (ಕ,ಜ) (11) ಪೋದೊಡೆ ಧನದೇವಂ (ಕ,ಜ,ಛ,ಟ) (12) ನತಿಹಿತನಾಗಿ ಪುದುವಾೞುತ್ತಿರ್ದೆಮ್ಮಯ್ಯನಿತ್ತುದನಾನೆಂತು (ಕ,ಜ) ಪುದುವಾೞುತ್ತಿರ್ದೊಂದು ದೆವಸಮೆಮ್ಮಯ್ಯ (ಛ) (13) ಪೋದಪೆನೆಂದು ಪರದುಗೆಯ್ವುದ್ಯೋಗದಿಂದಾಕೆ (ಟ) ದಾಕೆಯನಿರಿಸಿ (ಕ,ಜ) ಕೆಯನಲ್ಲಿರಿಸಿ (ಚ,ಛ,ಟ) (14) ಮಾಡುವ (ಕ,ಜ,ಛ) (15) ಭಂಡಂಮಾಱಿಲಾಭ ಮಾದೊಡೆ ಮನಂಪೆರ್ಚಿ (ಕ,ಜ,ಛ) (16) ಯಿಟ್ಟು (ಚ) ಪಿರಿದರ್ಥಮನಿತ್ತು (ಜ) (17) ಕಡುನಲ್ಲನಾಗಿ (ಚ,ಛ) (18) ಬಾೞುತ್ತಿರ್ದನನ್ನೆಗಂ (ಕ,ಜ) ಪಲವುಕಾಲಂ ಪುದುವಾೞುತಿರ್ದರಿ (ಚ,ಛ)-(19) ನಿಂದೊ (ಕ,ಜ) ನಿಲಿಸೆ ಪೋಪುದು (ಕ,ಜ,ಟ) (20) ನಿಲ್ಲದೆ (ಕ,ಜ) (21) ಶನಗಿಷ್ಟೆಯರಪ್ಪಕಂತಿ (ಕ,ಜ) ತಬೆಯಂಬಾಗಿ ತನಗಿಷ್ಟೆ (ಟ)

ಗೊಂಡು ಪೋಗಿ ಭಟ್ಟಾರಕರಂ ಬಂದಿಸಿ ಮುಂದೆ ಕುಳ್ಳಿ[1]ರ್ದು ಭಟ್ಟಾರಾ ! ನಿಮ್ಮಡಿಯನಿಂ[2]ದು ಕಮಳೆ ನಿಱಿಸಿದೊಡೇಕೆ ನಿಂದಿರಿ[3]ಲ್ಲಿದನಮೋಘಂ ಬೆಸಸಿಮೆಂದೊಡೆ ಭಟ್ಟಾರಕರೆಂದರ್— ಈ[4]ಯಬ್ಬೆಯುಮಿಾಯಬ್ಬೆಯಾಣ್ಮನುಮೊಡ[5]ವುಟ್ಟಿದರ್. ಅಂತಾಗಿಯುಮಿಾಗಳಾತಂ[6]ಪೋಗಿ ಯುಜ್ಜೇನಿಯೊಳ್ ತಮ್ಮಬ್ಬೆಯಪ್ಪ ವಸಂತತಿಳಕೆಯೊಳಱಿಯದೆ ಪುದು[7]ವಾಳುತ್ತಿರ್ಪಂ. ಇಂತು ಟವರ ಪಾಪದ ಫಲಮೆಂದಱಿದು ಸಂ[8]ದೆನಿಲ್ಲೆಂದು ತತ್ಪ್ರಪಂಚಮೆಲ್ಲಮಂ ತಿಳಿಯೆ ಪೇೞ್ದೊಡೆ ಕಮಳೆ[9] ಬೆಱಗಾಗಿ ನಿರ್ವೇಗದಿಂದ ಮಾಗಳಂತೆ ತೊಱೆ[3]ವೆ[10]ನೆಂದೊಡೀಗಳ್ ಬೇಡ, ನೀನುಮದಂ ಕರಂ ಕಂಡು ನಂಬಿದಿಂಬೞಿಯಂ ನಿಮ್ಮ ಬಗೆದುದಂ [11]ಬಗೆಯಿಮೆನೆ [12]ಯಿಾಮಾತಿಂಗೊಡಂ ಬಟ್ಟು ಮನೆಗೆವಂ[13]ದು—

ಚಂ|| ತಲೆಗಿ[14]ರಿ(ಱು)ದುಟ್ಟು ಕಾಸೆಯನೊಡಲ್ ಕುಸಿವಂತಿರೆ ನೊಂ[15]ದು ಚಿತ್ತದೊಳ್ |
ಚಲಮನೊಡರ್ಚಿ ನೆಟ್ಟನೆನಗೆಯ್ದಿದ ಪಾಪಮುಮಂ ಪ್ರಣೂತ ನಿ ||
ರ್ಮಲಮುನಿವಾಕ್ಯದಂದಮುಮನಾರಯದಿಂ[16]ತಿರಲಾಗದೆಂದು [17]ಪೋ |
ಗಲೆ ಸಮಕಟ್ಟಿ ಕಟ್ಟಿ ಮಣಿಯಂ ಗೊರವಬ್ಬೆಯ ವೇಷದೋಜೆಯ(ಯಿ)ಂ || ೩೨ ||

ವ|| ಕೆ[18]ಯ್ಕೊಂಡು ಸೆಜ್ಜೆಯಂ ಪಿಡಿದು ಪೊೞಲಂ ಪೊಱಮಟ್ಟು ಕೆಲವಾನುಂ ದೆವಸದಿಂ ದುಜ್ಜೇ[19]ನಿಯನೆಯ್ದೆವಂದು ವಸಂತತಿಲಕೆಯರಮನೆಯಂ ಬೆಸಗೊಂಡು [20]ಪೋಗಿ ಮನೆಯಂ ಪೊಕ್ಕು ನೋೞ್ಪಾಗಳಾ ವಸಂತತಿಳಕೆಯುಂ ಧನದೇವನುಮೊಂದೆ ಮಂಚದೊಳ್ ಕುಳ್ಳಿ[21]ರ್ದು "ಎಲೆ ಗೊರವಬ್ಬಾ ! ಯೆಲ್ಲಿರ್ದು ಬಂದಿರಿ" ಎಂದೊಡೆ "ದೇಶಾಂತರದಿಂ ತೀರ್ಥಯಾತ್ರೆಗೆ ವಂದಿಲ್ಲಿ ನಿಮ್ಮ ಶ್ರೀಯ ಪೆಂಪಂ ಕೇಳ್ದಲ್ಲಿಯಿಂ ನಿಮ್ಮಂ ನೋಡಲ್ ಬಂದೆಂ" ಎಂದೊಡೆ "ಬನ್ನಿಂ ಕುಳ್ಳಿರಿ"ಮೆಂದು ಮಣೆಯನಿಕ್ಕಿಸೆ ಕುಳ್ಳಿರ್ದಾ ಕಮಳೆಯುಂ ಧನದೇವಂ ನೋಡಿ ಚೋದ್ಯಂ ಬಟ್ಟು ತಲೆಯಂ ತೂಗಿ ಕದಪಿನೊಳ್ ಕೆಯ್ಯಿಟ್ಟು ಬಾಯುಂಬಿಟ್ಟು ಬೆಱಗಾಗಿರ್ಪನ್ನೆಗಮಾ[22]ಯಿ ರ್ವರ್ಗಂ ಪುಟ್ಟಿರ್ದ ಗಂಡುಗೂಸವರ ಮುಂದೆ ತೊಟ್ಟಿಲೊಳ್ ಪಟ್ಟಿರ್ದೞುತ್ತುಮಿರೆ ಕಮಳೆ ಸ್ಥೈರಿಸ [23]ಲಾಱದೆಲ್ದುನಿಂದಾ ಕೂಸಂ ತೂಗುತ್ತುಮಿಂತೆಂದು ಪಾಡಿದಳ್—

---

(1) ರ್ದುಕ್ಕೈಗಳಂ ಮುಗಿದುಭಟ್ಟಾರಕಾ (ಕ) (2) ನೀಕೆನಿಲಿಸಿದೊಡೆನಿಂದಿ (ಕ,ಜ,ಟ) ನಿಮ್ಮಡಿಯೇಕೆನಿಲಿಸಿ ದೊಡೆ (ಛ) ನಿಮ್ಮಡಿಗಳೇಕೆ ನಿಲಿಸಿ (ಜ) (3) ರಿಲ್ಲಿದಮೋ (ಕ, ಜ) (4) ಯಿಾಯಕ್ಕನುಮಿಾಯಕ್ಕನಾಣ್ಮ (ಕ,ಜ,ಟ,ಛ) (5) ವುಟ್ಟಿದರಂತಾಗಿಯುಂ (ಛ) (6) ಪೋಗಿ ತಮ್ಮಬ್ಬೆ (ಕ,ಜ,ಟ) ವಸಂತತಿಲಕೆಯಪ್ಪ ತಮ್ಮಬ್ಬೆ ಯೊಳಱಿಯದೆ (ಛ) (7) ವಾೞ್ವಪ್ಪನಿದಿವರ (ಕ) ವಾೞ್ವಪನಿದಿರವ (ಟ) (8) ನಿಂದುದಿಲ್ಲೆಂ (ಕ, ಜ) ನಿಂದೆ ಮಿಲ್ಲೆಂ (ಛ) (9) ಕೇಳ್ದು ಸಿಗ್ಗಾಗಿ ತಲೆಯಂ ಬಾಗಿ ನಿರ್ವೇಗಪರಾಯಣೆಯಾಗಿ, (ಕ, ಜ, ಟ) (10) ನೆಂದುಂ ಬಡೊಡೀ (ಜ) (11) ಬಗೆವುದೆನೆ (ಕ) (12) ಅಂತೆಗೆಯ್ವೆನೆಂದುಗುರುಗಳ (ಜ) (13) ವಂದಿರ್ದು (ಕ, ಜ) (14) ಗೆದರುಟ್ಟು (ಕ,ಚ,ಜ) (15) ನೋಂತು(ಕ,ಜ,ಚ) (16) ದಂತಿರದಂದಿರಲಾಗ(ಛ) (17) ಪೋಗನೆ(ಜ) (18) ಕೊಂಡು ಪೊೞಮಟ್ಟು ಕೆಲವಾನುಂ (ಖ) (19) ಜ್ಜಯಿನಿಗೆವಂದು (ಕ, ಟ) (20) ಪೊಕ್ಕು (ಕ,ಜ,ಟ) ಗೊಂಡುಮನೆಯಂ ಪೊಕ್ಕು (ಛ) ಗೊಂಡು ಪೋಗಿ ಪೊಕ್ಕು (ಛ, ಖ) (21) ರ್ದುದಂಕಂಡು ದೇಶಾಂತರದಿಂ ತೀರ್ಥಯಾತ್ರಾ (ಕ,ಜ,ಟ) (22) ಮವರಿರ್ವರ್ಗಂ (ಕ,ಜ) (23) ಲಾಱದಾಕೂಸಂ (ಚ,ಜ,ಟ)

ಕಂ|| ಜೋ ನೀಂ ಮಗನೇ ತಮ್ಮನೆ |
ಜೋ ನೀನಳಿ[1]ಯಂಪು ಮೆಯ್ದುನಾ ಕಿಱಿಯಮ್ಮಾ ||
ಜೋ ನಿಮ್ಮ[2]ಬ್ಬೆಗೆ ಪೊ[3]ಮ್ಮನೆ |
ಜೋ ನಿಮ್ಮಮ್ಮಂಗೆ ತಮ್ಮನಪ್ಪನೆ ಜೋಜೋ || ೩೩ ||

ಉ|| ಜೋ ನಿನಗಾದ ತಾಯೆನಗೆ ತಾಯ್ವಿರುಮಕ್ಕನುಮತ್ತೆಯುಂ ದುರ |
ಜ್ಞಾನದಿನೊಂದಿದತ್ತಿಗೆಯು ಮಾದಳಿ[4]ದಬ್ಬೆಯ ಪಾಪದೋಳಿ ಜೋ ||
ಜೋ ನಿನಗಾದ ತಂದೆ ಯೆನಗಣ್ಣನು[5]ಮಾಣ್ಮನುಮಯ್ಯನಾದನಿಂ |
ತಾನೆ [6]ಯಿದಣ್ಣ ನಮ್ಮ ಕಡುಪಾಪದ ಬಂಧನಮುಲ್ತೆ ಬಾಲಕಾ || ೩೪ ||

ವ|| ಎ[7]ಂಬುದುಂ ಕೇಳ್ದು ವಸಂತತಿಲಕೆಯುಂ ಧನದೇವನುಂ ಬೆಕ್ಕಸಮಾಗಿರ್ದಿರಲಾಱದೆ ಮಂಚದಿಂ[8]ದಿೞಿದು ಬಂದು "ಎಲೆ ಗೊರವಬ್ಬಾ! ಪೇೞಿದರ[9]ನ್ತಮದೇ" ನೆನೆ "ನಿನ್ನ ಗರ್ಭಮಾದಂದುಮೊದಲಿಂದುವರಮಾದವಸ್ಥಾಂತರಮನೆಲ್ಲಮನೆನಗೊರ್ವರ್ ದಿವ್ಯಜ್ಞಾನಿಗಳ್ ಪೇೞೆ[3] ಕೇಳ್ದೆನಂತೆ ನಿಮ್ಮಲ್ಲಿಯುಂ ಕಂಡೆಂ. ನೀಮೆನ್ನಬ್ಬೆ ವಸಂತತಿಳಕೆಯಯ್ [10]ಆಂ ನಿಮ್ಮ ಮಗಳ್ ಕಮಳೆಯೆಂ. ಈ ಯಿರ್ದ ಧನದೇವಂ ನಿಮ್ಮ ಮಗನೆಮ್ಮಣ್ಣಂ, ಈಗಳೆನಗಂ ನಿಮಗ ಮಾಣ್ಮನಾದಂ. ಇಂತಾಯ್ತು" [11]ನಮ್ಮ ಪಾಪದ ಫಲಮೆಂದಱ್ವುದುಂ ಕಂಡು ತಾಮುಂ ಮತ್ತೆ ತಮ್ಮಳ್ಪರ್ಥಮೆಲ್ಲನುಂ ದಾನಂಗೆಯ್ದು ಪೊಱಮಟ್ಟು ಬಂದು ಮುಂ ಪೇೞ್ದ ಪೊಱಲೊಳಗಿರ್ದ ದಿವ್ಯ ಜ್ಞಾನಿಗಳ್ಗೆ ಪೊಡೆವಟ್ಟು "ನಮೋಸ್ತು ಭಟ್ಟಾರಕಾ, ಬೆಸಸಿಮೆಮಗೀ ಜನ್ಮದೊಳಿಂತಾದುದಾವ ಭವದ ಪಾತಕದ ಫಲ" ಮೆನೆ ಭಟ್ಟಾರಕರಿಂತೆಂದರ್—

ಕಂ|| ಮುನ್ನಿನ ಭವದೊಳ್ ನೀಂ ವಿ |
ಪ್ರೋನ್ನತ [12]ಚಾತುರ್ವೇದನಾದೆ ಯಿ[13]ವರ್ಗಳುಮಂದುಂ ||
ನಿನ್ನ ತನಯರ್ಕಳಾಗಿ |
ರ್ಪನ್ನೆವರಂ ಬಡಗನಾಡ ಮಧುರಾಪುರದೊಳ್ || ೩೫ ||

ವ|| ವೈಶ್ಯಕುಲಪ್ರಧಾನಂ ಜಿನದತ್ತನೆಂಬಂ ಶ್ರಾವಕಂ. ಆತಂ ತನ್ನ ಮಗಂ ತಪಂಬಟ್ಟೊಡೆ ತಾನುಂ ತಪಂಬಟ್ಟವರ್ಗರುಂ ತೀರ್ಥಯಾತ್ರೆಗೆ [14]ಪೋದೊಡೆ ಪಿಂದಾತನಸೆಟ್ಟಿತಿಯುಂ ಸೊಸೆಯು

---

(1) ಯೆಂಪು (ಛ) (2) ಬ್ಬೆಯ (ಕ,ಜ) (3) ಮ್ಮನ ಜೋನಿಮ್ಮಯ್ಯಂ (ಚ) ನಿಮ್ಮಬ್ಬೆಯ (ಕ,ಜ) ನಿಮ್ಮಯ್ಯಂಗೆ (ಛ) ನಿಮ್ಮಣ್ಣಂಗೆ (ಟ) (4) ದಪ್ಪೆಯ(ಛ) (5) ಯೆನಗಣ್ಣನು ಮಣ್ಣನುಮಯ್ಯನಾದನುಂ (ಛ) (6) ಯಿದೆನ್ನ ನಿನ್ನ (ಕ,ಜ) (7) ಎಂದುದಂ (ಖ) ಎಂಬುದಂ (ಛ) (8) ದೆಳ್ದುಬಂದೆಲೆ (ಚ) ದಿದೆರ್ದು (ಖ) (9) ಳಿದರಂವ ಮೇನೆನೆನಿನಗೆ (ಕ) ಳಿವರಂದಮನೆನೆ (ಜ) ಳಿದಱಿಂದಮನೆನೆ ಪೇಳ್ದಳ್ನಿನಗೆ (ಛ) (10) ನಿಮ್ಮ ಮಗಳಾಂಕಮಳೆಯೆನಾಂ ಯಿಾ ಯಿರ್ದ ಧನದೇಸಂ ನಿಮ್ಮ ಮಗನೆನಗಣ್ಣಂ ನಿಮಗಮಾಣ್ಮನಾದಂ (ಕ,ಜ) ಮೆಮ್ಮಬ್ಬೆಗಳಿರಾಂ ಕಮಳೆಯೆನಾಂಯಿಾಯಿರ್ದಂ ನಿಮ್ಮರ್ಮಂ ಧನವೇವನೀಗಳೆಮಗಂನಿಮಗ ಮಾಣ್ಮನಾದ (ಜ) ನೀಮೆಮ್ಮವ್ವೆ ವಸಂತತಿಳಕೆವಿರಾಂ ಕಮಳೆಯೆ ನೀಯಿರ್ದಂ ನಿಮ್ಮ ಮಗಂ ಧನದೇವನೀಗಳೆಮಗಂನಿಮಗಮಾಣ್ಮನಾದಂ (ಛ) (11) ಯಿಾ ಪಾಪವಫಲಮೆಂದಱಿಲ್ವರಂ ಕಂಡವರು ಮಱ್ಕಿ ತಮ್ಮಳ್ಪುದಂ ದಾನಂಗೆಯ್ದು ಪೊಱಮಟ್ಟು ಪೊಱವೊಱಲೊಳಿರ್ದ ದಿವ್ಯಜ್ಞಾನಿಗಳಲ್ಲಿಗೆವಂದು ವಸಂತತಿಳಕೆ ಭಟಾರಾ ಬೆಸಸಿಮೆಮಗೀಜನ್ಮದೊಳಿಂತಿದಾವ ಭವದ ಪಾಪದಫಲಂ (ಕ, ಜ, ಟ) (12) ಚಾವ್ವೀರ (ಕ) ಚವುವೇದ (ಛ) (13) ಯಿರ್ವರ್ಗಂಡುಂ ಯವರ್ಗಳುಮೆಂದು (ಟ) (14) ಪೋದೊಡಾತನಸೆಟ್ಟಿತಿ ಸೊಸೆಯುಮವರ್ತಪಂ (ಕ,ಜ)

ಮಿ[1]ರ್ವರುಂ ತಪಂಬಟ್ಟೊಡಾಮೇಕಿರ್ಪೆವೆಂದು ಅವರುಂ ತಪಂ[2]ಬಟ್ಟು ಪೋಗಿ ವಿಹಾರಿಸುತ್ತುಂ ಒಂದೂರೊಳೊಂದು ಬಸದಿ[3]ಯಲ್ಲಿ ಯಾರ್ಯಿಕೆಯರಿರ್ವರುಮಾ ಋಷಿಯರ್ಕಳಂ ಕಂಡು ವಂದಿಸಿ ಕುಳ್ಳಿರ್ದು ತಮ್ಮ ಮಗನಪ್ಪ ಕಿತ್ತಯ್ಯಂಗಳ ಸಾರೆ ಮುತ್ತ ಕಂತಿಯರ್ ಪೋಗಿ ಕ್ಷೇಮಕುಶಲಂಗಳಂ ನುಡಿಯುತ್ತು[4]ಮಿರ್ದರ್. ಸೊಸೆಯಪ್ಪೆಳವಜ್ಜಿಗಳುಂ ಮಾವಂಗಳಪ್ಪ ಮುತ್ತ ಭಟ್ಟಾರಕರ ಸಾರೆಯಿರ್ದು ವಿನಯದಿನಾಳೋಚಿಸುತ್ತಿರೆಯುಂ, ಮುಂ ಪೇಳ್ದ [5]ಚೌವೇದನೆಂಬ ಪಾರ್ವಂ ತನ್ನ ಮಕ್ಕಳಪ್ಪಿರ್ವರ್ ಮಾಣಿಗಳುಂ ತಾನುಂ ವಾದಾ[6]ರ್ಥದಿಂ ತೊಳಲುತ್ತುಮಲ್ಲಿಗೆ ವಂದು ಋಷಿಯರ್ಕಳುಮಂ ಅಜ್ಜಿಯರ್ಕಳುಮಂ ಕಂಡು.

ಕಂ|| [7]ನೋಡ! ವಿಧಾತ್ರನ ಗೊಡ್ಡಮಂ |
ನಾಡಿದುದಂ [8]ಮುದು ಸವಣ್ತಿಯೊಳ್ ಕಿತ್ತಯ್ಯಂ ||
ಕೂಡಿದ[9]ನೆಳಯಜ್ಜಿಯೊಳಂ |
ಕೂಡಿದನಾ ಮುತ್ತ ಸವಣನುಂ [10]ತಾನೆನುತುಂ || ೩೬ ||

ವ|| ಅಂತಾ [11]ಮೂವರು ಮೇಡಿಸಿ ನಗುತ್ತುಂ ಪೋಗೆ ಕೆಲವಾನುಂ ದೆವಸದಿಂದಾ ಪಾರ್ವಂಗೆ [12]ಕುಷ್ಠವ್ಯಾಧಿ ಪೆರ್ಚಿ ಸತ್ತು ಆ ಪಾಪದಫಲದಿಂ ನೀಂ ವಸಂತತಿಲಕೆಯಾಗಿ ಪುಟ್ಟಿದಯ್. ಆಮಾಣಿ[13]ಯರಿರ್ವರುಮೊಂದು ತೊಱೆಯುಂ ಪಾಯ್ವಲ್ಲಿ ಪಱುಗೋ[14]ಲಟ್ಟು ಸತ್ತು ಒಡನೆ ನಿನಗೆ ಗಂಡುಪೆಣ್ಣುಮಪ್ಪಮಳ್ಗಳಾಗಿ [15]ಪುಟ್ಟಿದಂದು ಇರ್ವರುಮಂ ನೀಂ [16]ಬಿಸುಟ್ಟೊಡೆ ಇವರುಮನಿರ್ವರ್ ಪರದರ್ ಕೊಂಡು ಪೋಗಿ(ನಡೆಪಿ) ಧನದೇವನುಂ ಕಮಳೆಯುಮೆಂದು ಪೆಸರನಿಟ್ಟು ನಡೆಪುತ್ತುಂ ಬೇಱೆ ವೇಱೆ ಪಯಣಂ ಬೋಗಿ ತೆಂಕಣನಾಡೊಳೊರ್ಬುಳಿ[17]ಯಾಗಿರ್ದೆಡೆಯೊಳಿರ್ವರ್ಗಂ ಮದುವೆಯುಂ ಮಾಡಿದರೀತನುಂ ಪರದುವಂದು ನಿಮ್ಮೊಳಱಿಯದೆ ಪುದು[18]ವಾಳ್ವಂತಾಯ್ತು. ಇಂತೀ ಮೂವರುಂ ಮುನ್ನಿನ ಭವದೊಳ್ ಮಹಾಗುಣವಂತರಂ ಪಱಿದ ಪಾಪದ ಫಲದಿನಿಂತಾದಿರೆನೆ [19]ಕೇಳ್ದು ವಸಂತತಿಳಕೆಯುಂ ಸಂಸಾರಕ್ಕೆ ಪೇಸಿ ನಿರ್ವೇ

---

(1) ಮಿರ್ವರುಂ ತಪಂಬಟ್ಟು ಪೋಗಿ ವಿಹಾರಿಸುತ್ತುಂ (ಖ) (2) ತಪಂಬಟ್ಟಿರ್ವರುಂ ವಿಹಾರಿಸುತ್ತುಂ ಪೋಗಿ (ಚ,ಛ) (3) ಯೊಳಾಋಷಿಯರಂ ಕಂಡು ಬಂದಿಸಿ ಕುಳ್ಳಿರ್ದುಕ್ಷೇಮ(ಚ,ಛ) ಯಲ್ಲಿಯಾಋಷಿಯರ್ಕಳಂ ಸಾರೆ ಪೋಗಿ ಕ್ಷೇಮ (ಕ,ಜ) (4) ಮಿರೆ (ಕ,ಚ,ಟ) (5) ಚೌವೀರ (ಖ) ಚಱುವೀರ (ಛ) (6) ದಾನಾರ್ಥಿಯಾಗಿ (ಕ,ಚ) ದಾನಾರ್ಥಿಗಳಾಗಿ ತೊಳಲುತ್ತಿಲ್ಲಿಗೆವಂದು (ಛ) ತೊಳಲುತ್ತು ಮಲ್ಲಿಗೆ (ಕ,ಜ) (7) ನೋಡಿ (ಛ) ನೋಡೆ (ಟ) (8) ಮುದುಕಿಸವಣಿಯೊಳ್ (ಚ,ಛ) ಮುದುಪಸವಣಿ (ಖ) (9) ನೆಳಯಬ್ಬೆಯುಮಂ (ಛ,ಚ,ಕ) ಯಬ್ಬೆಯೊಳಂ (ಖ) (10) ನೋಡೆನುತುಂ (ಖ) (11) ಮೂವರುಮುವರಂ ದೂಷಣೆಗೆಯ್ದುನಗು (ಚ,ಛ) (12) ಕುಷ್ಠೆಯಾಗಿ ಸತ್ತಾ ಪಾಪದ (ಕ, ಚ) (13) ಗಳಿರ್ವರುಂ (ಕ, ಜ) (14) ಗೋಲ್ಮುೞುಗೆ (ಟ) (15) ಪುಟ್ಟಿದರ್ ಪುಟ್ಟಿದಾಗಳೆ ನಿಮ್ಮಿರ್ವರುಮಂ (ಕ,ಜ) (16) ಬಿಸುಡಿಸಿದೊಡೆಯಿರ್ವರ್ ಪರದರ್ ಕೊಂಡು ಪೋಗಿ ಧನದೇವ (ಕ, ಜ) (17) ಯಾದಲ್ಲಿ ಯಿರ್ವರ್ಗಂ ಮದುವೆಯುಂ ಮಾಡಿದರೀತನುಂ (ಚ) ಯಾಗಿರ್ದೆಡೆಯೊಳ್ ಬೇಗಮಿರ್ವರ್ಗಂ (ಕ, ಜ, ಟ) (18) ವಾಳ್ವುದಂತುಟಾಯ್ತು ನೋಡೀ ಪಾಪದ ಫಲದಿಂ ದಿಂತಾದಿರೆನೆ ಸಂಸಾರಕ್ಕೆ ಪೇಸಿ ತಪಂಬಟ್ಟು ಬೇರೆವೇರೆಪೋಗಿ ತಪಂಗೆಯ್ದು ಶುಭಧ್ಯಾನದಿಂ ಮುಡುಪಿ ಪರಂಪರೆಯಿಂ ಮುಕ್ತಿವಡೆದರೆಂಬೀಕತೆಯುಂ ಜೀವಾ ನೀನವಧಾರಿಸುವುದು (ಕ,ಜ) (19) ರೆನೆವಸಂತತಿಳಕೆ ಅವಧಿಜ್ಞಾನಿಗಳ ವಚನಮುಂ ತನ್ನ ನೆಗಟ್ತೆಯುಮೊಂದಾದುದಂ ಕಂಡು ನಂಬಿ ನಿರ್ವೇಗದಿಂ ತೊಱೆದು ತಮ್ಮ ಮೂವರುಂ ಒಡಲಂ ತವೆ ನೋನ್ತು ಮುಡಿಪಿಸುಗತಿ (ಚ) ನಂಬಿಮನೆಯುಮಂ ಶಿಶುವುಮಂ ಕ್ರಮದವರ್ಗೆ ಕೊಟ್ಟು ನಿರ್ವೇಗದಿಂ ತೊಱೆದು ತಮ್ಮ ಮೂವರುಂ ತಪಂಬಟ್ಟು ಬೇಱೆವೇಱೆ ತಪಂಗೆಯ್ದೊಡಲಂ (ಛ, ಖ)

ಗದಿಂ ತೊಱೆದು ತಮ್ಮ ನೂರ್ವರುಂ ಬೇಱೆ ವೇಱೆ ಪೋಗಿ ತಪಂಬಟ್ಟು ಶುಭಧ್ಯಾನದಿಂ ಮುಡಿಪಿ ಸುಗತಿವಡೆದರ್. ಎಂಬೀ ಕಥೆಯಂ ಜೀವಾ ! ನೀನವಧಾರಿಸಿ ಸಂಸಾರಕ್ಕೆ ಬೆರ್ಚಿ ಶುಭಪರಿಣಾಮದೊಳ್ ನೆಗೞ್ವುದು.

ರಗಳೆ— ಒಂದೆ ಭವದೊಳಗಿಂತು – ಬಂದುದಱಿಮೇಂ ಭ್ರಾಂತು || ೧ ||
ಪರಿಣಾಮವಶಮಾಗಿ – ನೆರಪಿದಱಿದಿಂ ಪೋಗಿ || ೨ ||
ಪುಟ್ಟಿದ ಭವಾಂತರದ – ಕಟ್ಟಿದ ಮಹಾಂತರದ || ೩ ||
ಯೋನಿಫಲವಾದುವಂ – [1] ಸ್ಥಾನದ ವಿಭೇದವಂ || ೪ ||
ಎಸುಕದುದ್ರೇಕಮಂ – ಪೆಸ[2]ರ್ಗಳನನೇಕಮಂ || ೫ ||
ಗೋತ್ರಭೇದಂಗಳಂ – [3] ಕ್ಷೇತ್ರ ಭೇದಂಗಳಂ || ೬ ||
ಮೊಱೆಯ ವಿಪರೀತಮಂ – ಅಱಿವಿನ ವಿಘಾತಮಂ || ೭ ||
ಕೀೞ ಮೇಲಪ್ಪುದುಂ – ಮೇಲೆ ಕೀೞಪ್ಪುದುಂ || ೮ ||
ಭಯಮೆ ನಯಮಪ್ಪುದುಂ – ಪಾೞಿ ಪಗೆಯಪ್ಪುದುಂ[4] || ೯ ||
ಕುಲಮಕುಲಮಪ್ಪುದುಂ – ಬಲಮಬಲಮಪ್ಪುದುಂ[5] || ೧೦ ||
ಒಡೆಯರಳಿವಂದಮಂ – ಬಡವರೊಗೆವಂದಮಂ || ೧೧ ||
ಕೆಳೆಯೆ ಪಗೆಯಪ್ಪುದುಂ – ಮುಳಿಸೊಸಗೆಯಪ್ಪುದುಂ || ೧೨ ||
ಕೇಡೆ ಪೆರ್ಚಪ್ಪುದುಂ – ಮಾಡೆ ಕೇಡಪ್ಪುದುಂ || ೧೩ ||
ಅರಸಿ ತೊೞ್ತಪ್ಪುದುಂ – [6] ಸುರುಳಿ ಸುಖಿಯಪ್ಪುದುಂ || ೧೪ ||
ನೆನೆದೊಡೀಸಂಸಾರ – ವೆನಿತಾನುಮಾಕಾರಂ || ೧೫ ||–|| ೩೭ ||

ಕಂ|| ಸಾರಮಣಮಿಲ್ಲದೀ ಸಂ |
ಸಾರದೊಳತಿ [7] ಘೋರದೊಳ್ ಗಭೀರದೊಳುಗ್ರಾ ||
ಕಾರದೊ[8]ಳುಂಟೊಂದೆನಗಾ |
ಧಾರಂ ಜಿನಧರ್ಮಮೊಂದೆ ಬಗೆ ನೀಂ ಜೀ[9]ವಾ || ೩೮ ||

ವ|| ಮಹಾಸಮುದ್ರ[10]ದೊಳಗಾದಾತಂಗೆ ಭೈತ್ರಂ ದೊರೆಕೊಂಡೊ[11]ಡಂ, ಮನುಷ್ಯ ಭವಂಗಳೊಳಗೆ ಸದ್ಧರ್ಮಂ ದೊರೆಕೊಂಡೊಡಮದನುದಾಸೀನಂಗೆಯ್ಯ[12]ದಿರಿಂ, ಮತ್ತಂ—

(1) ಸ್ಥಾನಕದ ಭೇದ (ಛ, ಟ) (2) ಗರ್ಳನ ನೇಮಮಂ (ಟ) (3) ಗಾತ್ರದಂಡಂಗಳಂ (ಛ, ಟ) (4) [ಈ ಪಾದ ಹೆಚ್ಚಿದೆ] ಹಿತಮಹಿತಮಪ್ಪುದುಂ ಮತಿಯಮತಿಯಪ್ಪುದುಂ (ಟ) (5) ಕೆಳೆಯೆ....ದಂ। ಮಾಡೆ ಕೇಡಪ್ಪುದುಂ ಭಯಮಭಯಮಪ್ಪುದುಂ ॥ ನಯಮನಯಮಪ್ಪುದುಂ ಅರಸಿ ತೊೞ್ತಪ್ಪುದುಂ। ಸಿರಿಗಿಸುಖಿಯಪ್ಪುದುಂ ॥ ಹಿತಮಹಿತ....ಪೊಡೆಯುರಳಿವಂದಮಂ, ಬಡವರೊಗೆವಂದಮಂ (ಛ) (6) ಮುರಳಿ (ಟ) (7) ಘೋರದುಃಖದಿಂದಂ ಗಂಭೀರಾಳಿನಗೊಂದುಂಟಾ (ಚ, ಕ) (8) ಳಿನಗೊಂದುಂಟಾಧಾರ (ಚ) (9) ಮನದೊಳ್ (ಚ) (10) ದೊಳಿರ್ದಾತಂಗೆ (ಛ, ಚ) (11) ಡೊಡಂತೀ ಮನುಷ್ಯಭವದೊಳಿಂತಾನುಂಧರ್ಮಂ (ಚ, ಛ) (12) ದಿರು (ಚ)

ಚಂ|| ನರಕದೊಳುಂಟೆ ದಿವ್ಯನಿಳಯಂಗಳೊಳುಂಟೆ ಬಹುಪ್ರಕಾರ[1] ದಾ |
[2] ತಿರಿಕದೊಳುಂಟೆ [3] ಕುತ್ಸಿತ ಕುಭೂಮಿಯೊಳುಂಟೆ ಕುಮಾನುಷಾಲಯಾಂ ||
ತರದೊಳಗುಂಟೆ ಪಾಪಹರಮಾಗುವ ಧರ್ಮಮದಿಲ್ಲಿ ಸೈಪಿನಿಂ |
ದೊರೆಕೊಳೆ ಗೆಂಟುಮಾಡಿದೊಡೆ ಜೀವನೆ [4] ಮತ್ತಮದೇಂ ಸುಸಾಧ್ಯಮೇ || ೧೧ ||*

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ[5] ಗ್ರಂಥಾವತಾರದೊಳ್

[6] ಸಂಸಾರಾನುಪ್ರೇಕ್ಷಾ ನಿರೂಪಣಂ — ವಸಂತತಿಲಕಾ ಕಥಾವರ್ಣನಂ

[7] ಪಂಚಮಾಧಿಕಾರಂ.



* ಯಸ್ಯಾವತಾರೇ ಸತಿ ಸುಪ್ರತಿಷ್ಠೇ — ವವರ್ಷ ರತ್ನಾನಿ ಹರೇರ್ನಿದೇಶಾತ್ ||
ಧನಾಧಿಪಷ್ಷಣ್ಣವಮಾಸಪೂರ್ಣಂ — ಪದ್ಮಪ್ರಭಂ ತಂ ಪ್ರಣಮಾಮಿ ನಿತ್ಯಂ ||

(1) ದಿಂ (ಖ) (2) ತಿರಿತದೊ (ಟ) (3) ದುಷ್ಕೃತಭೂಮಿ (ಕ, ಜ) ದುಷ್ಕೃತದೊಳುಂಟೆ ಭೂಮಿಯೊಳುಂಟೆ ಕುಮಾನುಷಾಂ ತರವಿನೊಳುಂಟೆ (ಚ) (4) ಮತ್ತಣಮೆಂತು ಬರ್ಕುಮೇ(ಕ,ಜ) ಮಂತಣಮೆಲ್ಲ (ಲ್ಲ) ಕಾಪ್ಪೆನೋ (ಚ) ಮತ್ತಣಮೆಂತು ಕಾಪ್ಪೆನೊ (ಛ) (5) ನೆಯೊಳ್ (ಚ) (6) ಸಂಸಾರಾಭಿಧಾನಂ ತೃತೀಯಾಧಿಕಾರಂ (ಕ, ಜ) (7) ಪಂಚಮಾಶ್ವಾಸಂ (ಖ, ಛ)

## || ಷಷ್ಠಾಧಿಕಾರಂ ||

## [1]— ಲೋಕಾನುಪ್ರೇಕ್ಷೆ —

*ಕಂ|| ಅಡಿ ವೇತ್ರಾಸನದಂತಿರೆ |
ನಡು ಝಲ್ಲರಿಯಂತೆ ಮೇಗು ಮುರಜ(ವ)ದ ತೆರದಿಂ ||
ಡೆಡೆವಿಡದೆ ಮೂಱು ಲೋಕ[2]ಮು |
ಮೊಡನನಿಲತ್ರಯದೆ ಸುತ್ತಿ ನಿಂದತ್ತಿತ್ತಂ || ೧ ||

ವ|| ಅ (ಇ) ಂತಾಗಿರ್ದ ಮೂಱುಂಲೋಕಮುಂ ಚತುರ್ದಶರಜ್ಜೂತ್ಸೇಧ ಪ್ರಮಾಣೋತ್ಸೇಧಮುಂ, ಸಪ್ತೈಕ ಪಂಚೈಕ ರಜ್ಜುವಿಸ್ತಾರಮುಮಾದಲ್ಲಿಯಧೋಭಾಗಸ್ಥಿತಂ ನರಕಂ. ಆ ನರಕದೊಳ್ ರತ್ನಪ್ರಭೆ ಶರ್ಕರಾಪ್ರಭೆ, ವಾಳುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆಯೆಂದಿಂತೇೞುಂತೆಱದುಗ್ರಭೂಮಿಯ ಪಟಲಂಗಳೊಳಗಣ ಮೆಯ್ಯೊಳ್ ತಲೆಕೆಳಗಾಗಿ(ರ್ದ) ಪೆರ್ಜೇನ[3] ಪುಟ್ಟಿಗಳಂತಿರ್ದ ಪುಟ್ಟ(ಅಟ್ಟು)ಗಳೊಳ್ ಪುಟ್ಟೆ [4]ಪಿರಿದುಪಾಪಮಂ ನೆರಪಿ ಹಿಂಸಾನಂದಮೃಷಾನಂದಸ್ತೇಯಾನಂದ ಸಂರಕ್ಷಣಾನಂದಮೆಂದು ಚತುರ್ವಿಧಮಾಗಿರ್ಕುಮಲ್ಲಿ.

---

* ಈ ಸಂಸ್ಕೃತ ಶ್ಲೋಕ ಟೀಕಾ ತಾತ್ಪರ್ಯಗಳು (ಕ, ಚ, ಜ, ಝ) ಪ್ರತಿಗಳಲ್ಲಿ ಮಾತ್ರ ಇವೆ—

ರತ್ನತ್ರಯಂ ಪೂರ್ವಭವಾನ್ತರೇ ಯೋ – ವ್ರತಂ ಪವಿತ್ರೀಕೃತವಾನಶೇಷಂ ||
ಕಾಯೇನ ವಾಚಾ ಮನಸಾಪಿ ಶುದ್ಧಂ – ತಂ ಮಲ್ಲಿನಾಥಂ ಪ್ರಣಮಾಮಿ ನಿತ್ಯಂ || ೧ ||

ಮಧ್ಯಾಂಶಃ ಪರಿತೋಽಪ್ಯನಂತವಿಯತೋ ಲೋಕಸ್ತ್ರಿವಾತಾವೃತಃ ||
ಪಂಚದ್ರವ್ಯಚಿತಃ ಪ್ರಕರ್ತೃರಹಿತೋ ನಿತ್ಯಃ ಸದಾಽವಸ್ಥಿತಃ ||
ಸಂಸ್ಥಾನೇನ ತು ಸುಪ್ರತಿಷ್ಠಕಸಮೋಽಸಂಖ್ಯಪ್ರದೇಶಪ್ರಮೋ |
ಮಧ್ಯಸ್ಥತ್ರಸನಾಳಿರತ್ರ ಭವಿನಾಽಸ್ಪೃಷ್ಟಂ ನ ದೃಷ್ಟಂ ಪದಂ || ೨ ||

ಟೀ|| ಪರಿತೋಽಪಿ–ಸುತ್ತಲುಂ, ಅನಂತ ವಿಯತಃ–ಅನಂತಮಪ್ಪಾಕಾಶದ, ಮಧ್ಯಾಂಶಃ–ನಟ್ಟನಡುವಣಭಾಗಂ, ಲೋಕಃ–ಲೋಕಮೆಂಬುದು, (ಅದುಂ) ತ್ರಿವಾತಾವೃತಃ–ಮೂರುಗಾಳಿಗಳಿಂದ ಸುತ್ತಲ್ಪಟ್ಟುದು, ಪಂಚದ್ರವ್ಯಚಿತಃ–ಉಱೂದಯ್ದು ದ್ರವ್ಯಂಗಳಿಂ ತೀವಿದುದು. ಪ್ರಕರ್ತೃರಹಿತಃ–ಬುದ್ಧಿವಂತನಿಂದ ಮಾಡಲ್ಪಟ್ಟುದಲ್ಲ; ಸ್ವಭಾವದಿಂದಿರ್ದುದು, ನಿತ್ಯಃ–ಕೇಡಿಲ್ಲದುದು, ಸದಾ–ಎಲ್ಲಾ ಕಾಲಂ, ಅವಸ್ಥಿತಃ–ಪೊಂದೆಡೆಯೊಳಿರ್ದುದು (ಮತ್ತೆ), ಸಂಸ್ಥಾನೇನ–ಆಕಾರದಿಂದ, ಸುಪ್ರತಿಷ್ಠಕಸಮಃ–ಮುಚ್ಚಳಮುಳ್ಳಪಡಿಗಮಂ ಪೋಲ್ವುದು. ಅಸಂಖ್ಯಪ್ರದೇಶಪ್ರಮಃ–ಅಸಂಖ್ಯಾತಪ್ರದೇಶಂಗಳ ಪ್ರಮಾಣಮನುಳ್ಳುದು, ಮಧ್ಯಸ್ಥತ್ರಸನಾಳಿಃ–ನಡುವಿರ್ದ ತ್ರಸನಾಳಿಯನುಳ್ಳುದು. ಅತ್ರ–ಈ ಲೋಕದೊಳು, ಭವಿನಾ–ಪುಟ್ಟುತಿರ್ಪ ಜೀವನಿಂ, ಅಸ್ಪೃಷ್ಟಂ–ಮುಟ್ಟಲ್ಪಡದ, ಪದಂ–ಎ (ಯೆ) ಡೆ, ನ ದೃಷ್ಟಂ–ಕಾಣಲ್ಪಡುವುದಿಲ್ಲ. "ಪಂಚದ್ರವ್ಯ ಪರಿಪೂರ್ಣಮಪ್ಪಾಕಾಶಪ್ರದೇಶಂ ಲೋಕ"ಮೆಂಬ ಲೋಕಾನುಪ್ರೇಕ್ಷೆ—(ಈ ಟೀಕೆ–ಕ ಪ್ರತಿಯಲಿಲ್ಲ)

---

(1) ಲೋಕತ್ವಾನು (ಕ,ಟ) (2) ಮು| ನೊಡ (ಟ,ಕ) (3) ಪುಟ್ಟಿಗಳೋಳಿಗಳಂ ಪೋಲ್ವ (4) ಪುಟ್ಟುವಲ್ಲಿಯಿಂತಪ್ಪವರ್ಗಳಿಂತೆಂಮೊಡೆ (ಕ, ಜ, ಛ)

ಚಂ|| ಭರ[1]ದೆ ತಗುಳ್ದ ರೌದ್ರಪರಿಣಾಮಮನುಹಾವಿಷಮಂತ್ಯಕಾಲದೊಳ್ |
ದೊರೆಕೊಳೆ ಸತ್ತವರ್ ನರಕಮಂ ಪುಗೆ ನಾರಕರಾಗಳೊರ್ವರೊ ||
ರ್ವರನತಿ [2]ಕೋಪದಿಂ ಬಿಡದೆ [3]ಖಂಡನ ಭೇದನ ತಾಡನಾದಿನಿ |
ಷ್ಠುರಕ(ತ)ರಮಪ್ಪ ದಂಡಣೆಯನೆಯ್ದುಪರೆಂಬುದನೇನೊ [4]ಕೇಳಿರೇ || ೨ ||

ವ|| ಕೇಳದಂತಲ್ಲಿಯ ದಂಡಣೆಗಳುಂ, ದುಃಖಂಗಳುಂ [5]ಸಾಮಾನ್ಯಂಗಳಲ್ಲವೆಂತೆಂದೊಡೆ:— ಪುಟ್ಟಿದಂದೆ ಪುರಾಣ[6]ನಾರಕರ್ಕಳ್ ಕಂಡು ತಮತಮಗೆ ತಂತಮ್ಮ ಮುನ್ನಿನ ಭವದೊಳ್ ಗೆಯ್ದ ಪಾತಕಂಗಳಂ ವಿಭಂಗಜ್ಞಾನದಿಂದಱದೋರೊ[7]ರ್ವರ (ರಂ) ಗೆ ಕರಂ ಮುಳಿದು ಮೂದಲಿಸಿ ಯಸಿಮುಸಲಕಣೆಯ [8]ಕಂಪಣನಾರಾಚಪರಶುತೋಮರಮು (ಭು) ಸುಂಡಿ ಪಿಂಡಿವಾಳ [9]ಮುದ್ಗರಗದಾಚಕ್ರತ್ರಿಶೂಲಾದಿ ಭಯಂಕರಾಕಾರಂಗಳಪ್ಪ ಮೂವ[10]ತ್ತೆರಡುಂ ತೆಱದಾಯುಧಂಗಳಿನೋರೊರ್ವರ *ನಿಱದುಂ, ತಱ[11]ದುಂ ಕೊಱದುಂ, ಮುಱದುಂ, ಪಱದುಂ, ಜಡಿದುಂ, ಬಡಿದುಂ, ಕಡಿದುಂ, ಪೊಡೆದುಂ, ಪಿಡಿದುಂ, ತಿದಿಯುಗಿದುಂ, [12]ಸುಗಿದುಂ, ಬಯ್ದುಂ, ಬಿಗಿದುಂ, ಬಗಿದುಂ, ತೆಗೆ[13]ದುಂ, ಕಾಯ್ದುಂ, ಉಗಿದುಂ, ಕೊಯ್ದುಂ, ಪೊಯ್ದುಂ, [14]ನೂಂಕಿಯುಂ, ಸೋಂಕಿಯುಂ, ಅವುಂಕಿಯುಂ, ಕಟ್ಟಿಯುಂ ಬೆಟ್ಟಿಯುಂ, ಮೆಟ್ಟಿಯುಂ, ಕುಟ್ಟಿಯುಂ, [15]ಸುರುಳ್ಚಿಯುಂ, ಮುರಳ್ಚಿಯುಂ, ಪೊರಳ್ಚಿಯುಂ, ಚುರ್ಚಿಯುಂ ಸೀಱದುಂ, ಪೋಱದುಂ, ಕಾರ್ದುಂ, ಪೀರ್ದುಂ, [16]ಆರ್ದುಂ, ಪಾರ್ದುಂ, ನೇರ್ದುಂ, ಕಿಱ್ತುಂ, ನೆಗಱದುಂ (ತೆಗೆದುಂ) ಇಂತನೇಕಪ್ರಕಾರದಿಂ ದಂಡಿಸೆ ಕನಲ್ದೊನಲ್ದು, ಬಱಲ್ದುಱಲ್ದು ಜೋಲ್ದು ನೇಲ್ದು ಸುಯ್ದು ಬಯ್ದು ಬೆಂದು ನೊಂದು ಕಂದಿ ಕುಂದಿ ಬೇಸತ್ತಾತಸತ್ತು ಮುಮ್ಮಲಂಮಱಗಿ ಸಹಜ ಶಾರೀರಮಾನಸಾಗಂತುಕಮೆಂಬ ನಾಲ್ಕುಂತೆಱದ ಮಹಾದುಃಖಂಗಳ್ [17]ಪೋಱ್ಮರನಂ ಕಿರ್ಚು

---

ಲೋಕಸ್ಸರ್ವೋऽಪಿ ಸರ್ವತ್ರ ಸಾಪಾಯಸ್ಥಿತಿರಧ್ರುವಃ ||
ದುಃಖಕಾರೀತಿ ಕರ್ತವ್ಯೋಮೋಕ್ಷ ಯೇವ ಮತಿಸ್ಸತಾಂ || ೩ ||

ತಾ|| ಎ(ಯ)ಲೆ ಜೀವನೇ, ನರನಾಗಸುರಮೆಂಬೀಲೋಕತ್ರಯದಲ್ಲಿ ಪ್ರವರ್ತಿಸುವ ಪ್ರಾಣಿಗಳಪಾಯಂಗಳೊಡಗೂಡಧ್ರುವಮಾಗಿರ್ಪ ಸ್ಥಿತಿಯಂ ನೋಡಿ ಮಹಾಪುರುಷರ್ ಮೋಕ್ಷ

---

(1) ಭರದಿ (ಕ,ಜ,ಟ) (2) ವೇಗದಿಂ (ಕ,ಜ) (3) ಛೇದನ (ಕ,ಜ,ಛ) (4) ಕಾಣಿರೇ (ಚ,ಛ) (5) ಸಾಮಾನ್ಯಮೇ (ಕ, ಜ) (6) ನಾರಕರ್ಕಳುಂತಮ್ಮಮುನ್ನಿನ (ಕ,ಜ) ನಾರಕರ್ಕಳುಂ ಮುನ್ನೆಗೆಯ್ದ (ಛ) (7) ರ್ವರಂ ಮೂದಲಿಸಿ ಮುಸಲ ಕಣೆಯ (ಕ, ಜ) ಶಿಲೀಮುಖಮುಸಲ (ಚ) (8) ಕಂಪಣಪರಶು (ಕ, ಜ) (9) ಮುದ್ಗರಾದಿ ಭಯಂಕರ (ಕ, ಜ) ಮುದ್ಗರ ಚಕ್ರತ್ರಿಶೂಲಾದಿ (ಛ) (10) ತ್ತೆರಡಾಯುಧದಿನೋರೊರ್ವರ (ಕ,ಜ) (11) ದುಂ ಪರಿದುಂಬಡಿದುಂ (ಕ, ಜ) (12) ಸುಗಿದುಂ ಬಗಿದುಂ (ಕ, ಜ) (13) ದುಂ ಬಿಗಿದುಂ ಕೊಯ್ದುಂ (ಕ,ಜ) (14) ಸೋಂಕಿಯುಂ, ನೂಂಕಿಯುಮವುಂಕಿಯುಂ (ಕ,ಜ) (15) ಸಾರ್ಚಿಯುಂ ಮಗುರ್ಚಿಯುಮುರ್ಚಿಯುಂ ಚುರ್ಚಿಯುಂ (ಕ, ಜ) ಸುರಳ್ಚಿಯುಂ ಮರಳ್ಚಿಯುಮುರ್ಚಿಯುಂ ಕಿರ್ಚಿನೊಳ್ ಪೊರಳ್ಚಿಯುಂ ಮುಗುಳ್ಚಿಯುಂ ಬರಿಗಳನುರ್ಚಿಯುಂ ನಾಲಗೆಯಂಕಿಱ್ತು ಮಾರ್ದುಂಪಾರ್ದುಂನೇರ್ದುಂ (ಕ, ಜ) (16) ಆರ್ದುಂ ನೆಗೞದುಂ ನಾಲ್ಕುಂದೆಸೆಯೊಳಮಿಂತನೇಕ (ಕ, ಜ) ಆರ್ದುಂಸಾರ್ದುಂ ಪೋಱದುಂನೇರ್ದುಂ ಸೀಱದುಮಿಂತನೇಕ (ಛ) (17) ಗಳೊಳ್ ಪೊಣ್ಮರನಂ ಕಿರ್ಚ್ಚುಳುರ್ಮಕೊಳ್ವಂತೆ (ಛ)

* ಇಲ್ಲಿ ಹೇಳಿರುವ ಇಱದುಂ ಮೊದಲಾದ ಅಸಮಾಪಕ ಕ್ರಿದಂತಗಳು ೩೨ ಆಯುಧಗಳಿಂದ ನಡೆವ ಕ್ರಿಯೆಗಳೆಂದು ತೋರುವುದು. ಆದರೆ ಒಂದು ಕ್ರಿಯೆಯು ಪ್ರಮಾದದಿಂದ ಬಿಟ್ಟುಹೋಗಿರುವುದು (೩೧ ಕ್ರಿಯೆಗಳು ಇವೆ)

ತಗುಳ್ದಂತೆ ಯೆಡೆವಱಿಯದೆಳುರ್ದು ಕೊಳೆ ಕಣ್ಣೆವೆಯಿಕ್ಕುವನಿತುಪೊೞ್ತುಪ್ಪೊಡಂ ಸುಖಮನಱಿ [1]ಯದುತ್ಕೃಷ್ಟದಿಂ ಮೂವತ್ತುಮೂಱುಸಾಗರೋಪಮಕಾಲಂಬರಂ ನವೆವರಿಂತು ನರಕಲೋಕ ದವ್ಯವಸ್ಥೆಯಂ ಸಂಕ್ಷೇಪದಿಂ [2]ಪೇೞ್ದೆನಿನ್ನು ಮಧ್ಯಮಲೋಕದಲ್ಲಿ—

ಕಂ|| ಅಮಿತದ್ವೀಪಸಮುದ್ರಾಂ |
ತಮಹಾಪ್ರ[3]ಖ್ಯಾತಮಾ ಸ್ವಯಂಭೂರಮಣೋ ||
ತ್ತಮವಾರಿಧಿಪರ್ಯಂತಂ |
ಸಮ[4]ಸ್ತತಿರ್ಯಂಚಮಿರ್ಪ ತಿರ್ಯಗ್ಲೋಕಂ || ೨ ||

ವ|| ಅಲ್ಲಿ[5]ಪುಟ್ಟಿದ ತಿರ್ಯಗ್ಗಾತಿ ಜೀವಂಗಳುಂ ತ್ರಸಸ್ಥಾವರಮೆಂದಿರ್ತೆಱನಕ್ಕುಂ. ಆ ತ್ರಸ ಜೀವಿಗಳುಂ ದ್ವೀಂದ್ರಿಯಾದಿ ವಿಕಳೇಂದ್ರಿಯಂ ಷಡ್ವಿಧಂ. ಸಕಳೇಂದ್ರಿಯಂ ಚತುರ್ವಿಧಂ. ಅಂತು ದಶವಿ[6]ಧಂ. ಸ್ಥಾವರಂಗಳೊಳ್ ಪೃಥಿವ್ಯಪ್ತೇಜೋವಾಯು ಸಾಧಾರಣವನಸ್ಪತಿಕಾಯಂ[7]ಗಳೆಂದು ಪ್ರತ್ಯೇಕಂ ಚತುರ್ವಿಧಂ. [8]ವನಸ್ಪತಿಕಾಯಂ ದ್ವಿವಿಧಂ. ಅನ್ತು ದ್ವಾವಿಂಶತಿಭೇದಮಕ್ಕುಂ ಅಲ್ಲಿ—

ಮ|| ಮನದೊಳ್ ನೀಲಕಪೋತಲೇಶ್ಯೆ ತೊಡರ್ದಾರ್ತಧ್ಯಾನ[9]ಮುಂ ಮಾಡೆ ಸ |
ತ್ತೆನಸುಂ ಮಾಣದನೇಕರೂಪಕದ ತಿರ್ಯಗ್ಗಾತಿಯೊಳ್ ಪುಟ್ಟಿ ಮ ||
ತ್ತೆನಿತಾನುಂ ತೆಱದಿಂ ವಿಘಾತಿಸೆ ಮಹಾಸಂಕ್ಲೇಶದಿಂದಾದ ವೇ |
ದನೆಯಿಂದಿರ್ಪುವು ಜೀವರಾಶಿ ಪಲವುಂ ಸಂತಾಪದಿಂ [10]ಪಾಪದಿಂ || ೪ ||

ವ|| [11]ಅಂತವು ಮುನ್ನಿನ ತಮ್ಮ ಮಾನಮಾಯಾ [12]ಕಷಾಯೋದ್ರೇಕದೊಳಾದಶುಭ ಪರಿಣಾಮದಿಂ ಪುಟ್ಟಿ ನವೆಯುತ್ತುಂ—

ಕಂ|| ಶೀತದಿನುಷ್ಣದಿನುತ್ಕಟ |
ವಾತದಿನನ್ಯೋನ್ಯಘಾತದಿಂ ತೀವ್ರರುಜಾ ||
ವ್ರಾತ[13]ದಿನತಿಕ್ಷುಧಾತೃ |
ಡ್ಜಾತದಿನಸುಸಮಿತಿ ಬಿಡದೆ [14]ನೋೞ್ಗುಂ ಸಾಗುಂ || ೫ ||

ವ|| ಮತ್ತ ಮಲ್ಲಿ ಪರವಶಮಾಗಿ ಕೆಲವು ಜೀವಂಗಳ್—

---

ದಲ್ಲಿಯೇ ಮತಿಯಂ ಮಾೞ್ಪುದು – ಎಂಬೀ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂ ಗೆಯ್ವೆನದೆಂತೆನೆ—ಅಡಿವೇತ್ರಾ (ಎಂಬ ಕಂದ ನಿರಂತರವಾಗಿದೆ)—

---

(1) ಯದೆ ದುಷ್ಕೃತದಿನುತ್ಕೃಷ್ಟಮಪ್ಪ (ಚ) (2) ಪೇೞ್ದುಮಿನ್ನುಂ (ಟ) ಪೇೞ್ದುಮಧ್ಯಮ (ಕ, ಜ) (3) ಖ್ಯಾಪಿತಸ್ವ (ಕ,ಜ,ಟ) (4) ಸ್ತಮಿಾತಿರಿಕಮಿರ್ಪ (ಕ,ಜ) ಮಿಂತಿರಿಕಮಿರ್ಪ (ಛ) (5) ಪುಟ್ಟಿ ತಿರಿವ ತಿರ್ಯಗ್ಗಾತಿ ಜೀವ ಜ (ನ್ಮಂ) ಲ್ಮಂಗಳು (ಛ) ತಿರಿದ.... ಜೀವಂಗಳುಂ (ಟ) ತಿರಿವ — (ಕ, ಜ) — (6) ವಿಧಂಗಳ್ (ಚ,ಛ) (7) ಗಳೊಂದೊಂದುಂ ಚತುರ್ವಿಧಂ ಪ್ರತ್ಯೇಕ ವನಸ್ಪತಿ ತ್ರಿವಿಧ ಮಂತು (ಕ, ಜ) (8) ಪತ್ಯೆಯ್ಕುಂ ಪನಸ್ಪತಿ (ಛ) ವಾಯುವನಸ್ಪತಿ ಸಾಧಾರಣ ಕಾಯಂಗಳೊಂದು (ಟ) ಕಾಯಂಗಳೊಂದು ಪ್ರತ್ಯೇಕಂ ಚತುರ್ವಿಧಂ, ವನಸ್ಪತಿ ಕಾಯಂ ದ್ವಿಧ (ಖ) (9) ದಿಂಕೂಡೆ (ಕ,ಜ,ಟ) (10) ತಾಪದಿಂ (ಖ,ಚ,ಛ) (11) ಅವು ತಿರಿಋಗ್ಗಾತಿಯೊಳ್ (ಚ) (12) ಕಷಾಯೋದ್ರೇಕಾಶುಭಪರಿಣಾಮ (ಛ) (13) ನಸಹ್ಯಕ್ಷುತೃಡ್ಜಾತದಿ (ಕ,ಜ,ಚ) (14) ನೋಯ್ಗುಂ, ಸಾಯ್ಗುಂ (ಕ, ಜ)

ಉ|| ಕಟ್ಟೆ [1]ತೊಡಂಕೆ ನೂಂಕೆ ಸುಡೆ [2]ಮರ್ದಿಡೆ ಚೆರ್ಚಿಸೆ ನೋಯೆ ಗಂಟಲಂ |
ಮೆಟ್ಟೆ ಪೊರಳ್ಚೆ ಪೇೞಿ[3] [3]ಬಿಡದೇೞಿ[3] [4]ತಗುಳ್ದುೞಿ[3] ಸುತ್ತೆ ಮುತ್ತೆ ಬೆ ||
ನ್ನಟ್ಟೆ ಬಲಲ್ಚೆ ಸಾರ್ದಿಱಿಸೆ [5]ಪೋರಿಸೆ ಪಾಱಿಸೆ ಬಯ್ಯೆ ಪೊಯ್ಯೆ ಬಾ |
ಯ್ವಿಟ್ಟತಿದುಃಖದೊಳ್ ನವೆಯುತಿರ್ಪವನಪ್ಪೊಡಮೇನೊ ಕಾಣದೇ || ೬ ||

[6]ವ || ಅಂತುಮಲ್ಲದೆಯುಂ—

ಕಂ|| ಎನಿತಾನುಂ ತೆಱದಿಂ[7]ದಂ |
ದನವರತಂ ಬೆಂದು ನೊಂದು [8]ಬೆಟ್ಟುಕ್ಕೆತ್ತುರ್ಪ ಕರಂ ||
ಕನಲುತ್ತಳಿವು[9]ತ್ತಲಿಲು |
ತ್ತೊನಲುತ್ತಗಿದಗಿದು [10]ನವೆಗುಮಾ ತಿರ್ಯಂಚಂ || ೭ ||

ವ|| ಈ ತೆಱದಿಂ ನವೆವ ತಿರ್ಯಗ್ಲೋಕದ ಜೀವರಾಶಿಗ[11]ಳೆಲ್ಲಮೆಲ್ಲಾ ಲೋಕದ ಜೀವ ರಾಶಿಗಳಂ [12]ನೋಡೆ ಕರಂ ಪಲವೆಂದು ಕಿಱಿದಱಿಳೊಳೆ ಪೇೞ್ದಂ. ಇನ್ನಾ ಮನುಷ್ಯಗತಿಯೆಂಬು ದದು ತಾಂ ಜಂಬೂದ್ವೀಪದ ಲವಣಸಮುದ್ರದ ಧಾತಕೀಷಂಡದ ಕಾಳೋದಕಸಮುದ್ರದ ಪುಷ್ಕರವರದ್ವೀಪಾರ್ಧಸ್ಥಿತಮಾನುಷೋತ್ತರ [13]ಮಹೀಧರಾವಧಿಯಪ್ಪುದು. ಅಲ್ಲಿ ಕರ್ಮಭೂಮಿ ಭೋಗಭೂಮಿ ಪ್ರಕಾರದಿಂ ದ್ವಿವಿಧಮಕ್ಕುಮಾ ಭೋಗಭೂಮಿಯೊಳ್—

[14]ಉಪಜಾತಿವೃತ್ತಂ— ಮದ್ಯಾಂಗ ತೂರ್ಯಾಂಗ ವಿಭೂಷಣಾಂಗ |
ಜ್ಯೋತಿ[15]ರ್ಗೃಹಂ ಭೋಜನ ಭಾಜನಾಂಗಂ ||
ಪ್ರದೀಪ ವಸ್ತ್ರಾಂಗ ವರಸ್ರಜಾಂಗಂ |
ದಶಪ್ರ[16]ಕಾರಾಸ್ತ್ರರವಸ್ತು ತತ್ರ || ೮ ||

(ಇದು ಸಂಸ್ಕೃತ ಶ್ಲೋಕ–ಇಲ್ಲಿ ಅನುವಾದಮಾಡಿದೆ)

ವ|| [17]ಮದ್ಯಾಂಗ, ತೂರ್ಯಾಂಗ, ವಿಭೂಷಣಾಂಗ, ಜ್ಯೋತಿರಂಗ, ಗೃಹಾಂಗ, ಭೋಜ ನಾಂಗ, ಭಾಜನಾಂಗ, ದೀಪಾಂಗ, ವಸ್ತ್ರಾಂಗ, ಮಾಲ್ಯಾಂಗಮೆಂಬ ದಶವಿಧಕಲ್ಪವೃಕ್ಷಂಗಳುಂ ಬಗೆದ ವಸ್ತುವನೀಯೆ ನಿರಂತರಂಭೋಗಭಾಗಿಗಳಪ್ಪುದಱಿಂ [18]ಧರ್ಮಕರ್ಮಾನುಷ್ಠಾನಮಿಲ್ಲ. ಮ್ಲೇಚ್ಛಖಂಡಂಗಳೊಳಂ ಧರ್ಮಮಿಲ್ಲ. ವಿನೀತಾಖಂಡದೊಳುಂಟು. ಅದಱೊಳ್

(1) ತೊಡಂಕಿ (ಛ) (2) ಮಟ್ಟಿಡೆ (ಛ) (3) ಬಿಡಿದೇೞಿ (ಟ) (4) ತಗುಳ್ದೆಳಸುತ್ತೆ (ಛ, ಟ) (5) ಪೋರ್ದಿಸೆ (ಜ) (6) ಈವಚನ (ಕ,ಜ,ಛ) ಪ್ರತಿಗಳಲ್ಲಿಲ್ಲ (7) ದಂತನ (ಛ, ಟ) (8) ಬಟ್ಟುಕ್ಕೆತ್ತೆ (ಛ) ಬೆಳ್ಕೆಂದು (ಟ) (9) ತ್ತೊಳಲುತ್ತೊನಲು ತ್ತೂ (ಛ) ತ್ತೊನಲುತ್ತನಿತನಿದಗಿದುಗಿದು (ಛ) (10) ಸುಗಿದು ನವೆವುದು ತಿರಿಕಂ (ಕ, ಜ) ನವೆವುವು ತಿರಿಕಂ (ಜ) ಸುಗಿದುನವೆಯುತ್ತಿರ್ಕುಂ (ಛ) (11) ಳೆಲ್ಲಾ ಲೋಕದ (ಕ,ಜ) (12) ನೋಡಿ ಪೊಲ್ಲವೆಂದು ಕಿಱಿದ (ಛ) ನೋಡೆಕರಂ ಫಲಮೆಂದು (ಕ, ಜ) (13) ಮಹೀಧರಾಧಿ (ಕ, ಜ) ಮಹೀಧರಮಾಗಿಯಪ್ಪುದಲ್ಲಿ (ಛ) (14) ವೃತ್ತ ಶ್ಲೋಕ (ಕ) ವೃತ್ತ (ಜ, ಛ) ಉಪಶೀತಿ (ಕ) (15) ಗೃಹಾಂಗಾಶನ (16) ಕಾರಂದ್ರುಮಮಸ್ತಿತತ್ರ(ಕ) ಧ್ವಮ (ಜ) ಕಾರಾಸ್ತರುಮತ್ಸುತತ್ರ(ಛ): ವಿಭೂಷಣಾಂಗ ಗೃಹಾಂಗ ಜ್ಯೋತಿರಂಗ ಭೋಜನಾಂಗ ದೀಪಾಂಗ ವಸ್ತ್ರಾಂಗ ಮಾಲ್ಯಾಂಗವಾದನಾಂಗವೆಂಬ ದಶವಿಧ (ಎಂಬ ಗದ್ಯ) (ಟ) (17) ವಾದ್ಯಾಂಗ (18) ಧರ್ಮಕರ್ಮಮಿಲ್ಲ (ಕ,ಜ)

ಚಂ|| ಸಮಸಮನಾಗೆ ಪಾಪಮುಮನೊಪ್ಪುವ ಧರ್ಮಮುಮಂ ನಿಜಕ್ರಮ |
ಕ್ರಮದೊಳೊಡರ್ಚಿ ನೆಟ್ಟನೆ ಶುಭಾಶುಭಮೆಂಬೆರಡುಂ ವಿಚಿಂತೆಗಳ್ ||
ಸಮನಿಸೆ[1] ಪೊರ್ದಿ ದುಃಖಸುಖಮಿಶ್ರಿತಮಪ್ಪ ಮನುಷ್ಯಲೋಕ[2]ದೊಳ್ |
ನಮೆವುತುಮಲ್ಪಮಪ್ಪ ಸುಖಮು(ದಿ)ಂ ಬೆರಸಿರ್ಪುವು ಜೀವರಾಶಿಗಳ್ || ೮ ||

ವ|| ಮಹಾಸಮುದ್ರದ ಕೆಲದೊಳೊಂದೊಂದು ಕಿಱಿದಾನುಂ ಕೊಳಂಗಳಿ[3]ರ್ಪಂತೆಲ್ಲಾ ಗತಿಗಳೊಳಂ ಕ್ಷೇತ್ರಪ್ರಮಾಣದಿಂ ಜೀವಸಮೂಹಂ ಪಿರಿಯವಪ್ಪೆಲ್ಲಾಗತಿಗಳ್ಗಂ ಮನುಷ್ಯಗತಿಯೇಕಿಱಿದಪ್ಪುದಱಿನದಂ [4]ಬೇಗಮಱಿಯೆ ಪೇಟ್ದಿಂ—ದೇವಲೋಕಮೆಂತೆನೆ ಮಂದರ ಮಹೀಧರದ ಕೆಳಗಣ ಚಿತ್ರೆಯೆಂಬ[5] ನೆಲದಿಂದಡಿಯ ವಜ್ರೆಯೆಂಬ ಭೂಮಿಯೊಳಗೆ ಅಸುರ [6] ನಾಗ ವಿದ್ಯುತ್ ಸುಪರ್ಣಾಗ್ನಿ ವಾತಸ್ತನಿತೋದಧಿದ್ವೀಪದಿಕ್ಕುಮಾರವಿಕಲ್ಪದಿಂ ದಶವಿಧಮಾಗಿರ್ದ ಭವನವಾಸಿಗರಿಂದಂ, ಅಸಂಖ್ಯಾತದ್ವೀಪ ಸಮುದ್ರಾಂತರ್ವರ್ತಿಗಳಪ್ಪ ರಮ್ಯಕ್ಷೇತ್ರಂಗಳೊಳ್ ವಸಿಯಿಸುವ ಕಿನ್ನರ ಕಿಂಪುರುಷಮಹೋರಗಗಂಧರ್ವಯಕ್ಷ ರಾಕ್ಷಸಭೂತ ಪಿಶಾಚ ಕುಲ ನಾಮಪ್ರಕಾರದಿಂ[7] ದಷ್ಟವಿಧಮಪ್ಪ ವಾನವ್ಯಂತರಿಗರಿಂದೀ ನೆಲದ ಮೇಲೆ ನೂಱು ತೊಂಬತ್ತುಯೋಜನಂ [8]ನೆಗೆದಲ್ಲಿ ನೂಱುಹತ್ತು ಯೋಜನಬಾಹುಳ್ಯಮಾಗಿ ಮೇರುವಿನ ಬಳಸಿಯುಂ ಒಂದು ರಜ್ಜುವಿನಗಲದಿಂ ಚಂದ್ರಾದಿತ್ಯಗ್ರಹನಕ್ಷತ್ರತಾರಕಾಭೇದದಿಂ ಪಂಚವಿಧಮಪ್ಪ ಜ್ಯೋತಿರ್ಲೋಕದ ದೇವರಿಂ, ಮೇರು ಶಿಖರದಿಂ ಮೇಗೇಕರಜ್ಜುಪ್ರದೇಶದೊಳಗಷ್ಟಪಟಲಾಂತರಿತಮಪ್ಪ ಸೌಧರ್ಮೈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮಬ್ರಹ್ಮೋತ್ತರ ಲಾಂತವಕಾಪಿಷ್ಠ ಶುಕ್ರಮಹಾಶುಕ್ರ ಶತಾರಸಹಸ್ರಾರಾನತ ಪ್ರಾಣತಾಚ್ಯುತ ವಿಕಲ್ಪದಿಂ ಷೋಡಶ ವಿಮಾನಪಙ್ಕ್ತಿಗಳೊಳಿರ್ಪ ಕಲ್ಪವಾಸಿಗರಿಂ, ಅಲ್ಲಿಂ ಮೇಲೆ ನವಗ್ರೈವೇಯಕ, ನವಾಣೂತ್ತರೆ, ಪಂಚಾಣೂತ್ತರೆಗಳೊಳಿರ್ಪಹಮಿಂದ್ರರ್ಕಳಿಂದಯ್ದು(ತ)ತೆಱನಕ್ಕುಂ, ಇಂತಲ್ಲಿ ಪುಟ್ಟುವರ್—

ಕಂ|| ಪಿರಿ[9]ದಪ್ಪ ಧರ್ಮದಿಂ ಕರ |
ಮರಿದಪ್ಪ [10]ತಪಂಗಳಿಂ ಸಮಾಧಿಯ ಫಲದಿಂ ||
ಸುರಲೋಕದಲ್ಲಿ ಪಾಸಿನ |
ಪೊರೆಯೊಳ್ ಸಂಭವಿಸಿ ದಿವ್ಯದೇ[11]ಹಿಗಳಪ್ಪರ್. || ೯ ||

---

(1) ಪೊಂದಿ (ಕ, ಜ) ಪೋಗಿ (ಛ) (2) ದೊಳನುಪಮ ಮಲ್ಯ (ಖ) (3) ರ್ಪಂತೆಲ್ಲಾಗತಿರ್ಗಳೊಳ್ ಕ್ಷೇತ್ರ (ಕ) ತೆಲ್ಲಾಗತಿಗಳೊಳಂ ಮನುಷ್ಯಗತಿಯೇ ಕಿಱಿದು (ಜ) ರ್ಪಂತೆ ಕ್ಷೇತ್ರಪ್ರಮಾಣಜೀವಸಮೂಹದಿಂ ಪಿರಿಯವಪ್ಪಿಪ್ಪಗತಿಗಳಂ ಮನುಷ್ಯಗತಿಯೇ (ಟ) (4) ಬೆಗ (ಛ, ಜ) (5) ನೆಲದಡಿಯ (ಕ, ಜ) (6) ನಾಗಸುಪರ್ಣ ದ್ವಿಪೋದಧಿಸ್ತನಿತ ವಿದ್ಯುದ್ದ್ವೀಪಾಗ್ನಿ ಕುಮಾರಾಭಿಧಾನ ಕುಲವಿಕಲ್ಪದಿಂ (ಟ) (7) ದಿಂದೆಂಟು ವಿಧದಿನಿರ್ಪ (ಕ, ಜ) (8) ನೆಗೆದು ಪೋದಲ್ಲಿ ನೂಱಿಯ್ವತ್ತು ಯೋಜನ ಬಹುಳಮಾಗಿ (ಚ) (9) ದಾಗುವ ಧರ್ಮದ (ಕ) ಪಿರಿಪಿರಿದಾಗುವ ಧರ್ಮದ (ಚ) (10) ತಪಸ್ಸಮಾಧಿಯ (ಟ) ಸತ್ಯಮಾಧಿಯ (ಕ, ಜ) ದಾಗುವ ತಪಸ್ಸಮಾಧಿಯ (11) ದೇಹಜರಪ್ಪರ್

ವ|| [1]ಅಂಡಜ, ಪಿಂಡಜ, ವಾಳಜ, ವಲ್ಕಜರೋಮಜಮೆಂಬಯ್ದುಂತೆಱದ [2]ಪಾಸಿನ ಪೊರೆಯೊಳ್ [3]ಪುಟ್ಟಿದಂತರ್ಮುಹೂರ್ತದಿಂ ಷೋಡಶಾ[4]ಭರಣ ಭೂಷಿತರಾಗಿ ನವ[5]ಯೌವನ ವಯಸ್ಕರಾಗಿರೆ ಪರಿವಾರ[6]ದೇವರ್ಕಳ್ ಬಂದು ನಾನಾ [7]ವಿಧಾತಿಶಯವಸ್ತುಗಳಿಂದೋಲಗಿಸೆ—

ಉ|| ನಚ್ಚುವ ರತ್ನದಿಂ ಸಮೆದ ಮಾಡ[8]ದೊಳೊಪ್ಪುವ ದಿವ್ಯಶಯ್ಯೆಯೊಳ್ |
ಮೆಚ್ಚಿದ ವಸ್ತುಗಳ್ ತಮಗೊಡಂಬಡೆ ಬಂದಿರೆ ನಿಚ್ಚ[9]ಮಚ್ಚಿಯೊಳ್ ||
ಮೆಚ್ಚುವ ಮೆಚ್ಚ ನಿಚ್ಚಯಿಸುವಚ್ಚರಕನ್ನೆಯರೊಳ್ ಸರಾಗದಿಂ |
ಬಿಚ್ಚತ[10]ಮಾಗಿ ಕೂಡಿ ಸುಖಮಿರ್ಪರನಿಂದಿತದೇವಲೋಕದೊಳ್ || ೧೦ ||

ವ|| ಅದಲ್ಲದೆಯುಂ—

ಕಂ|| ಕಲ್ಪಕುಜಸಮಿತಿ ತೊಳಗುವ |
ನಲ್ಪ ಫಲ[11]ಪ್ರಗುಣಿತನೂತ್ನ ಚಿಂತಾಮಣಿ ಸಂ ||
ಕಲ್ಪಮನೀಯುತ್ತಿರೆ [12]ಸಲೆ |
ಕಲ್ಪಾಯು[13]ವಿನೊಡೆಯರಾಗಿ ಸುಖದಿಂದಿರ್ಪರ್ || ೧೧ ||

ವ|| ಅವರ್ಗಳ್ ಅಣಿ[14]ಮ ಮಹಿಮ ಗರಿಮಲಘಿಮ[15]ಪ್ರಾಪ್ತಿ ಪ್ರಾಕಾಮ್ಯಮೀಶಿತ್ವವಶಿತ್ವ (ಕಾಮರೂಪತ್ವ ?)[16]ಮೆಂಬಷ್ಟೈಶ್ವರ್ಯದೊಳ್ ಕೂಡಿ ಸುಖಮಿರ್ಪರ್. ಎಂದು ದೇವಲೋಕದ ಸ್ಥಿತಿಯನಿನಿಸಾನುಮಱಿದು ಪೇಳ್ದಂತಪ್ಪ ಮೂಱುಂಲೋಕದ ತುದಿಯೊಳ್ ನಾಲ್ವತ್ತಯ್ದು ಲಕ್ಷ[17]ಯೋಜನ ವಿಸ್ತಾರದಿನಷ್ಟಯೋಜನ ಬಾಹುಳ್ಯದಿಂ ಶುದ್ಧಸ್ಫಟಿಕ(ರತ್ನ)ಮಯಮಾಗಿರ್ದ ಸಿದ್ಧಕ್ಷೇತ್ರದಲ್ಲಿಗೆ—

ಚಂ|| ಪರಮತಪೋನಿಯೋಗಸಹಿತರ್ ಮಹಿತರ್ ನೆಗಳ್ದಿರ್ದ ಷೋಡಶೋ |
ತ್ಕರ ವ(ತ)ರ ಭಾವನಾನ್ವಿತರನಿಂದಿತರೂರ್ಜಿತರಾರ್ಜಿತವ್ರತರ್ ||
ನಿರುಪಮ[18]ಋದ್ಧಿ ಶುದ್ಧಪರಿಣಾಮ ವಿಶೇ[19]ಷರಶೇಷಕರ್ಮದಿಂ |
ವಿರಹಿತರಾಗಿ ಪೋಗಿ [20]ನೆಲಸಿರ್ದರಸಂಚಳ ಸಿದ್ಧಭೂಮಿಯೊಳ್ || ೧೨ ||

ವ|| ಕಿಂಚಿದೂನ [21]ಚರಮ ಶರೀರ ಪ್ರಮಾಣದೊಳ್ ಅಶರೀರ ಜೀವ ಘನಾಕಾರದಿನನನ್ತಜ್ಞಾನಾನನ್ತದರ್ಶನಾನಂತವೀರ್ಯ ಸೂಕ್ಷ್ಮತ್ವಾವಗಾಹನಾಗುರು ಲಘುತ್ವ ಕ್ಷಾಯಿಕ ಸಮ್ಯಕ್ತ್ವಾವ್ಯಾಬಾಧಮೆಂಬೆಂಟುಂಗುಣಂಗಳನುಳ್ಳ ಸಿದ್ಧಪರಮೇಷ್ಠಿಗಳಿರ್ಪ ಮೋಕ್ಷಪದವಿಯಂ ಪಡೆವ ಕರ್ಮಕ್ಷಯ ಕಾರ್ಯಮುಮಂ ಪೇಳ್ದು ಇಂ ಮೂಱುಂ ಲೋಕದೊಳಗೆ ಮಧ್ಯಮಲೋಕದೊಳಿರ್ದೀ

(1) ಅಂತುಂಅಂಡಜ ಪುಂಡಜ ವಾಳಜ (ಛ) (2) ಪಾಸುಗಳ (ಕ) ಯ್ದುಂಪಾಸಿನ (ಟ) (3) ಪುಟ್ಟುವಂ (ಕ,ಚ) (4) ತನು ಹಸ್ತಾಭರಣ (5) ಯೌವನ ಪುರಸ್ಸರನಾಗಿ ಪರಿವಾರ (6) ದೇವಿಯರ್ಕಳ್ (ಕ, ಟ) (7) ವಿನೋದದೊಳತಿಶಯ (ಕ,ಚ) (8) ದಿನೊಪ್ಪು (ಕ,ಟ) (9) ಮತ್ಥಿ (ಟ) (10) ವಾಗಿ ಪೋಗಿ ಸುಖ (ಕ,ಚ,ಟ) (11) ಪ್ರಗುಣ (ಗ,ಟ) (12) ನಿಲೆ (ಕ,ಟ) (13) ಯುವನೊಡೆ (ಕ, ಟ) (14) ಮಾ........ ಘಿಮಾ........ (ಕ,ಟ) (15) ಪ್ರಾಪ್ತಿಪ್ರಾಗಲ್ಭ್ಯ ಪ್ರಾಕಾಮ್ಯ(ಕ,ಚ) (16) ಮೆಂಬಷ್ಟವಿಧಗುಣೈಶ್ವ ರ್ಯೋಪೇತದೊಳ್ ಕೂಡಿರ್ಪರ್ (ಕ,ಟ,ಚ) (17) ಯೋಜನ ಬಾಹುಳ್ಯದಿಂ ಶುದ್ಧ (ಚ,ಜ) (18) ತತ್ತ್ವ (ಕ) ಸಿದ್ಧ (ಚ) ರುದ್ಧಿ (ಗ) ತೇಜ(ಟ) (19) ಷದ ಕರ್ಮದಿಂದೆಯುಂ (ಕ,ಗ) ಷಕರಷ್ಟಕರ್ಮ (ಘ,ಟ) (20) ಸುಖಮಿರ್ಪರನಿಂದಿತ ಸಿದ್ಧಲೋಕದೊಳ್ (ಟ) (21) ಪೂರ್ವ (ಟ)

ಮನುಷ್ಯಗತಿಯೊಳಲ್ಲದೆಲ್ಲಿಯುಂ ಸುಗತಿಯಲ್ಲಪ್ಪುದಱಿಂದೆಲ್ಲಾ ಗತಿಗಳ್ಗಂ ಮನುಷ್ಯಗತಿಯಗ್ಗಳ ಮಪ್ಪುದಲ್ಲಿಯುಂ—

ಕಂ|| ಕರಮಗ್ಗಳಮವು ವಸ್ತುಗ |
[1]ಳೆರಡೆರಡೆ ವಿಶುದ್ಧಮಪ್ಪ ತಪಮುಂ ಶ್ರುತಮುಂ ||
ಧರದಿನವಂ[2]ತಾಳ್ದಿದರ್ಗಂ |
ಗರಿದೆ ನೆಗಲ್ದಿಂದ್ರಗತಿಯು[3]ಮಾ ನಿರ್ವೃತಿಯುಂ || ೧೩ ||

ವ|| [4]ಅಂತೆ ಮುಕ್ತಿಶ್ರೀಯಂ ಪಡೆಯಲಾರ್ಪರ್ ತಪಮುಂ ಶ್ರುತಮುಮಿಮೆರಡುಮೆಯ್ಯೊಳ್ ದೊರೆಕೊಂಡು ನೆಗಲ್ವಂಗೆ ಜಯಶ್ರೀಯಂ ಪಡೆ[5]ಯಲಾರ್ಪರ್ ಕೆಯ್ದುಂ ಬಲಮುಂ ದೊರೆ[6]ಕೊಂಡು ಪಗೆಯಂ ಸಾಧಿಸುವಂಗೆರಡುಂ [7]ಶ್ರೀಗಳುಂ ಕೂಡಿ ಬರ್ಕುಂ. ಮತ್ತಮಿಮಾ ಲೋಕ[8]ದೊಳ್ ಪಾರತ್ರಿಕ ಮೈಹಿಕಮೆಂಬೆರಡುಂ ಕಾರ್ಯಂಗಳ್ಗೆ ಪ್ರಧಾನ[9]ಕಾರಣಮಪ್ಪ—

ಚಂ|| ಅಱಿತದೊಳೊಂದಿದೊಂದು ತಪಮುಂ ಸುಜನತ್ವದೊಳೊಂದಿ ಪೆಂಪಿನೊಳ್ |
ನೆಱೆದಱಸುಂ ಜಗಂಗ[10]ಳೋಗಗ್ಗಳಮಿಂತೆರಡಲ್ಲಿ ರಾಜ್ಯಮುಂ ||
ತೊಱೆದು ತಪಕ್ಕೆ ಬರ್ಪ ಬರವುತ್ತಮಮೊಳ್ತಪಮಂ ಬಿಸುಟ್ಟು ಬಂ |
ದಱಕೆಯ ರಾಜ್ಯದತ್ತೆಱಗುವಂದ[11]ದು ಕಷ್ಟಮನಿಷ್ಟಮೆಲ್ಲಿಗಂ || ೧೪ ||

ವ|| ಮುಱುಗಿಸಿದ ಪಾಲಂ ಖಂಡಶರ್ಕರೆಯುಮುಂ ಬಿಸುಟ್ಟು[12]ಳೆಗಾಸೆಗೆಯ್ವಂತೊಳ್ಪಿತಪ್ಪ ತಪಮಂ ಶ್ರುತಮುಮಂ ಬಿಸುಟ್ಟು[13] ರಾಜ್ಯಕ್ಕಳಿವುದು ಮರುಳ್ತನಂ – [14]ಅಳಿಪಿಂಗಮಾರ್ಪರ್ [15]ಗುಣಕ್ಕ ಮಾವುದಂತರಂ ?—

ಕಂ|| ಪರಮಾಣುಕಿಱಿದು ಗಗನಂ |
ಪಿರಿ[16]ದೆಂಬರ್ ಕಂಡರಿಲ್ಲ ದೀನತೆ ಕಿಱಿದಾ ||
ಪರಮಾಣುಗೆ ಗಗನಕ್ಕಂ |
ಪಿರಿದಭಿಮಾನಮೆ ದಲೆಂದು [17]ನುಡಿವರ್ ಕಂಡರ್ || ೧೫ ||

ವ|| ಎಲ್ಲವಱಿಂ ಕಿಱಿದಪ್ಪ ಪರಮಾಣು[18]ವಿಂಗಮಾ ದೀನತೆ ಕಿಱಿದು. ಎಲ್ಲವಱಿಂ ಪಿರಿದ ಪ್ಪಾಕಾಶಕ್ಕೆ ಅಭಿಮಾನಮೇ ಪಿರಿದು, ಎಂದು ಬಗೆದಳಿಪಂ ತೊಱೆದು ಪೆಂಪಂ[19]ತಳೆವುದು. ಆತನೆನಸುಂ ದೋಷಮನಾಗಲೀಯದಿರ್ಪು[20]ದೇಕೆಂದೊಡೆ :—

---

(1) ಳೆರಡೆವಿಶುದ್ಧ್ಯಮಪ್ಪ (ಛ) (2) ತಾಳ್ದಿದವಂ (ಕ,ಜ) ತಾಳ್ದಿರ್ದೊಂ ಅರಿದೆ (ಛ) (3) ಯುಮುರು (ಕ,ಜ,ಛ) ಮುಂನಿರ್ವೃತಿಯುಂ (ಟ) (4) ಅಂತು (ಕ, ಜ, ಛ) (5) ಯಲ್ಕಾರಣಮಪ್ಪಾ (ಜ, ಝ) ಣಮಪ್ಪ ಕೆಯ್ದು (ಛ) (6) ಕೊಂಡೆಸಾಧಿ (ಕ,ಜ) (7) ಶ್ರೀಯೊಳ್ (ಜ) (8) ಳೈಹಿಕಾಮುತ್ರಿಕ (ಜ) (9) ಕಾರ್ಯಂಗ ಳಪ್ಪ (ಜ) (10) ಳೊಳಿಂತೆರಡಗ್ಗಳಮಲ್ಲಿ (ಕ) ಳೀತೆರದಗ್ಗಳಮಲ್ಲಿ (ಜ) ಳಗಿಂತೆರಡಗ್ಗಳಮಲ್ಲಿ (ಜ) ಳಗಗ್ಗಳ ಮಂತೆರ (ಛ) (11) ಮನಿಷ್ಪ ಮನಿಷ್ಪಮೆಲ್ಲಿಗಂ (ಜ) (12) ಳೆಯನಾಸೆ (ಕ, ಜ) ಳೆಗಾಸೆವಡುವ ಗಾವಿಲನಂ ತೊಳ್ಪಿ (ಛ) (13) ಟ್ಟರಸಿಂಗಾಸೆವಡುವುದು (14) ಅರಿವಿಂಗಮಳಿಪಿಂಗಮಾವು (ಕ, ಜ) (15) ಗುಣವಿಂ ಗಮಾ (ಜ) (16) ದೆಂಬಂ ಕಂಡನಿಲ್ಲದಿನಿತೀಕಿರಿ (ಕ) ಬೊಂ ಕಂಡನಿಲ್ಲದಿನತೆ (ಜ) (17) ನುಡಿವಂ ಕಂಡಂ (ಕ,ಟ) ಕಂದಂ (ಖ,ಛ) (18) ವಿಂಗಳಿಪೆ ಪಿರಿ (ಕ) (19) ತಾಳ್ದುವುದು ಪೆಂಪಂತಾಳ್ದಿದಾತನೆಂತು ದೋಷಮ (ಕ,ಜ,ಛ) (20) ದೇಕೆಂಬ (ಕ,ಜ) ದೇಕೆನಾಂ (ಛ)

ಮ॥ ಕಿಱಿದಾನುಂ ಕಱೆಯಿಂ [1]ಕಳಂಕಿ ಶಶಿ ತಾನೆಂಗುಂ ಜನಂ ರಾಹು ಮೆಯ್ |
ನೆಱೆಯೆಲ್ಲಂ ಕರಿದಾಗೆಯುಂ ಕಱೆಯುದರ್ಕರ್ಣಂಟೆಂಬರೇ ಪಾಪದ ||
ತ್ರೈಱಗಿದರ್ಗಾತನ ದೋಷದುರ್ವಿನಮನಾರ್ ಕಾಣ್ಬರ್ ಗುಣಶ್ರೇಣಿಗಳ್ |
ತುಱುಗಿರ್ದಂಗಿನಿತೊಂದು (ಸಾನು) ದೋಷಮನದಂ ಬೆಟ್ಟಾಗೆ ಕಾಣ್ಗುಂ ಜನಂ || ೧೬ ||

ವ॥ ಅವಱಿಂ ಗುಣದೊಳ್ [2]ಪ್ರಭುವಪ್ಪಾತಂ ದೋಷಕ್ಕಂಜಿ ನೆಗೞ್ವುದು.

ಕಂ॥ ತೊಱೆದು ಪರಿಗ್ರಹಮೆಲ್ಲಮ |
ನಱಿದು ತಪಂಗೆಯ್ವನಗ್ಗಳಂ ತಪದೊಳ್ಪಂ ||
ತೊಱೆದು ಮತಿಮಱೆದು ಪೞಿಯಂ |
ಮೆಱೆದು ಗುಣಂಗೆಟ್ಟ ದುಷ್ಟನವನೆ [3]ನಿಕೃಷ್ಟಂ || ೧೭ ||

ವ॥ ಪರವಿಯೊಳ್ ತೀವಿದ ಪಾಲೆಲ್ಲಂ [4]ಇನಿಸಾನುಂ ಪುಳಿ ಪೊರ್ದಿದನಿತಱೊಳೆ ಪುಸ್ಸಿನ ಗು[5]ಣಮುಂ ಸವಿಯುಂ ಕಿಡುವಂತೆ ಪೊಲ್ಲಮೆ ಕಿಱಿದಾದೊಡಂ ಮುನ್ನುಳ್ಳ ಗುಣಮನೆಲ್ಲಮನೞಿಗುಂ [6]ಎಂದು ದೋಷಕ್ಕಂಜಿ ನೆಗೞ್ವುದು. ಎಂದಿಂತು ಸಾಮಾನ್ಯ ಜೀವಂಗಳ್ಗೆಲ್ಲಂ ಪೇೞ್ದು ತಪಂ [7]ಗೆಯ್ದು ಬಿಡುವರ ಕೇಡಿಂಗಂ ಕರಮು[8]ಬಿಲ್ದ (ಬಿ) ಲ್ದು ಮತ್ತಮಿಂತೆಂಗುಂ—

ಮ॥ ನೆಲವಾಸಿಂ ನೆಲದತ್ತ ಬೀೞ್ವಳವಿಗಂ ಕೂಸಂಜುಗುಂ ನಾಡೆಯುಂ |
[9]ಫಲಮಂ ಪೂಣ್ದು ತಪಕ್ಕೆ ವಂದು ತಪದಿಂ ಮೇಲಾದ ಲೋಕಂಗಳೊಳ್ ||
ನೆಲೆಯಪ್ಪಂತಿರೆ ಮಾಡದತ್ತಣಿ[10]ನಧೋಭಾಗಕ್ಕೆ ಬೀೞ್ತರ್ಪುದ |
ರ್ಕೆಲೆ ನೀನಂಜಲೆಯಲ್ತೆ ಯೇಂ ಕಲಿಯೆಯೋ[11]ದೀನಾತ್ಮ ದೀನಕ್ರಿಯಾ || ೧೮ ||

ವ॥ ಭಯಮುನಱಿಯದ [12]ಪಸುಮಕ್ಕಳುಂ ನೆಲವಾಸಿಂದಂ ನೆಲಕ್ಕೆ ಬೀೞ್ವನಿಕರ್ತರ್ಗಂ[13]ಜು ಗುಮೆಂದೊಡೆ, ಸಂಸಾರದ ಭಯಮುನಱಿದು ತಪಂಗೊಂಡು ತಪದಿಂ[14]ಮೇಲಾದ ಲೋಕಂಗಳೊ ಳಿರ್ಪಾಯುಷ್ಯಮಂ ಕಟ್ಟಿರ್ದ[15]ಗಾಧವಪ್ಪಧೋಲೋಕಕ್ಕೆ ಬೀೞ್ತರ್ಪುದರ್ಕಂಜು[16]ವೆಯಲ್ತೆಲೆ ತಪಸ್ವಿ [17]ನಿನ್ನಿಂ ಕಲಿಗಳಾರೆಂದು ತೆಗೞ್ದು ಮತ್ತ[18]ಮಿಂತಲ್ತೆ—

---

(1) ಕಳಂಕತಾನೆಂಗುಂಜನಂ (ಕ) ಜಗಂ (ಕ,ಛ) (2) ಪ್ರಭವನಪ್ಪನೆ (ಕ, ಜ) ಪ್ರಯತನಪ್ಪಾತಂ (ಚ) (3) ಕನಿಷ್ಠಂ (ಕ, ಛ) ನೇಕಷ್ಟಂ (ಜ) (4) ಇನಿತಾನುಂ (ಜ) (5) ಗುಣಮೆಲ್ಲಂ ಕಿಡುಗುಂ (ಚ) (6) ಎಂದಂಜಿ (ಕ,ಜ) (7) ಗೆಯ್ವರ (ಕ,ಜ,ಖ) (8) ರಮಬಿಲ್ದಿಂತೆಂಬರ್ (ಛ) ದಿಂತೆಂಬಾ (ಕ,ಜ) (9) ಛಲ ಮಂಮಾಣ್ಕು (ಕ,ಜ) (10) ನಧೋಲೋಕಕ್ಕೆ (ಕ,ಜ) (11) ಹೀನಾತ್ಮ ಹೀನಕ್ರಿಯಾ (ಕ, ಚ) (12) ಪಸು ಗೂಸುಗಳುಂ (ಕ,ಜ) ಪಸುಗೂಸು (ಛ) (13) ಮಂಜುವರೆಂದೊಡೆ (ಕ, ಜ) (14) ಮೇಗಾದ ಲೋಕಕ್ಕಾಯು (ಕ,ಜ) (15) ಘಾತ (ಟ) (16) ಜುವೆಲೆತಪಸ್ವಿ (ಕ,ಜ) (17) ನಿನ್ನನ್ನರಾರ್ಕಲಿಗಳೆಂದು (ಕ, ಚ) ನಿಣ್ಣಿಂಕಲಿಗ ಳಾರುಮಿಲ್ಲೆಂದು (ಜ) (18) ಮಿಂತೆಂಬರ್ (ಚ)

ಮ|| [1]ಕ್ರಮದೊಳ್ಪಿಂಗೆ ಗೃಹಸ್ಥರೀ[2]ವರುಣಿಸಂತರ್ಕಂ ತಗುಳ್ದಿರ್ದ ಮೆ |
[3]ಯ್ಯಿಮದಲ್ತೆಂದವರೊಪ್ಪಿ ಕೊಳ್ವ[4]ರದುವುಂ ಸರ್ವೋಪಕಾರಕ್ಕೆ ಸಂ ||
[5]ಯಮಮಿಂತಪ್ಪೆಡೆಯಲ್ಲಿ ಪುಟ್ಟುವುದು ರಾಗದ್ವೇಷ[6]ಮೇಂ ಪೆರ್ಚಿದ |
ಕ್ರಮದೇ(ದಿ)ಂ ಬಲ್ಲಿದ[7]ನಾವನೋ ಕಲಿ[8]ಯುಗ ಪ್ರಖ್ಯಾತರಾಜೇಶ್ವರಂ || ೧೯ ||

ವ|| ವಿಷಯಂಗಳೆಲ್ಲಮಂ ಗೆಲ್ದು ಗೆಲ್ಲಂಗೊಂಡಿರ್ದ ತಪಸ್ವಿಯೆಂಬ ಬಲ್ಲಾಳುಮಂ ಪೊರ್ದಿ ಸೋಂಕುವ (ಕರ್ಮಂಗಳುಂ) ಕಲಿ[9]ಕಾಲಮೆಂಬತಿಪರಾಕ್ರಮಿಯಿ(ಯು)ಂ ಬಸನಕ್ಕೆ ಸೋಲ್ತು ಪರಿಗ್ರಹಭಾರಾಕ್ರಾನ್ತನಾಗಿರ್ದೀಱದರನೇಗೆಯ್ಯನೆಂದು [10]ಬಗೆದು ಗೃಹಸ್ಥರ್ [11]ನೀಮುಂ ಬೆರ್ಚ[12]ದಿರ್ಪಿರೆಂಬುದೇನೋ !

ಕಂ|| ಕೇಡಿನೊಳಪ್ಪುದು ದುಃಖಂ |
ನಾಡೆ ಸುಖಂ ಲಾಭದಿಂದಮೆಂಬುದನಱಿದುಂ ||
ನೋಡಿರೆ ಲಾಭಮನೊಲ್ಲದೆ |
ಕೇಡೆಯ್ದು[13]ಲ್ ಬಗೆ[14]ವಿರಿದುವೆ ಚೋದ್ಯಂ ಜಗದೊಳ್ || ೨೦ ||

ವ|| ಪಣದ ಕೇಡು ದುಃಖಮಂ ಮಾಡುಗುಮೆಂದೊಡೆ ಗುಣದ[15]ಕೇಡಿಂದಪ್ಪ ದುಃಖಂ ಸಾಮಾನ್ಯ(ಮಕ್ಕು)ಮೆ ? ಕೆಮ್ಮನಾಲಸ್ಯ[16]ಮಂ ಮಾಡಿ ಕೆಟ್ಟರಕ್ಕಟಾ ! ಕಲಿ[17]ಯುಗದುಗ್ರತೆಯಂ [18]ಬಗೆಯಿರಾಗದೆ

ಮ|| ಬಿಸುಟೇ ಸಂಸೃತಿಹೇತುವಪ್ಪ ಪಲವುಂ ದೋಷಂಗಳಂ ಮೆಲ್ಪಿನಿಂ |
ದೊಸೆದೊಪ್ಪಿರ್ದ ಮಹಾತಪೋಧನರೊಳಂ ತಂತಮ್ಮೊ[19]ಳೊಂದೊರ್ವರೊಳ್ ||
ನಿಸದಂ ಬೆಕ್ಕಿನ ಮೂಷಕಂಗಳೆಡೆ[20]ಯೆಂತಂತಾಗೆ(ಗಿ)ಮಾಡಿರ್ಕುಮೇಂ |
ಮಸಗಿತ್ತೋ ಕಲಿಕಾಲರಾಜನ ಮಹಾತ್ಯುಗ್ರಪ್ರತಾಪಾನಳಂ || ೨೧ ||

ವ|| ತಪೋಧನರೆಂಬ ಮಹಾಸಮುದ್ರಮುಮಂ [21]ಶೋಷಿಸುವ ಕಲಿಕಾಲರಾಜನ ಮಹಾ ಪ್ರತಾಪಾಗ್ನಿ ಗೃಹಸ್ಥರೆಂಬ [22]ಬೆಳ್ಗಂಡರುಮನುಱಿಯಲೀಗುಮೆ ? ಬೇಗಮಿಾ ಕಲಿಕಾಲದೊಳ್ ಗುಣವಂತ[23]ನಾಗಿರ್ಪುದೊಳ್ಳಿತ್ತೆನ್ನಾ !—

---

(1) ತಮದೊ (ಕ, ಚ) ತಪದೊ (ಜ) (2) ವರುಣಸೀವರ್ತಂ (ಟ) ಸೀವರ್ದಂ (ಚ, ಜ) (3) ಯ್ಯಮರ್ದ ಲ್ತೆಂಬವರೊಪ್ಪೆ (ಟ) (4) ಳ್ವರಡುಮಂ (ಕ, ಟ) (5) ಯಮಿನಿಂತ (ಕ, ಟ) (6) ಮಂ (ಗ, ಚ) (7) ನಾದನೊ (ಗ, ಚ) (8) ದಿನ (ಕ, ಚ) (9) ಕಾಲಮಹೋರಗಂ (ಟ, ಕ) ಕಾಲರಾಜಂ (ಜ, ಚ) (10) ಪೇೞ್ದು (ಕ, ಟ) (11) ನೀಮುಂಗುಣದ ಕೇಡಿಂಗಂ (ಕ, ಟ) (12) ದಿರ್ಪುದೆಂಬಿರೆಂತೋ (ಟ) ದಿರ್ಪುದೆಂಬುದೆಂತೋ (ಕ) ದಿರಲಾಗದು (ಜ, ಚ) (13) ಯಿದ (ಕ, ಗ) (14) ವರಿದು (ಟ) ಯ್ದಲೆಬಗೆ (ಕ, ಗ) (15) ಕೇಡಿನ ದುಃಖಂ (ಕ, ಟ) ಕೇಡು ಸಾಮಾನ್ಯಮಕ್ಕುಮೆ (ಜ, ಚ) (16) ಸ್ಯರಾಗಿ ಕೆಟ್ಟಪಿರಕ್ಕಟಾ (ಕ, ಟ) (17) ದಿನ (ಕ, ಗ) (18) ಯಲಾಗದೆ (ಕ, ಟ) (19) ಳೋರೊರ್ವರೊಳ್ (ಕ, ಗ) ಳಂದೊರ್ವ (ಟ) (20) ಯಂತಾಂತಾಗೆ (ಟ) (21) ಸೋಂಕುವ (ಕ) (22) ಕರಂಡಮನೇಕುಳಿಯ (ಟ) (23) ನಪ್ಪುದೇಕೆನ್ನ (ಕ, ಗ) ನಪ್ಪು ದೊಳ್ಳಿತೆನ್ನಾ (ಟ)

ಕಂ|| [1]ಮನೆಯೊಳಿರುಳ್ ಸೊಡರೆಸೆವಂ |
ತನುಪಮಗುಣವಿಾ ಮನುಷ್ಯಲೋಕದೊಳಿನಯುಂ ||
ಘನ[2]ಮಾಯ್ತಾ ಕಲಿಕಾಲದೊ |
ಳನೂನಮಾಗೆ[3]ಸೆವುದಿಲ್ಲಿ ತಡೆವುದು ಚದುರೇ ? || ೨೨ ||

ವ|| ಸೊಡರ್ ಬೆಳಗುವಾಗಳ್ ಕಿಱಿದಪ್ಪೋವರಿ[4]ಯೊಳಂ ಕತ್ತಲೆಯೊಳೊಳ್ಳಿತ್ತಾಗಿ ಬೆಳಗುಗುಂ. ಗುಣಮೆಸೆವಾಗಳೀ ಮನುಷ್ಯಭವದೊ[5]ಳಂ ಪೊಲ್ಲದ(ಮ)ಪ್ಪ ಕಲಿಕಾಲದೊಳ ಮೆಸೆಗುಗುಂ. ಅದಱಿಂ ನೀಮಿಾಗಳೆ ಗುಣಂಗಳಂ ಕೆಯ್ಕೊಳ್ವುದು. ಇಱಿಕೆಯ್ವಂತಾ ಗುಣಂಗ ಳೇನಿಱಿಯವೆ ?—

ಮ|| ಅರಸರ್ ಪಾಱಿಗೆ ದಂಡಿ[6]ಪರ್ ಕಸವ[7]ರಕ್ಕೆಂದಲ್ಲ ಮಾಚಾರ್ಯರುಂ |
ಕರುಣಂ ಕೆಯ್ಮಿಗೆ ಕಲ್ಪಿ[8]ಪರ್ ಬೆಸಗೆಯಲ್ಕೆಂ ದಿರ್ಪ[9]ವಂಗಲ್ತವಂ ||
ತೆರಡುಂ [10]ಲಕ್ಷ್ಮಿಗೆ ಕಾರ[11]ಣಂ ಪ್ರಭುಗಳಾದೊಂದಂದ [12]ವಿಾ ಯಂದಮೇ |
ನರಿದೋ ಪೇೞ್ ಕಲಿಕಾಲ[13]ದೋಷರಹಿತಪ್ರಾರಂಭಶುಂಭದ್ಗುಣಂ || ೨೩ ||

ವ|| ಗೃಹಸ್ಥರೊಳ್ ಮಿಗಿಲಪ್ಪರಸ[14]ರುಂ ಮುನ್ನಾದರ್. ತಪಸ್ಥರೊಳ್ ಮಿಗಿಲಪ್ಪಾ ಚಾರ್ಯ[15]ರುಂ ಮುನ್ನ(ರಾ)ಮಾದರ್. ಪರೋಪಕಾರಗುಣಮಿಾಗಳಾರೊಳಮಿಲ್ಲ, ಬೇಗ ಮಱವು ದೊರೆಕೊಂಡಲ್ಲಿಯೆ [16]ಗುಣಂಗಳಂ ಕೆಯ್ಕೊಂಡು ನೆಗೞಿಂ. ಎಂದು ಕಲಿಕಾಲದ ಪೊಲ್ಲಮೆಯನಱಿಯೆ ಪೇೞ್ದು [17]ಮತ್ತಂ ಪರಿಭಾಷೆಯೊಳವಿಂತೆಂಬರ್—

ಕಂ|| ಒಡಲನೆ ಪೊರೆವಂ ಬಸನ[18] |
ಕ್ಕೊಡರಿಸುವಂ ಮುಚ್ಚಿದಂದದಿಂದಾಗ[19]ದುದಂ ||
ಕಡೆಗಣಿಸದೆ ನೆಗೞ್ವನಿದೇಂ |
ಕಡುಗಲಿಯೋ ದುಃಖದೆಡೆಗೆ [20]ಬೆರ್ಚಿಲ್ಲದವಂ || ೨೪ ||

ವ|| [21]ಈ ಲೋಕದೊಳ್ ಕಲಿ ಪೆಱ[22]ನಾವಂ ? ಮುಂದಿನ ಕೇಡಿಂ[23]ಗಲ್ಕದನೆ ಕಲಿ. ಬಲ್ಲಾಳ್ ಪೆಱನೊಳನೆ ? ಪಾಪಿ[24]ಯಪ್ಪವನೆ ಬಲ್ಲಾಳ್—

(1) ಮನೆಮನೆಯೊಳ್ ಸೊಡ (ಕ,ಚ) (2) ತರಮಾದೀಕಾಲದೊ (ಕ,ಟ) ತರಮಾಗಿರೆಕಲಿ(ಚ) (3) ಸೆಗುಮಿಲ್ಲಿ (ಕ, ಚ) ಸೆಗುಮಲ್ಲಿ (ಗ) (4) ಯೊಳಮೊಳ್ಳಿತ್ತುಬೆಳ (ಕ,ಗ) (5) ಳಮೆಸೆಗುಮುದಱಿನೀಗಳೆ ಗುಣಂಗಳಂ ಕೆಯ್ಕೊಳ್ವುದು ನೀಮೆಳಿಸುವಂತೀಗಣ್ಗುಣಂಗಳಿಱಿಯವೆ (ಚ) ಳಂಕಿಱಿದೆಡೆಯೊಳ್ ಸೊಗಯಿಸುಗುಮಿಾಪೊಲ್ಲಗಾಲದೊಳೆಲ್ಲರೊಳಮೆಸೆಗುಮೆ ಮದರಿನೀಗಳೆ ಗುಣಂಗಳಂ ಕೆಯ್ಕೊಳ್ವುದೇಳಿಸುವಂದು (ಕ) (6) ಡಿಸರ್ (ಟ) (7) ರಂಗಂಡಲ್ಲ (ಲ್ಲಿ) ದಾಚಾ (ಟ,ಕ) ರಕ್ಕೆಂದಲ್ತುವಾ (ಗ,ಚ) (8) ಸರ್(ಟ) (9) ರ್ದವಂಗಲ್ಲದಿಂ (ಕ, ಟ) (10) ಜನ್ಮದ (ಕ, ಟ) (11) ಣ ಪ್ರಭು (ಕ,ಟ) (12) ಮುಂಭಾವಿಸಲ್ಕರಿದೊಳ್ಳೀಕಲಿ (ಕ,ಗ) (13) ದೊಳ್ಪರಹಿತ ಪ್ರಾರಂಭಶುಂಭದ್ಗುಣಂ (ಕ,ಟ) (14) ರುಮುಂನಾರಾದರುಂ ತಪಸ್ಥರೊಳ್ಮಿ (ಕ,ಟ) ರುಮುಂನರಾದರು (ಗ) (15) ರುಮುನ್ನಾರಾದರೀಗಳುಪಕಾರ (ಚ, ಜ) ರುಮಿನ್ನರಾ (ಕ) (16) ಗುಣದೊಳ್ಗಳಿಂ (ಗ,ಚ) (17) ಮತ್ತಂ ತ್ರಿಭಾಷೆಯೊಳಿಂತೆಂದರ್ (ಕ,ಟ) ಮತ್ತಂಮತಿಭಾಷೆ (ಕ,ಚ) (18) ಮ।ನೊಡ (ಕ,ಟ) (19) ಳದಂ (ಕ) (20) ತಾಂಮೆಚ್ಚಿದವಂ (ಕ) (21) ಈ (ಕಲಿ) ಕಾಲದೊಳ್ (ಕ) (22) ನೊಳನೆ ? (ಕ) (23) ಗಂಜದನೆ (ಕ,ಗ) ಗಂಜನೆ (ಟ) (24) ಯೇಬಲ್ಲಾ

ಉ|| ನೆಟ್ಟನೆ ಸ[1]ರ್ವಭಕ್ಷಿ (ಕ್ಷ) ಭುವನತ್ರಯಮೆಲ್ಲಮನೇನೊ ನುಂಗನೇ |
[2]ತೊಟ್ಟನೆ ನುಂಗು[3]ಗುಂ ತನಗೆ ದೇಹದ[4]ಮಾತಿನಿತಿಲ್ಲದ[5]ಪೆರ್ದ(ರ್ದ)ನಂ ||
ತಿಟ್ಟೆಳಮಲ್ತು ರಾಹು ತನುವಿಲ್ಲದೆ ತಾನುಗುಳ್ದಿಪ್ಪನೇಂ ಮನಂ |
ಗೆಟ್ಟುಗುಳ್ದಪ್ಪ[6](ನಾ)ನೇ ರವಿನಿಶಾಕರರಂ ತೆ! ನಿವೃತ್ತಿಯಿ[7]ಲ್ಲದೊಂ || ೩೫ ||

ವ|| ರಾಹುವಿಂಗೆ ಮೆಯ್ಯಿಲ್ಲದೆ ಚಂದ್ರಾದಿ[8]ತ್ಯರುಱುವಂತೆ ಪಾಪಕ್ಕೆ ಪೇಸ[9]ದೊಂಗಳ್ಕೆಸಲಾರ್ದ(ರ್ದ)ನಿತುಂ ಮೆಯ್ಯಿಲ್ಲ[10]ದೀ ಮೂಱುಂಲೋಕಮುಱುದಪ್ಪುದಲ್ಲದೊಡವನ ಬಸಿ[11]ರೊಳಗಳ್ಕಿ ಕಿಡದೇಕಿರ್ಕುಂ? ಅಂತಪ್ಪ ಮಹಾಪಾತಕಂಗಂಜಿ ಮಹಾವ್ರತಂಗಳಂ ತಾಳ್ದುವುದು—

ಕಂ|| ಮಾನಿ(ನ)ಸಲೋಕಂ ಮಿಥ್ಯಾ |
ಜ್ಞಾನಿಗೆ ಕಡುವೊಲ್ಲಕೆಯ್ಗುವೊಳ್ಪಿತು ಸಮ್ಯಗ್ ||
ಜ್ಞಾನಿಗಭಿಮಾನಿಗನುಪಮ |
ದಾನಿಗೆ ಗುಣರತ್ನ[12]ಮಿಲ್ಲಿ ದೊರೆಕೊಳ್ವುದಱಿಂ || ೩೬ ||

ವ|| [13]ಆವನೊರ್ವಂ ಪರದಱಿಯದೊಂಗಂ, [14]ಸೋಂಬಂಗಮೇನೊಳ್ಪಿ ಕೆಯ್ಗುಮೆ? ಲಾಭಮಱಿದು ಕ್ರಯವಿಕ್ರಯಂ[16]ಗೆಯ್ವೊಂಗೊಳ್ಪಿಕೆಯ್ಗುಂ, ಅಂತೆ ಮನುಷ್ಯಭವಮಱಿವಿಲ್ಲದಂ [17]ಗೊಳ್ಪಿತ್ತಲ್ಲದಱನಱುದಾರ್ತು ನೆಗಟ್ತ್ವೊಂಗೊಳ್ಪಿತ್ತು. ಎಂದಿಂತು ಮೂಱುಂಲೋಕದ ವಿಭಾಗಸ್ಥಿತಿಗಳುಮಂ ಜೀವಾವಸ್ಥೆಗಳುಮಂ ಪೇೞ್ವೊಡಂ [18]ತಿಳಿಯಿರಿ(ರ)ದಂ ಕೇಳ್ದಾಗಳೆ [19]ತಿಳಿದಣ್ಮಿ ನೆಗಳ್ದರ ಕಥೆಯಂ ಕೇಳಿಂ – ಅದೆಂತೆನೆ—

---

(1) ರ್ವರಕ್ಷೆ (ಕ,ಟ) (2) ನೆಟ್ಟನೆ (ಕ,ಟ) (3) ವಂ (ಕ,ಟ) (4) ಪೆಂಪಿನಿತಿಲ್ಲ (ಕ,ಟ) (5) ರ್ದನಿಂ (ಕ,ಗ) (6) ಪ್ಪನಾ ರವಿಶಶಾಂಕರ(ನ)ಂತೆ (7) ಲ್ಲದೇಂ (ಕ,ಟ) ಲ್ಲದಂ (ಜ) (8) ತ್ಯರ್ಕಳಂಪಱುವಂತೆ (ಕ,ಗ) (9) ದಂ ಗಳಿಸಲಾರ್ದ (ಕ) ದಂಗಕ್ಕಿಸ (ಜ) (10) ದೆ (ಕ, ಟ) (11) ರೊಳಗಿಕ್ಕಿ ಕಿಡದೇಕಿರ್ಕು (ಕ, ಜ) (12) ಮಿಲ್ಲ (13) ಅವಬಗೆಯೊಳಂ (ಕ) ಅವೆಡೆಯೊಳಂ (ಜ, ಚ) ಆವಂಪರದ (ಟ) (14) ಸೊಬಗಂಗ ಮೊಳ್ಪಿಕೆಯ್ಗುಮೆ (ಕ,ಟ) ಸ್ತ್ರೋಭಂಗ (ಜ) (15) ಲಾಭದ ಪೆರ್ಚಿಗೆಯರಿದು (ಕ್ಷ) ಮೆಚ್ಚಿಂಗೆ ಲಾಭಮರಿದು(ಟ) ಮೆಚ್ಚನಿಯರಿದು ಕ್ರಯಂಗೆಯ್ವೊಂಗೊಳ್ಪಿ (ಗ) (16) ಗೆಯ್ವಂಗೊಳ್ಪಿ (ಕ) (17) ಗೊಳ್ಪಿತಲ್ತರಿದಲ್ತು ನೆಗಳ್ವಂಗೊಳ್ಪಿತ್ತುಮಿಂತುಮೂಱುಂ (ಟ) (18) ತಿಳಿಯಿರೆ ಕೇಳ್ದಾಗ (ಟ) (19) ತಿಳಿವನ್ನಿ (ಕ)

# — ದೃಷ್ಟಾಂತ ಕಥೆ —

## [ ಸುಕುಮಾರನ ಕಥೆ ]

ಕಂ|| ಶ್ರೀ ವಿಲಸ ಜ್ಜನದಿಂದಂ |
ಶೀವಿರ್ಪುದವಂ[1] ತಿ ವಿಷಯಮೆಂಬುದು ವಿಷಯಂ ||
ಭೂವಿದಿತ ಮುದಿತಮಭಿಸುತ |
ಮಾ ವಿಷಯದ ರಾಜಧಾನಿಯು[2]ಜ್ಜೇನಿ ಪುರಂ || ೨೭ ||

ವ|| [3]ಅಪ್ಪೊಲಲಂ ವೃಷಭಾಂಕನೆಂಬರಸಂ ಆಳುತ್ತಿರ್ಪನಾ ಕಾಲದೊಳ್—

ಕಂ|| ಲಕ್ಕವಲಯಿ[4]ಗೆಯ ಕೋಟಿಯ |
ಲೆಕ್ಕದ ಪಲಯಿ[5]ಗೆಯ ತನ್ನ ಪಡೆದೊಡ[6]ಮೆಗಳೀ ||
ಲೆಕ್ಕಮೆನುತಿರ್ಪ ಪರದರ |
ತಕ್ಕೊಕ್ಕಲ ಪವಣನ[7]ಱಯೆ ನಾ ಪುರವರದೊಳ್ || ೨೮ ||

ವ|| ಆ ಮಾಲಿಕ್ಕೆ[8]ಯುಳ್ಳವರ್ಗಳಲ್ಲದೆ ವೈಶ್ಯಜಾತಿಯೊಳ್[9]ಗ್ಗಳದ ಮೂಱುಂ ಪದವಿ[10]ಯ ವರ್ಗಳುಮಿರ್ಪರವರೆಂತಪ್ಪರೆಂದೊಡೆ—

ಕಂ|| ಪೊನ್ನೆಲ್ಲಮ[11]ನೊರ್ಬುಳಿವೊ |
ಯ್ದುನ್ನತನೇಱ[12]ಗನನೇಱ ನೋಡುತ್ತಿ[13]ರೆಯಾ ||
ಪೊನ್ನಿಂದಾ ದೆ[14]ಸೆಯವರಂ |
[15]ಸನ್ನಿದಮೆನೆ ಕಾಣದನಿತಱೊ(ನೊ)ಡೆಯುವನೇಱಂ(ನೆಲಗಂ) || ೨೯ ||

ಉತ್ತುಂಗವೃಷಭಮಂ ತಾ |
ನುತ್ತಮನೇಱರ್ದು ಕನಕಮಂ ಪುಂಜಿಸಿ ನೋ ||
ಡುತ್ತಿರೆ ರಾಶಿಯ ಮಱೆಯಿಂ |
ದತ್ತಣರಂ ಕಾಣದನಿ[16]ತಱೊಡೆಯಂ ಗೌ[17]ತಂ || ೩೦ ||

ಕಂ|| ಇಭಪತಿಯನೇಱ ವೈಶ್ಯ |
ಪ್ರಭು ಪೊನ್ನಂ ರಾಶಿಮಾಡಿ ರಾಗದೆ ನೋಡು ||
ತ್ತಭಿನುತನಾ ದೆಸೆಯವರ್ಗಳ |
ನಭಯುಂ ತಾಂ ಕಾಣದನಿತನೊ(ಱೊ)ಡೆಯವ[18]ನಿಬ್ಬಂ || ೩೧ ||

---

(1) ವಂತೀ (ಕ,ಗ) (2) ಯುಜ್ಜೈನಿಯದಂ (ಟ) (3) ಅದಂ (ಚ) (4) ಗೆಯೆ ಕೋಟಿಯ (ಕ, ಟ) (5) ಗೆಯೆ (6) ಮೇಗಡೆ (ಳೆ) (ಕ,ಗ) ಮೆಗಡೇಂ (ಟ) (7) ಱಯ (ಗ) (8) ಯವರ್ಗಳಲ್ಲದೆ (ಕ, ಟ) (9) ಗ್ಗಳಮಪ್ಪಮೂಱುಂ(ಕ,ಟ) (10) ಯವರ್ಗಳೆಂತಾದರೆಂದೊಡೆ(ಕ,ಟ) ಯವರ್ಗಳೇದೊರೆಯರೆಂದೊಡೆ(ಘ) ಯಿರುಳಿಯೆಮಿಕ್ಕದೊರೆಯರೆಂತೆಂದೊಡೆ (ಗ,ಘ) (11) ನೋರ್ವುಳಿಗೆಯ್ದು (ಟ) ನೊರ್ವುಳಿವೊಯ್ದುನ್ನ (ಕ) (12) ಗಮ (ಕ,ಗ) ಗೆಯಮತ್ತೇಱ (ಚ) ಗೆಯುಮನೇಱ (ಟ) ಗನನನೇಱ (ಚ) (13) ರೆಯುಂ (ಗ) ರಱ (ಕ,ಟ) (14) ಸೆಯವರ್ಗಳ (ಕ) ಸೆವರ್ಗಳ (ಟ) (15) ಸನ್ನುತದಿಂ ಕಾಣದೀತ (ಕ,ಗ) ಕಾಣದನಿತ (ಚ,ಜ) (16) ತನೊಡೆ (ಕ,ಟ) (17) ಗೋಪಂ (ಚ,ಜ) (ಕ ಪ್ರತಿಯಲ್ಲಿ ಸಾರಂ ಎಂದು ಬರೆದುದನ್ನು ಹೊಡೆದು ಕೆಳಗೆ ವೃಷಭಂ – ಎಂದು ಬರೆದಿದೆ) (18) ನಿಭ್ಯಂ (ಕ) ವನೆಂತುಂ – ಎಂದು (ಕ ಪ್ರತಿಯಲ್ಲಿಬರೆದು ಹೊಡೆದು ಇಭ್ಯಂ ಎಂದು ಕೆಳಗೆ ಬರೆದಿದೆ)

ವ|| ಇಂತಪ್ಪ [1]ಮೂಱುಂ ಪದವಿಗಳೊಳ್ ಇಬ್ಬ ಪದವಿಯುಳ್ಳಾತಂ ಸೂರದತ್ತನೆಂಬಂ ಪರದಂ. ಆತನ ಭಾರ್ಯೆ ಯಶೋಭದ್ರೆಯೆಂಬಳ್. [2]ಆಕೆ ಪತಿಯ ಕೂರ್ಮೆಯೊಳಂ ತನ್ನ ಪೆರ್ಮೆಯೊಳಂ ನೆಱೆ[3]ದು ಸುಖದಿನಿರೆ—

ಶಾ|| ಅಂತಪ್ಪಾಕೆಗೆ ಮಕ್ಕಳಿಲ್ಲದೆ ಕರಂ ಸಂಕ್ಲೇಶದಿಂದಾಗಳುಂ |
ಚಿಂತಾಕ್ರಾ[3]ನ್ತೆಯುಮಾಗಿ ಪೋಗೆ ಪಲವುಂಕಾಲಂ ಬೞಿಕ್ಕಲ್ಲಿಗ ||
ತ್ಯಂತಜ್ಞಾನ(ನಿ)ವಿಶೇಷರಪ್ಪ ಮುನಿ[4]ಪರ್ ಬಂದಿರ್ದೊಡಾ ಕಾನ್ತೆ ಕೇ |
[5]ಳ್ದಂತಾಗಳ್ ವಿವಿಧಾರ್ಚನಾಸಹಿತ[6]ಮಂತಾ ಸಂಯಮೋದ್ಯುಕ್ತರಂ || ೩೨ ||

ವ|| ಬೆಸಗೊಳ್ವೆನೆಂದು ಬಂದು ದೇವ[7]ರಂ ಮುನ್ನಮರ್ಚಿಸಿ ಬೞಿಯಂ ಭಟಾರರಂ ಬಂದಿಸಿ ಮುಂದೆ ಕುಳ್ಳಿರ್ದು ಕೆಯ್ಗಳಂ ಮುಗಿದು "ಭಟಾರಾ, ಬೆಸ[8]ಸಿಮೆಮಗೆ ಮಕ್ಕಳಿಲ್ಲ[9]ದೀ ಭವಮಿಂತೆ ಪೋಕುಮೋ! ಪುತ್ರೋತ್ಪತ್ತಿಯೆಂ(ದಾ)ತಾಗಿಯು[10]ಮಕ್ಕುಮೋ?" ಎಂದು ಕೆಯ್ಯಂ ಮುಗಿದಿರ್ದು ಬೆಸಗೊಳೆ ಭಟಾರಕರೆಂದರ್. "ನಿಮಗೊರ್ವಂ ಸುಪುತ್ರನಕ್ಕುಮಾ[11]ದೊಡಂ—

ಕಂ|| ತಂದೆ ಮಗಂ ಪುಟ್ಟಿದನೆಂ |
ದಂದೆ ತಪಂಬಡುಗುಮೊರ್ವ[12]ಋಷಿರೂಪಂ ಕಂ ||
ಡಂದೆ ತಪಂಬಡುಗುಂ ಮಗ" |
ನೆಂದಾಗ[13]ಳೆ ಬಳೆದುದಿಲ್ಲ ಪುಟ್ಟಿದ ರಾಗಂ || ೩೩ ||

ವ|| ಅಂತು ಯಶೋಭದ್ರೆಗೆ ಸಂತೋಷಮುಂ, ವಿ[14]ಷಾದಮುಮೊಡನೊಡನಾಗೆ ಭಟಾರರಂ ಬಂದಿಸಿ ಮನೆಗೆ ಬಂದಿರ್ದು ಕೆಲವಾನುಂ ದೆವಸದಿಂ ಗರ್ಭಮಾಗೆ ನವಮಾಸಂ ನೆಱೆ[3]ದು [15]ಮಗನಂ ಪೆತ್ತೊಸಗೆಯಂ ಮಾಡಿದಾಗಳ್ ಅದಂ ಕೇಳ್ದು "ಸುತನಂ ಬಡೆದೆನೆನಗೆ ಪರತ್ರೆಗೆ ಹಿತಂ ಬಡೆದೆಂ" ಎಂದು[16] ಸೂರದತ್ತಸೆಟ್ಟಿ ತಪಂಬಟ್ಟು ಪೋದಂ. [17]ಅದಂ ಕೇಳ್ದು ಯಶೋಭದ್ರೆ ಪುರುಷನಗಲ್ಕೆಯೊಳುಬ್ಬಸಂ ಬಟ್ಟಿರ್ದುಂ ಪುತ್ರಮೋಹದಿಂದಲಲಂ ಸೈರಿಸಿರ್ದು ಕೂಸಿಂಗೆ ನಾಮಕರಣದೊಳ್ ಸುಕುಮಾರನೆಂದು ಪೆಸರನಿಟ್ಟು ನಡೆಪುತ್ತುಂ ಋಷಿಯರೆಂಬ ಪೆಸರೊಳ್ ಚಿತ್ರದ ರೂಪನಪ್ಪೊಡಂ ಕಾಣದಂತೆ ಕಾಪಂ ಮಾಡಿ ವಿನೋದಂಗಳ್ಗೆಡೆಯಪ್ಪಂತು ಸರ್ವತೋಭದ್ರಮೆಂಬ ಮಣಿಮಾಡಮಂ ಮಾಡಿಸಿ ನೆಲೆಯ ಮೇಗಣಿಂದಾತನಿೞಿಯಲೀಯದಂತು ನಿಶ್ಚಿಂತಮಿರಿಸಿ ಯೌವನಪ್ರಾಪ್ತನಾದಂದು ಶ್ರೀ, ಹ್ರೀ, ಧೃತಿ, ಕೀರ್ತಿ[18]ಬುದ್ಧಿ, ಲಕ್ಷ್ಮಿಯೆಂಬಿವರ್ಗೆ ಸಮಾನರು[19]ಮಪ್ಪ—

---

(1) ಮೂಱುಂ ಕುಲಪದವಿಯೊಳ್ಳೆಗಳ್ದಿಬ್ಬ ಕುಲದಾತಂ (ಕ, ಟ) (2) ಆಕೆ ಮಹಾಸತಿ (ಚ) (3) ಕ್ರಾನ್ತತೆಯಾಗಿ (ಕ) (4) ಗಳ್ (ಕ, ಗ) (5) ಳ್ಬಂದಾಗ (ಕ) (6) ದಿಂದಾ (ಕ, ಟ) (7) ರನಪ್ಪ ವಿಧಾರ್ಚನೆಯಿಂ(ಕ,ಟ) (8) ಸದಿಂದೆನಗೆ(ಕ) (9) ಲ್ಲ ದುಂತೆಪೋಕುಮೋ(ಟ) (10) ಯುಮೊರ್ಮೆಯ (ಕ,ಟ) (11) ದೊಡೆ (ಕ) (12) ರುಷಿ (ಚ,ಝ) (13) ಳ್ ನೆಗೆದುದಿಲ್ಲ ಮೋಹೋದಯದಿಂ (ಕ,ಗ) (14) ನೋವು (ಕ,ಚ) (15) ಗಂಡುಗೂಸಂ (ಕ,ಟ) (16) ದಾಗಳ್ (ಕ) (17) ಪೋದೊಡೆಯಶೋ (ಗ) (18) ಯೆಂಬೀ ನಾಲ್ವರುಂದೇವತೆಗಳನ್ನರಪ್ಪ (ಕ,ಟ) (19) ಮಪ್ಪಮೂವತ್ತಿರ್ವರ ದಿತಿಯರಂ (ಕ,ಟ) ರ್ವರ್ಕನ್ನೆಯರಂ ವಿವಾಹವಿಧಿಯಿಂ ತಂದುಕೊಟ್ಟು ಚತುರಿಕೆ (ಚ,ಜ)

*ಚಂ|| [1]ಚತುರಿಕೆ ಹೇಮಮಾಲೆ [2]ರತುನಾವಳಿ ರೋಹಿಣಿ [3]ನಂದೆ ಪದ್ಮೆ ರೇ |
ವತಿ ಜಿನದತ್ತೆ ಪದ್ಮಿನಿ ಶಶಿಪ್ರಭೆ ಲಕ್ಷ್ಮಿ [4]ಸುಭಾಗೆ ರತ್ನೆ ಭಾ ||
ರತಿ ಮಣಿಮಾಳೆ [5]ಸುಪ್ರಭೆ ಸುಲೋಚನೆ ಚಂದ್ರಿಕೆ [6]ಚಂದ್ರೆ ಲಕ್ಷ್ಮಣಾ |
ವತಿ [7]ರತಿಚಿತ್ರೆ ಭಾಮಿನಿ ಮನೋಹರಿ ಶೀತಳೆ ರಂಭೆ ಭದ್ರೆಯರ್ || ೩೪ ||

ಕಂ|| ವಿಜಯೆ ಸುನಂದೆ [8]ಸಮೇತಂ |
ವಿಜಯಾವತಿ [9]ಚಿತ್ರೆ ಲೀಲೆಯುಂ ಗೋಮಿನಿಯುಂ ||
ವಿಜಿತಾಮರಕನ್ನೆಯರಂ |
ಗಜಗಮನೆಯರಂ ಮನೋಜಶರಸದೃಶ[10]ಯರಂ || ೩೫ ||

ವ|| ಇಂತಿವರ್ (ಮುಖ್ಯರಾದ) ಮೂವತ್ತಿರ್ವರ್ ಪರದಿಯರಂ ವಿವಾಹವಿಧಿಯಿಂದಾತಂಗೆ ತಂದು ಕೊಟ್ಟು ಮೂವತ್ತೆರಡು ಬಳ್ಳಿಮಾಡಂಗಳನವರ್ಗೆ ಮಾಡಿಸಿಕೊಟ್ಟು [11]ಆತನ ಮಾಡದ ಪೆಱಗೆ ಬಳಸಿಯುಂ ಸೊಸೆವಿರ್ಗೆ ನಂದನವನಮಂ ಮಾಡಿಸಿಕೊಟ್ಟು [12]ಮನೆವಾರ್ತೆಯ ಚಿಂತೆಯ[13]ನೇನುಮನಾತನಂ ಮುಟ್ಟಲೀಯದೆ ನಡೆಪುತ್ತಿರೆ. ಇಂತು ಸುಕುಮಾರಂ ಮಣಿಕುಟ್ಟಿಮ ಭೂಮಿಯನಲ್ಲದೆ ನೆಲನಂ ಮೆಟ್ಟಿಯಱಿಯಂ, ಮಾಣಿಕದ ಬೆಳಗನಲ್ಲದೆ [14]ಸೊಡರ ಬೆಳಗುಮ ನಾದಿತ್ಯನ ಬೆಳಗುಮಂ ಕಂಡಱಿಯಂ. ಕರ್ಪೂರದೂಳಿಯನಲ್ಲದೆ ಪೆಱತು ದೂಳಿಯಂ ಕಂಡಱಿಯಂ. ಚಾಮರದ ಗಾಳಿಯನಲ್ಲದೆ ಮತ್ತಿನ [15]ಗಾಳಿಯನಱಿಯಂ. ಒಕ್ಕ[16]ಕತ್ತುರಿಯ ಕೊಟಕ್ಕಿಸಱನಲ್ಲದೆ ಮಿಕ್ಕ ಕೆಸಱ ಮೆಟ್ಟಿಯಱಿಯಂ. ದಿವ್ಯಶಯ್ಯೆಯೊಳಲ್ಲದೆ ಪೆಱದು ಶಯ್ಯೆಯೊ[17]ಳ್ ಪಟ್ಟಱಿಯಂ. ಪುಷ್ಪವಾಸದಕ್ಕಿಯ ಕೂಟನಲ್ಲ[18]ದೆ ಮತ್ತಿನಾಹಾರಮನುಂಡಱಿಯಂ. [19]ದುಕೂಲವಸ್ತ್ರಮ ನಲ್ಲದನ್ಯವಸ್ತ್ರಮನುಟ್ಟಱಿಯಂ. ಅಮೂಲ್ಯಾಭರಣಂಗಳನಲ್ಲದೆ ಅನ್ಯಭೂಷಣಂಗಳಂ ತೊಟ್ಟ ಱಿಯಂ. ಕಾಳಾಗು[20]ರುವ ಧೂಪಮನಲ್ಲದೆ ಮತ್ತಿನ ಪೊಗೆಯನಱಿಯಂ, ತನ್ನ ಪೆಂಡಿತಿ ಯರುಮಂ, ಪರಿಚಾರಕಿಯರುಮಂ, ತಾಯುಮನಲ್ಲದೆ ಮತ್ತಾವಮಾನಿಸರೊಳಂ ನುಡಿದಱಿಯಂ. ಮಾಗೆ, ಮಱಿಗಾಲಂ, ಬೇಸಗೆ ಪಗಲಿರುಳೆಂಬೀ ಮಾತಂ ಕೇಳ್ದಱಿವನಲ್ಲದೆ ಕಂಡಱಿಯಂ—

(1) ಸುಲೋಚನೆಚತುರಿಕೆ (ಚ,ಜ) (2) ರತ್ನಾವತಿ (ಕ, ಗ) ರತ್ನಾವಳಿ (ಚ) (3) ಪದ್ಮದತ್ತೆ (ಕ) ಪದ್ಮೆ ಪದ್ಮಾನಂದೆ (ಟ) (4) ಸುರಾಮೆ ರತ್ನಚಾಪೆ (ಕ,ಟ) (5) ಸುಭದ್ರೆ ಲಕ್ಷ್ಮಣಾವತಿ (ಕ,ಟ) (6) ಭದ್ರೆ (ಕ,ಟ) (7) ವಿಚಿತ್ರೆ ಭಾನುಮತಿ ಶೀಲವತಿ ರಂಭೆ ವಿಜಯೆನಂದೆ (ಕ,ಟ) (8) ಸುಮಿತ್ರೆ ವಿಜ (ಕ, ಟ) (9) ಚಿತ್ರಲತೆ ರೋಹಿಣಿ ರತ್ನಮಾಲೆ ಪ್ರಭಾವತಿ ಗುಣವತಿ ಶುಕವಾಣಿ ಸುಘೋಷೆ ಎಂಬ ವಿಜಿತಾ (ಕ) ರೋಹಿಣಿ ಪ್ರಭಾವತಿ ಎಂಬ ವಿಜಿತಾ (ಟ) (10) ಯರಂ ತಂದು ಕೊಟ್ಟುಮೂವತ್ತೆರಡುಂ ಮಾಡಂ (ಕ) ಸರಸಸದೃಷ್ಟಿಯರಂ ತಂದು ಕೊಟ್ಟು (ಟ) ಯರಂ ಎಂಬವರೊಳ್ ಸ್ವಯಂವರ ವಿಧಾನೆಯರಪ್ಪ ಮೂವತ್ತಿರ್ವರ್ ಕನ್ನೆಯರಂ ವಿವಾಹ (ಟ) (11) ಮತ್ತಮಾಡದ ಪೆರಗೆನಂದನ (ಕ, ಟ) (12) ಆತನ ಮಗನ ವಾರ್ತೆ (ಟ) (13) ಯನೆನಸುಂ (ಕ) (14) ಸೊಡರಂ ಆದಿತ್ಯನ (ಕ, ಟ) (15) ಘಾಳಿ (ಘ) (16) ಕಸ್ತೂರಿ (ಚ, ಜ) (17) ಲ್ಲದೊಱಗಿಯರಿಯಂ (18) ಲ್ಲದೆ ಉಂಡರಿಯಂ (ಕ) (19) ದುಕೂಲಮನಲ್ಲದುಟ್ಟರಿಯಂ (ಘ) (20) ಮನಲ್ಲದೆ ಪೂಸರಿಯಂ (ಟ)

* ಈ ಪದ್ಯಗಳು ಎಲ್ಲಾ ಪ್ರತಿಗಳಲ್ಲೂ ವಚನದೊಡನೆ ಸೇರಿಕೊಂಡು ವಚನವಾಗಿಯೇ ಇದೆ—

ಮ|| ವಿಕಟಾಂ[1]ಗೋಗ್ರ ವಿರೂಪ ನಿಷ್ಠುರ [2]ಕರಕ್ರೂರಾರಿ ಶೀತೋಷ್ಣದು |
ಷ್ಪಕುವಸ್ತು ಸ್ಥಿತಿ[3]ಯೆಂತುಟೆಂದಱಿಯನೇಕಂ[4]ತಪ್ಪುವಂ ಪೇೞ್ವ ವಾ ||
ಚಕಮೊಂದುಂ ಕಿವಿಯತ್ತ ಮುಟ್ಟದೆಡೆಯೊಳ್ ನಿಶ್ಚಿಂತಮಿ[5]ರ್ಪಂ ದಲೀ |
ಸುಕುಮಾರಂ[6]ಬರಮಾರೊ ಗರ್ಭಸುಖಿಗಳ್ ಮರ್ತ್ಯರ್ಕಳೊಳ್ ದೇವರೊಳ್ || ೩೬ ||

ವ|| ಎಂಬಿನಿತುಂ ಪುಣ್ಯೋದಯದಿಂ ನವಾಣೂ[7]ತ್ತರವಿಮಾನದೊಳ್ ಅಹಮಿಂದ್ರನಿರ್ಪಂ ತಿರ್ಪಿನಮಾ ಪೊೞ[8]ಲೊಳೊಂದುದೆವಸಂ ಸಜ್ಜಾಯಿಗಂ [9]ಮಹಾಚೀನದಿಂ ಸಮೆದೊಂದು [10]ರನ್ನಗಂಬಳಮಂ ಕೊಂಡು ಬಂದಲ್ಲಿ [11]ಪುರದೊಳಗೀ ವಸ್ತುವಂ ಮಾಱುಗೊಳ್ವನಿತು ಸಮರ್ಥರಾರ್ ? ಎಂದು ಪರದರ್ಗೆ ತೋಱದೆ ಅರಮನೆಗೆ ವಂದರಸಂಗೆ ತೋಱದೊಡೀ ವಸ್ತುವನಾಂ [12]ಕೊಳಲ್ ನೆಱೆಯೆನೆನೆ ಸಜ್ಜಾಯಿಗಂ ಮಗುೞ್ದು ಬಂದು ಮತ್ತ[13]ಮಿಲ್ಲಿಯಗ್ಗಳದ ಪದವಿಯ ಪರದರಳವಂ ನೋೞ್ಪೆನೆಂದು ಸುಕುಮಾ[14]ರನ ಖ್ಯಾತಿಯಂ ಕೇಳ್ದಾತನ ಮನೆಯೆಡೆಯಂ ಬೆಸಗೊಂಡು ಬರೆ ಕೇಳ್ದು ಯಶೋಭದ್ರೆ ಕರೆಯ[15]ಲಟ್ಟಿದೊಡೆ ಸಜ್ಜಾಯಿಗಂ ಬಂದು ರನ್ನಗಂಬಳಮಂ ತೋಱದೊಡಾವಸ್ತುವಂ ನೋಡಿ ವಸ್ತುಪುರುಷರಿಂ ಬೆಲೆಯಿಡಿಸಿ ಲಕ್ಕೆ ಪೊನ್ನಂ ಕೊಟ್ಟು ಮಾಱುಗೊಂಡು ಮಾಡದ ಮೇಗಣ ನೆಲೆಯೊಳಿರ್ದ ತನ್ನ ಮಗನಲ್ಲಿಗಟ್ಟಿದೊಡೆ ಮಗಂ ನೋಡಿ—

ಕಂ|| ಇದು ವೊಳ್ಳಿ[16]ತು ವಸ್ತುವಿದಂ |
ಪೊದೆದಂದುಮ್ಮಳಿಪೆನೊಲ್ಲೆನಾವೊಳ್ ತಾಂ ಮ ||
ಚ್ಚಿದ ಸೊಸೆ[17]ಯಾಕೆಗೆ ಕುಡುಗೆಂ |
ದದನಬ್ಬೆಗೆ ಮಗುೞ್ಚಿ ಬೇಗಮಟ್ಟಿದನಾಗಳ್ || ೩೭ ||

ವ|| ಅಟ್ಟು[18]ವುದುಂ ಯಶೋಭದ್ರೆ ತನ್ನ ಮನದೊಳ್ ಬಗೆದುನೋಡಿ ಸೊಸೆಯರೊರ್ವಳ್ಗೆ ಕೊಟ್ಟೊಡೆ ಮತ್ತಿನವರೆಲ್ಲ ಮೇವಯ್ಸುವರ್. [19]ಎಂದದನನಿತುಮಂ ಬೇೞ್ಚ ವೇೞ್ಚ ಕೊಯ್ಸಿ ಮೂವತ್ತಿರ್ವರ್ ಸೊಸೆವಿರ್ಗಂ ಚಮ್ಮಾವುಗೆಯಂ ಮಾಡಿಸಿ ಕೊಟ್ಟಳ್. ಅನ್ನೆ[20]ಗಮರಸನಾ ರನ್ನಗಂಬಳಮನಿಲ್ಲಿಯಾರ್ ಕೊಳ್ಳುವರ್ ; ಅಂತಪ್ಪ ವಸ್ತುವೆಲ್ಲಿಯುಮಿಲ್ಲೆನಲ್ ಕೆಲದೊಳಿರ್ದೊರ್ವನೆಂದಂ. ನಮ್ಮ ಪರದರ ಸುಕುಮಾರನ ತಾಯ್ ಯಶೋಭದ್ರೆಯೊಂದುಲಕ್ಕೆಪೊಂಗೆ ಮಾರ್ಕೊಂಡು ತನ್ನ ಸೊಸವಿರ್ಗೆಲ್ಲಂ ಚಮ್ಮಾವುಗೆಯಂ ಮಾಡಿಸಿಕೊಟ್ಟಳೇಂ ಚೋದ್ಯಮೊ ?—

---

(1) ಟೋಗ್ರಾಂಗವಿರೂಕ್ಷ (ಕ,ಟ) (2) ನಖಕ್ರೂರಾತಿ (ಕ) ತರಕ್ರೂ (ಟ) (3) ಯಿಂತು (ಕ, ಟ) (4) ಕಂತಪ್ಪುವಂ ಕೇಳ್ವೆ (ಕ,ಟ) (5) ರ್ಪಂದದಿಂ (ಕ,ಟ) ರ್ಪನದಱಿಂ (ಚ, ಜ) (6) ನರುಮಾರ ಗರ್ಭಸುಖಿ....ದಿವ್ಯರೊಳ್(ಕ,ಚ) ಬರೆಮಾರುಗರ್ಭಸುಖಿ(ಟ) (7) ತ್ತರೆಯೊಳಹ (ಕ,ಟ) ತ್ತರೆಯ ವಿಮಾನದ (ಚ,ಜ) (8) ಲ್ಲೊರ್ವಂ ಸಜ್ಜಾಯಿತಂ (ಕ) ಯಿತಂ (ಟ) (9) ಮಹಾನಂದದಿಂ (ಕ) ಮಹಾಬಿನ್ನಣದಿಂ(ಟ) (10) ರತ್ನಗಂಬಳಿಯಂ (ಕ,ಟ) (11) ಪೆರರಾರೀವಸ್ತುವಂ ಕೊಳಲ್ನೆಱೆ (ರೆ) ಯರೆಂದರಮನೆಗೆ (ಕ, ಛ) (12) ಕೊಳಲಾಱೆನೆನೆ (ಜ,ಞ) ಮನಂದೆಗೆಯಲಲ್ಲದೆ ಅರ್ಥಮಂಕೊಳ (ಛ) ನೆಱೆವರಿಲ್ಲೆಂದರಸಂ ಮನದೊಳ್ ಭಾವಿಸಿ ನೋಡಿ ಯಾಕಂಬಳಮಂ ಮಗುೞೆಕೊಟ್ಟು ಸಜ್ಜಾಯಿಗನಂ ವಿಸರ್ಜಿಸಿದೊಡಾತಂ (ಕ,ಟ) (13) ಮಿಲ್ಲಿಯಪರದರಳವಿಯಂ (ಕ,ಟ) (14) ಮಾರನರಮನೆಯಂ (ಕ, ಟ) (15) ಲಟ್ಟೆನೋಡಿ ವಸ್ತುಪುರುಷರಿಂ (ಟ) (16) ತ್ತೇ (ಕ) (17) ಗೆ ಕೂರ್ತು (ಟ) (18) ದೊಡೆ ಸೊಸೆಯೊರ್ವಳ್ಗೆ (ಕ, ಟ) (19) ಎಂದದನರಿಸಿ ಮೂವತ್ತಿ (ಕ,ಟ) (20) ಮಱುದೆವಸಮರಸನಾಸ್ಥಾನದೊಳ್ ವಸ್ತುಪುರುಷಗೋಷ್ಠಿಯೊಳ್ ಕುಳ್ಳಿರ್ದು ವಿಚಾರದ ಮಾತುಮಾತಾಗಿಂದಿಲ್ಲಿಗೆವಂದಿರ್ದ ಸಜ್ಜಾಯಿಗನ ಕೆಯ್ಯರನ್ನಗಂಬಳಿಯು (ಕ,ಛ)

ಕಂ|| [1]ಇಂತಪ್ಪ ನೆಗೞ್ತೆಯ ಸಿರಿ |
ವಂತರ್ ಪರದರ್ಕಳೆನ್ನ ಪೊೞಲೊಳ್ ಸಲೆ ನಿ |
ಶ್ಚಿಂತತೆಯಿಂ[2]ದಿರ್ಪಂದೆ |
ನ್ನಂತಾರ್ ಪೇೞಿಮ್ ಪುಣ್ಯವಂತರೆಂದು ನರೇಂದ್ರಂ || ೩೮ ||

ವ|| ಮುಯ್ವಂ ನೋಡಿ ರಾಗದಿ[3]ನಾ ಪುಣ್ಯಪುರುಷನಂ ನೋೞ್ಪೆ[4]ನೆಂದು ಮಱುದೆವಸಂ ತೊಟ್ಟನರಸನವರ ಮನೆಗೆ [5]ಪೋದೊಡೆ "ಅರಸು ಬಂದ"ನೆಂಬುದಂ ಕೇಳ್ದು ಯಶೋಭದ್ರೆ ಬೇಗಮಿದಿರ್ವಂ "ದೆತ್ತೆೞ್ತನ್ನಿ"ಮೆಂದು ಮಾಡದೊಳಗಣ್ಗೊಡಗೊಂಡುಯ್ದು ಪಂಚರತ್ನದಿಂ [6]ಘಟಿಯಿಸಿದ ರಂಗವಲ್ಲಿಯ ಮೇಲೆ ದೇವಾಂಗವಸ್ತ್ರದ ಸುಖಾಸನಮನಿಕ್ಕಿಸಿದೊಡಲ್ಲಿ ಕುಳ್ಳಿ"ರ್ದೆಮ್ಮ ತಮ್ಮನೆಲ್ಲಿದ" ನೆನೆ "ಮೇಗಣ ನೆಲೆಯೊಳಿರ್ದಪ"[7]ನೆಂದಾಗಳ್ "ಮೆಲ್ಲನೆ ಬರವೇೞ್ಮಾತನಂ ಕಂಡಱಿಯೆಂ [8]ನೋೞ್ಪೆ"ನೆಂದೊಡಬ್ಬೆ "ಬರವೇೞ್"ಮೆಂದು ಪರಿಚಾರಕಿಯರನಟ್ಟಿದೊಡೆ ದೇವಲೋಕ[9]ದೊಳಿರ್ಪ ದೇವಂ ಬರ್ಪಂತೆ ದಿವ್ಯಗಂಧಮಯಮಾಗಿ ಬಂದೊಡೆ ಅಬ್ಬೆಗ[10]ಳ್ "ನಮ್ಮಾಳ್ದಂ ಪರಮಸ್ವಾಮಿ ಬಂದಿರ್ದಂ ಪೊಡೆವಡುವು"ದೆನೆ "ದೇವ ಜೀಯ ಪ್ರಸಾದಂ" ಎಂಬು[11]ದಂ ಕಲಿಸುವುದಂ ಅರಸ "ನದಱಿಕೊಳ್ಳೇ" ಎಂದಿರ್ದು ನಿಂದಿರ್ದನನಪ್ಪಿಕೊಂ[12]ಡೊಂದೆ ಆಸನದೊಳ್ ಕುಳ್ಳಿರಿಸಿದಾಗಳ್, ಪೆಂಡಿರ್ ಬಂದು ಮಂಗಳದ್ರ[13]ವ್ಯಂಗಳಪ್ಪ ಬಿಳಿಯಸಾಸಿವೆಗಳಿಂ ಸೇಸೆಯನಿಕ್ಕಿ ಪರಸೆ ಕುಳ್ಳಿರ್ದೆಲ್ಲರೋಲಗಿಸು[14]ತಿರ್ಪಿನಂ ಅಬ್ಬೆಗಳ್ ಬೋನಮುಂ ತರಿಸಿ "ನಿಮ್ಮ ತಮ್ಮನ ಗೋಷ್ಠಿಯೊಳಾರೋಗಿಸಲ್ವೇೞ್ಕು"ಮೆಂದರಸನಂ ಪ್ರಾರ್ಥಿಸುವುದುಂ "ಅಂತೆಗೆಯ್ವೆ" ನೆಂದೊಡಾಗಳ್ [15]ಕನಕಮಯಮಪ್ಪ ಪಿರಿಯಪರಿಯಾಣಮನರಸನ ಮುಂದಿಟ್ಟದಱಿಕೊಳ್ ಸಮಾನಮಪ್ಪ ಬೇಱೊಂದು ಪರಿಯಣಮುಂ ಸುಕುಮಾರನ ಮುಂದಿಟ್ಟು ಬೇಱೊಂದು ಸುಖಾಸನದೊಳ್ ಕುಳ್ಳಿ[16]ರಿಸಿ ದಿವ್ಯಾಹಾರಮಂ ಬಡ್ಡಿಸಿದೊಡಾಗಳಾಯಿರ್ವರುಮುಂಡು ಕೆಯ್ಗಟ್ಟಿಗೊಂಡು ಕುಳ್ಳಿರ್ದನಂತರಂ "ಪೇೞಿಮೆಮ್ಮ ತಮ್ಮಂ[17]ವ್ಯಾಧಿತನಾಗಿರ್ಕುಮೋ" ಎಂದರಸನಿಂತೆಂದಂ—

(1) ಇಂತು ನೆಗೞ್ದ ಮಹಿಮೆಯ ಶ್ರೀಮಂತರ್ (ಕ, ಗ) ಇಂತುನೆಗೞ್ದ ಮಹಾ ಶ್ರೀಮಂತರ್ (ಟ) (2) ದಿರ್ಪಂತೆಂ| ನ್ನಂತಾವನೊ....ವಂತನೆಂದು (ಕ, ಘ) ದೊಸೆದಿರಲೆನ್ನಂ (ಟ) (3) ದಿಂದಾ ಪರಮೇಶ್ವರನಂ (ಕ,ಟ) (4) ನೆಂದು ತೊಟ್ಟನೆ (ಕ,ಟ) (5) ವಂದೊಡಲ್ಲಿ ಕುಳ್ಳಿರ್ದು ಎಮ್ಮ ತಮ್ಮ (ಕ, ಟ) (6) ಪಿಡಿಸಿದ (ಕ,ಘ) (7) ನೆಂದೊಡೆ (ಕ) (8) ನೋೞ್ಪಮೆಂದಾಗಳ್ ಯಶೋಭದ್ರೆ (ಕ, ಟ) (9) ಕದಿಂ (ಜ, ಚ) (10) ಳೆಂದರ್ (ಕ) ಯಶೋಭದ್ರೆಯೆಂದರ್ (ಟ, ಚ) (11) ಎಂಬುದೆಂದೊಡದಱಿಕೊಳೇನೆಂದರಸನಱಿ ಕೊಳೆಪ್ಪಿ (ಕ,ಟ) ಎಂಬುದಱಿಕೆಯರಸನೇಳ್ದಪ್ಪಿ (ಜ,ಚ) (12) ಡೊಡೆ ಆಸ (ಕ, ಜ) (13) ವ್ಯಮೆಂದು (ಕ,ಟ) (14) ಸುತ್ತಿಪ್ಪನ್ನೆಗಂ ಯಶೋಭದ್ರೆಬೋನ (ಕ,ಟ) (15) ಚೆಂಬೊನ್ನಪರಿ (ಚ,ಜ) (16) ರಿಸಿಬಡ್ಡಿಸಿದೊಡುಂಡುಪೇೞಿಮೆಮ್ಮ (ಕ, ಟ) (17) ವ್ಯಾಧಿತನಾದಂತಾಗಿರ್ಕು (ಕ, ಟ, ಚ)

ಚಂ|| ಸ್ಥಿರತರಮಾಗಿ ಕುಳ್ಳಿರದೆ ಸಂಚಳಿಪಾಸನಮುಣ್ಮೆ ಕಣ್ಣನೀರ್ |
ಸುರಿ[1]ವುದು ಮುಣ್ಬುದೊಂದ(ಗು)ವುಱ ನೊಯ್ಯನೆ ನುಂಗುತುಮೊಂದ[2]ನೇವದಿಂ ||
ದಿರದುಗುಱುತ್ತರೋಚಕದ ಮಾಱ್ಕೆಯಿನುಣ್ಬುದಿದೊಳ್ಳಿತಲ್ತು [3]ಬ |
ಲ್ಲರಿನಿರದೀಂದೆ ನೋಡಿಪುದು ಮಾಡಿಪುದೀರುಜೆ ಪಿಂಗುವಂತುಟಂ || ೩೯ ||

ವ|| ಎನೆ ಯಶೋ[4]ಭದ್ರೆ ಮುಗುಳ್ನಗೆ ನಕ್ಕು ನಿಮಗಂತಾಗಿ ತೋಱುತ್ತು. ವ್ಯಾಧಿಯೇನು ಮಾತಂಗಿಲ್ಲಂ. ನಿಮ್ಮ ತಮ್ಮನಂದವಮಂ ಬಿನ್ನಪಂಗೆಯ್ವೆಂ. ನಿಮ್ಮಡಿಯಿಂದು ಬಂದೊಸಗೆಯೊಳ್ ಮಂಗಳದ್ರವ್ಯಮೊಂದು ಸಿದ್ಧಾರ್ಥಮೆಂಬ ಬಿಳಿಯಸಾಸಿವೆಗಳಂ ನಿಮಗಮಾತಂಗಂ—

ಕಂ|| ಸೇಸೆಯನಿಕ್ಕಿದೊಡಲ್ಲಿಯ |
ಸಾಸಿವೆಯೆತ್ತಾನುಮೊಂದು [5]ಬಂದವನೊಸೆದಿ ||
ರ್ದಾಸನ[6]ದೊಳಿರ್ದುವೊತ್ತಿ ಚ |
ಳಾಸನನಾಗಿರ್ದ [7]ಪಾಂಗಿದಲ್ತೆ ನರೇಂದ್ರಾ || ೪೦ ||

ವ|| ಮತ್ತ[8]ಮಾತನ ಕಣ್ಣ ನೀರ್ ಸುರಿ[9]ವಂದವಮಂ ಬಿನ್ನ (ಪಂಗೆಯ್ವೆ) ವಿಪ್ಪೆ[10]ನೆಂದು (ಮಾತಂ) ಮಾಣಿಕದ ಬೆಳಗನಲ್ಲದೆ ಸೊಡರಬೆಳಗುಮನಾದಿತ್ಯನ (ಚಂದ್ರನ) ಬೆಳಗು[11]ಮಂ ಕಂಡಱಿಯನಿಂದು—

ಕಂ|| ನಿಮ್ಮಡಿಯೆಲ್ಲಾರೆ [12]ತುಱಿಪದಿ |
ನೆಮ್ಮವರ್ಗಳ್ ಬೆಳಗೆ ಸೊಡರ ನಾ[13]ಬೆಂಕೆಯೊಳಿಂ ||
ದುಮ್ಮಳಿಸಿ ಕಣ್ಣನೀರ್ [14]ಪರಿ |
ಗುಮ್ಮತ್ತೆನ್ನಾತ್ಮಜಂಗೆ ರುಜೆಯಿಲ್ಲಿ[15]ನಿಸುಂ || ೪೧ ||

ವ|| ಅರೋಚಕಮಾದಂತುಗುಱುತ್ತುಮುಣ್ಬ ತೆಱನುಮಂ [16]ಬಿನ್ನವಿಪ್ಪೆಂ. ನಿಚ್ಚಮಾತ ನುಣ್ಬಲ್ಲಿ [17]ಬಾಗುವೋಗರದಕ್ಕಿಯುಂ ಮುನ್ನಿನದೆವಸಮೆಮ್ಮ [18]ಪಿಂತಿಲ್ಲ ಬನದೊಳಗಣ ಕೊಳನ ಪೊಂದಾವರೆಯ [19]ಪೂಗಳೊಳಗೆ ಪೊಯ್ದು ನೂಲೊಳ್ಸುತ್ತಿಟ್ಟಂತು ಪುಷ್ಪವಾಸನದ ಮೆಲ್ಪಿನ ಕಂಪಿನ [20]ಸೊಂಪಿನೊಳಿರ್ದಕ್ಕಿಯುಂ ಮಱುದೆವಸಂ ಕಳೆದುಕೊಂಡು ಬಾಗಿ[21]ದೋಗರಮನುಣ್ಬಂ. ಇಂದು ನಿಮ್ಮಡಿಯಾ[22]ರೋಗಿಪ್ಪಿರೆಂದವು ನೆಱೆಯವಾಗಿ ಪೆಱವಕ್ಕಿಯನವಱೊಳ್ ಪೊಯ್ದು ಬಾಗಿದರಪ್ಪುದಱಿಂದಮಾತನು ಮಾಗಳ್ ಕೂಱನುಣ್ಬಾಗಳ್—

---

(1) ವುತು ಉಂಬುದೊಂ (ಜ, ಚ) (2) ನೇಮದಿಂ (ಚ, ಜ) (3) ಬಲ್ಲಿರಿ(ನಿ)ಯಿದನಿಂದೆ (ಕ, ಟ) ಬಲ್ಲರಿ ನಿದ ನಿಂದೆ.(ಜ, ಚ) (4) ಭದ್ರೆ ನಕ್ಕು ನಿಮ್ಮಡಿಗಳಚಿತ್ತಕ್ಕಂತಾಗಿ ತೋರಿತ್ತೊಂದುಂ (ಕ) ಭದ್ರೆನಕ್ಕು ನಿಮಗಂತಾಗಿ ತೋಱುರ್ಮೊಂದುಂ ವ್ಯಾಧಿಯಿಲ್ಲಂ (ಟ) (5) ಬಂದಿವ (ಕ) (6) ದೊಳಗಿರ್ದೊತ್ತೆ (ಕ) ಮನುದ್ದಿತ್ತೊತ್ತೆ ಚ (ಟ) (7) ಪಾಂಗಿದಿಂತು (ಕ) ಪಾಂಗುಮಿಂತು (ಟ) ಪಾಂಗಿಂದೆಂತು (ಜ, ಚ) (8) ಮಿವನ (ಕ, ಟ) (9) ವುದಂ (ಕ, ಜ) (10) ನೆಂದಿಂತೆಂದಳ್ (11) ಮಂ ಕೇಳ್ದಲ್ಲದೆ ಕಂಡ (ಕ, ಟ) (12) ತುಱಿತದಿ (ಕ, ಟ) (13) ಬೆಂಕಿ ಯೊಳಿರ್ದಿಂ ತಮ್ಮ (ಕ, ಟ) ಬೆಂಕೆಯ ಬೆಳಗಿಂದುಮ್ಮಳಿ (ಚ, ಜ, ಘ) (14) ಸುರಿಗು (ಕ, ಟ) ಪರಿದುಣ್ಮಿದುದು ವೆನ್ನಾ (ಜ, ಚ, ಘ) (15) ಲ್ಲೆನಸುಂ (ಕ, ಟ) (16) ಪಂಗೆಯ್ವೆಂ (ಕ) ವಿಸುವೆಂ (ಟ) (17) ಲಾಗುವೋಗರದ ಕಱವೆಯ (ಕ, ಟ) (18) ಮಾಡದ ಪೆಱಗಣ (ಕ, ಗ) (19) ಪೂವಿನೊಳ್ಪೊಯ್ದು (ಜ, ಚ) (20) ತಣ್ಪಿನೊ (ಗ, ಘ) (21) ಗಿದೊಡಾಗದ (ಕ) ಗಿದೊಡಾಕೂಱ (ಗ, ಘ) (22) ರೋಗಿಪಲ್ಲಿಗವು

ಕಂ|| ಪೂವಿನೊ[1] ಳಾದಕ್ಕಿಯ ಕೂ |
ಬಾ[2] ವುದದಂ ಸಯದಿನುಣ್ಗುಮಲ್ಲದುದಂ ಮ ||
ತ್ತೋ[3] ದೆ ತಾನುಗುಬ್ಬಂ ರುಜೆ |
ಯಾವುದುಮಣಮಿಲ್ಲ ನಿಮ್ಮ ತಮ್ಮಂ[4] ಗೆಂದುಂ || ೪೨ ||

ವ|| ಎಂದೊಡರಸಂ ಬೆಕ್ಕ[5] ಸಂ ಬಟ್ಟು ಸುಕುಮಾರನೆಂಬ ಪೆಸರೀ[6] ತಂಗೆ ತಕ್ಕುದೆಂದು ಕಿಱುದುಪೊಟ್ತಿರ್ದ ತಮ್ಮಂಗೆ [7] ನಿರೋಧಮುಕ್ಕುಂ ಪೋಪೆನೆಂದಾಗಳ್ [8] ಅಬ್ಬೆಗಳೆನಿತಾನುಮ [9] ಮೂಲ್ಯವಸ್ತುಗಳಂ [10] ತಂದಿರಿಸಿ ಮುಂದಿಟ್ಟೊಡೆ [11] ಆಗಳ್ ಈತಂಗಲ್ಲದೆ ಮತ್ತಾರ್ಗಂ ತಗವು. ಎಂದೊಂದುಮಂ ಕೊಳ್ಳದೆ ಆತನಂ ಪೂಜಿಸಿ ಪೋದಂ—

ಕಂ|| ಅಂತಪ್ಪ ಧನಾಢ್ಯಂ ಮ |
ತ್ತಂ[12] ತಪ್ಪತಿಶಯದ ಗರ್ಭಸುಖಿ ಸಲೆ ನೆಗ[13] ಳ್ದಿ ||
ರ್ದಂತಪ್ಪ ರಾಜಪೂಜಿತ |
ನಂತಾ ಸುಕುಮಾರನೊಸೆದು ಸುಖ[14] ಮಿರ್ಪನೆಗಂ || ೪೩ ||

ವ|| ಆತನ ಮಾವಂದಿರಪ್ಪ ಯಶೋಭದ್ರ [15] ಋಷಿಯರೆಂಬರಾ ಮಾಡದ ಪೆಱಗಣ ನಂದನ ವನದೊಳೊಂದುನಿರ್ಜನ್ತುಕ ಪ್ರದೇಶದೊಳ್ [16] ಬಂದಿರ್ದಲ್ಲಿಯೆ ನಿಯಮಸ್ಥರಾಗಿರ್ದು ಬೈಗಿರುಳ್ ಗೌರಿ, ಗಾಂಧಾರಿ, ರಾಕ್ಷಸಿಯೆಂಬ ಮೂಱುಂಜಾವಂ ಪೋದ ಬೞಿಕ್ಕಂ ಮನೋಹರಿಯೆಂಬ ಬೆಳಗಪ್ಪ (ಮೂಱನೆಯ ?) ಜಾವದಾಗಳ್ ತ್ರಿಲೋಕಪ್ರಜ್ಞಪ್ತಿ [17] ಯೆಂಬಾಗಮಗ್ರಂಥಮಂ ಪರಿವಿಡಿಗೆಯ್ವಾಗಳ್ ಮಾಡದ[18] ಮೇಗೆ ಪವಡಿಸಿರ್ದ ಸುಕುಮಾರನೆೞ್ಚತ್ತಾ ಧ್ವನಿಯನಾಲಿಸು ತ್ತಿರ್ದು [19] ನರಕತಿರ್ಯಙ್ಮನುಷ್ಯ ದೇವ(?)ಲೋಕದ ಸ್ಥಿತಿಗಳಂ ಕೇಳ್ದು ದೇವಲೋಕಸ್ಥಿತಿಗ ಳುಮಂ ಅವರವರ [20] ವಿಮಾನಂಗಳುಮನೋದುದಾಗಳ್ ಪದ್ಮಗುಲ್ಮಮೆಂಬ ವಿಮಾನವ್ಯಾವರ್ಣ ನೆ[21] ಯುಂ ಪೇೞುತ್ತುಮಿರೆ ಕೇಳುತ್ತೆ ಮುನ್ನಂ ತಾನಾ ವಿಮಾನದೊಳ್ ಪುಟ್ಟಿ ಬಂದನಪ್ಪುದಱಿಂ ಜಾತಿಸ್ಮರನಾಗಿ ಲೋಕಸ್ಥಿತಿ[22] ಗಳಂ ಬಗೆದು ತನ್ನೊಳಿಂತೆಂದಂ—

(1) ಳಿರ್ದಕ್ಕಿ (ಕ,ಗ,ಜ) (2) ವುದುಮಂ(ಕ,ಟ) (3) ತ್ತೇವದೆತ್ತಾನುಗುಳ್ಗಂ (ಕ,ಟ) (4) ಗಿಂದುಂ(ಕ) ಗಿನಿಸುಂ (ಚ,ಜ) ಗೆಂದಳ್ (ಟ) (5) ಸಮಾಗಿ (ಕ,ಟ) ತಂಗೊಪ್ಪುಗುಮೆಂದು (ಕ) ತಂಗಪ್ಪುದೆಂದು (ಟ) (6) ಪೆಸರಿಂಗಂತಪ್ಪುದೆಂದು (ಜ,ಚ) (7) ನೀರೋಗ (ಕ,ಟ) (8) ಯಶೋಭದ್ರೆಯೆನಿ (ಕ) (9) ಮೂಲ್ಯಾದಿ (ಕ,ಟ) (10) ತರಿಸಿ (ಜ,ಚ) (11) ಆಗಳಿವೀತಂಗಪ್ಪುದೆಂದು (ಕ) ತಂಗೆತಕ್ಕುವು (ಟ) (12) ತಾನತಿಶಯ (ಕ,ಟ) (13) ಳಿರ್ದನ್ನಂತಪ್ಪ (ಕ) (14) ದಿಂದಿರ್ಪಂ (ಟ) (15) ರೆಂಬಾಚಾರ್ಯರ್ ಮಾಡದ (ಕ) ಆತನ ಮಾಡದ (ಗ,ಘ) (16) ಪಟ್ಟಿರ್ದಿರುಳಿನ ಮೂಱನೆಯಜಾವಮಾದಾಗಳ್ ತ್ರಿಲೋಕ (ಕ) (17) ಯೆಂಬ ಪರ ಮಾಗಮಂ (ಕ,ಟ) ಪ್ತಿಯಂಪರಿವಿಡಿ (ಜ,ಚ) (18) ಮೇಗಣ ನೆಲೆಯೊಳ್ ಪಟ್ಟಿರ್ದ (ಕ,ಟ) (19) ನಾರಕಾ ವಸ್ಥೆಗಳುಮನಂತೆ ತಿರ್ಯಗ್ಲೋಕದ ತಿರಿಯಂಚರಮನುಷ್ಯರವಸ್ಥೆಗಳುಮಂ ಕೇಳ್ದು (20) ವಿಳಾಸಂಗಳುಮಂ (ಕ,ಟ) (21) ಯಕೇಳುತ್ತೆ (ಕ) ಳುತ್ತಿರ್ದ (ಟ) (22) ಗಳುಮಂ ಸಂಸಾರಸ್ಥಿತಿಗಳುಮಂ (ಕ, ಟ)

ಶಾ|| [1]ಅಂತಾಗಳ್ ಭುವನಂಗಳಿರ್ದ ತೆಱನಂ ಮಾನಪ್ರಮಾಣಂಗಳಂ |
ಭ್ರಾಂತಿಂದಿ(ದ)ಲ್ಲಿ ತೊಳಲ್ವ ಜೀವನಿಕರವ್ಯಾಪಾರಮಂ ನೆಟ್ಟ [2]ನಿ ||
ನ್ನೆಂತುಂ [3]ತಪ್ಪದ ಜೈನವಾಕ್ಯಮನಿದಂ ಮುಂ ಕೇಳದಾನಿಂತು ನಿ |
ಶ್ಚಿಂತಂ ಮೆಯ್ಮಱೆದಿರ್ದು ಕೆಟ್ಟೆನಿನಿತುಂ ಕಾಲಂಗಳೇಂ ಕರ್ಮಮೋ || ೪೪ ||

ವ|| ಎಂದಾಗಳ್ [4]ನಿರ್ವೇದ(ಗ)ಂ ಪುಟ್ಟೆ [5]ಮಾಡದ ಬಾಗಿಲಿಂದಿೞಿದು [6]ಪೋಪಾಗಳ್ ಕಾಪಿನವರಱಿದೊಡೆನ್ನ ಬಗೆಗೆ ವಿಘ್ನ [7]ಮಕ್ಕುಮಾದಾಗಳುಂ ಸ್ವಾರ್ಥಸಿದ್ಧಿಯಾಗದೆಂದು ಪಟ್ಟೆಸದ ಪುಡಿಕೆಯಂ ತೆಱೆದು ಪಲೞಯಂ, ನೇತ್ರಮಂ, ದುಕೂಲದ ಚಿತ್ರಾವಳಿಯ ವಸ್ತ್ರಂಗಳುಮಂ ತೆಗೆದೊಂ[8]ದೊಂದಱೊಳ್ ತೊಡರ್ಚಿ ಕಟ್ಟಿ ಮೊದಲನೊಂದು ಕಂಭದೊಳ್ ಕಟ್ಟಿ ಮಾಡದ ಪೆಱಗ[9]ಣ್ಗದಂ ಮುಱಿದಿೞಿಯೆ ಬಿಟ್ಟು ಅಂತಾವಸ್ತ್ರರಜ್ಜುಮೂಲಮಂ ಪಿಡಿದಿೞಿದು ಬನಮಂ ಪೊಕ್ಕು ಋಷಿಯು[10]ರ್ದಿರ್ದ ದೆಸೆಯತ್ತ ಪೋಗಿ [11]ಕಂಡು ಬಲಂಗೊಂಡು ಪೊಡೆವಟ್ಟು "ದೀಕ್ಷಾಮಿಚ್ಛಾಮಿ ಭಟಾರಾ[12]" ಯೆನೆ ಭಟ್ಟಾರಕರ್ ಬಗೆದು ನೋಡಿ "ನಿನಗಿಂ ಮೂಱುದಿವಸದಾಯು[13]ಷ್ಯಮುಂಟೀ ಪದದೊಳೊಳ್ಳಿತ್ತಂ ಬಗೆದೆ" ಯೆಂದು ದೀಕ್ಷೆಯಂ ಕುಡೆ ಕೆಯ್ಕೊಂಡು "ತಪಂಗೆಯ್ಯಲ್ಕೆಡೆಯಿಲ್ಲ, ಸನ್ಯಸನ ಪ್ರತ್ಯಾಖ್ಯಾನ[14]ಮನೀಯಿಂ" ಎಂದು ಬೇಡಿ ಕೆಯ್ಕೊಂಡಾಗಳ್ ಪ್ರಾಯೋಪಗಮ(ನ)ಮಂ ಗೆಯ್ದು ಮಹಾಪುರುಷಂಗೆ[15]ಪರ್ಯಟಿಸ್ಯಿಗೆಯ್ಯಲ್ವೇಡೆಂದು(ಪೇೞ್ದು) ಭಟಾರರಲ್ಲಿಂ ಬೆಳಗಾದಾಗಳೊಂದು ದೆಸೆಗೆ ಪೋದರ್. ಅಂತು ಸುಕುಮಾರಮುನಿಯಾ ಬನದಿಂ ಪೊಱಮಟ್ಟು [16]ಮಹಾಕಾಳಮೆಂಬಡವಿಯಂ ಪೊಕ್ಕು ನಿರ್ಜನ್ತುಕಪ್ರದೇಶದೊಳ್ ಮೆಯ್ಯನಿಕ್ಕಿ ಧರ್ಮಧ್ಯಾನಾರೂಢನಾಗಿ—

ಕಂ|| ಉತ್ತಮು[17]ಗುಣನಿಂತಿರ್ಪಿನ |
ಮತ್ತಾತನ ಸೂಱೆಗ್ಗವಂದ [18]ಪರದಿ ಘನೋದ್ಯ ||
ದ್ವೃತ್ತಕುಚೆ ನಿದ್ದೆ[19]ದಿಳಿದೇ |
ೞುತ್ತಾತನನಲ್ಲಿ ಕಾಣ[20]ದತಿಸಂಭ್ರಮದಿಂ || ೪೫ ||

---

(1) ಇಂತೀತ್ರೈಭುವ (ಕ,ಟ) (2) ನಿಂತೆಂದುಂ (ಕ) (3) ತಪ್ಪದು (ಚ,ಜ) (4) ನಿರ್ವೇಗಂ (ಕ, ಟ) ಳುಬ್ಬೆಗಂ (ಚ,ಜ) (5) ಮೇಗೆಪವಡಿಸಿರ್ದ ಸುಕುಮಾರನುಬ್ಬೆಗಂ (ಜ, ಚ) (6) ಪೋಪೆನಪ್ಪೊಡೆ (ಕ, ಟ) ಪೋದೆನ (7) ಮಕ್ಕುಮೆಂದು ಪುಟ್ಟಿದ್ದ ಪುಡಿಕೆಯಂ (ಕ,ಟ) ಪಟ್ಟೆಸದ ಬಂಡಾರದ (ಜ,ಚ,ಘ) ಮಕ್ಕುಮೆಂದ ನುಮಾನಿಸಿ ನೋಡಿ (ಗ,ಖ) (8) ದೊಂದನೊಂದಱೊಳ್ (ಕ) (9) ಣಂದಮಿೞಿಯೆ (ಚ,ಜ) (10) ರಿರ್ದ ಡೆಗೆ (ಚ, ಜ) (11) ಕಂಡವರಂ ತ್ರಿಃಪ್ರದಕ್ಷಿಣಂಗೆಯ್ದೆಱಗಿ ಕೆಯ್ಗಳಂ ಮುಗಿದಿರ್ದು ದೀಕ್ಷಾ (ಕ,ಟ,ಜ) (12) (ದೀಕ್ಷೆಯನೀಯಭಟಾರಾ) ಎಂದು ಘ ಪ್ರತಿಯಲ್ಲಿದೆ, ದೀಕ್ಷೆಯಿತ್ತಾಮಿ (ಖ) (13) ಷ್ಯಪೊಳ್ಳಿತ್ತಂ (14) ಮಂಕುಡಿಮೆಂದು ಕೆಯ್ಕೊಂ (ಕ,ಚ) (15) ಪರಿವೇಷ್ಟಿ (ಕ,ಗ) (16) ಟ್ಟು ಪೋಗಿ ಮಹಾ ಕಾಳಮಂ ಪೊಕ್ಕಲ್ಲಿಂದತ್ತ ನಡೆಯಲಾಱದೆ ನಿರ್ಜಂ (ಕ, ಟ) (17) ಮುನಿಯಿಂತಿ (ಕ, ಗ, ಚ) ಗುಣದಿಂತಿ (ಘ) (18) ಪರದಘ (ಕ,ಚ) (19) ಯಿಂದೆ।ಳ್ಚತ್ತಾತ (ಕ,ಜ) (20) ದತಿಭಯಭ್ರಮದಿಂ(ಕ) ಭಯದಿಂದಂ (ಖ,ಗ)

ವ|| ಪರಿಚಾರಕಿಯರ[1] ನಟ್ಟೆ ತಾನುಮವರುಂ ಮಾಡದ ನಾಲ್ಕುಂದೆಸೆಯುಂ ನೋಡಿ ಪೋಗಿ ಬೇಗಮೆಮ್ಮತ್ತೆಗೆ ಪೇೞಿಮೆಂದ[2]ಟ್ಟಿದೊಡವರ್ ಬಂದು ಮುನ್ನಮೆ ತೊಟ್ಟನೆರ್ದೆಯುರಿಯುಂ ಪುಟ್ಟೆ ನಿದ್ರೆಗೆಟ್ಟಿರ್ದ ಯಶೋಭದ್ರೆಗಱಿಪಿ[3]ದೊಡೆ ತಳವೆಳಗಾಗಿಯೆೞ್ದು ತಾನುಮಾಕೆಗಳುಂ ಮಾಡದೊಳಗೆಲ್ಲಂ ನೋಡಿ ಮಗನಂ ಕಾಣದೆ [4]ಬೆಱಗಾಗಿರ್ದು ಬೆಳಗಾದಾಗ[5]ಳೆಲ್ಲಾ ದೆಸೆಯುಂ ನೋೞ್ಪಾಗಳ್ ಮಾಡದ ಪೆಱಗೆ ಸುಕುಮಾರಂ ಸಂಸಾರಮಂ [6]ಗೆಲ್ದು ಪೋಪುದರ್ಕೆ (ಪೋಗಲ್ಕೆ) ಕಟ್ಟಿದ ವಿಜಯಧ್ವಜಮಿದೆಂಬಂತೆ ಮಿಳಿರ್ದು ಪೊಳೆವ ದುಕೂಲದ ಚಿತ್ರಾವಳಿಯ ಮಾಲೆಯುಂ ಕಂಡಿಲ್ಲಿಂದಮಿೞಿದು ಪೋದನೆಂಬುದನಱಿದು ಬೆಚ್ಚನೆ ಸುಯ್ದು ಬಿದಿಯಂ ಬಯ್ದು ಕಣ್ಣ[7] ನೀರ್ ಸುರಿಯೆ ಮಾಡದಿಂದಿೞಿ[8]ದು ಬನಮಂ ಪೊಕ್ಕಱಸಿ ಕಾಣದೆ ಸೊಸೆವಿರ ಮಾಡಂಗಳೊಳೆಲ್ಲಂ ನೋಡಿ ಯಾಕೆಗಳ್ವೆರಸು ಕೊಳದಿಂ ಪೊಱಮಟ್ಟ ಹಂಸೆಗಳ (ಮಱಿಗಳ) ನೆರವಿಯಂತೆ ನಂದನ [9]ವನಮಂ ಪೊಕ್ಕು ಮೆಲ್ಲಮೆಲ್ಲನೆ ನಡೆಯುತ್ತುಂ—

ಕಂ|| ಮಲ್ಲಿಗೆಯೇ ಮಾಮರನೇ |
ಪಲ್ಲವದಿಂ ತೋರ್ಪಶೋಕೆಯ [10]ಮರನೇ ||
ನಲ್ಲನ ಕಂಡಿರೆ ಪೇೞಿಂ |
ಮೆಲ್ಲಡಿಗಳ್ ನೋಯೆ ಬಂದ ಮನಸಿಜನಿಭನಂ || ೪೬ ||

ವ|| ಎಂದು ವಿಕಳತೆಯಿಂ ಬೆಸಗೊಳುತ್ತುಂ ಬಳ್ಳಿಮಾವಿನ, ನಾಗಸಂಪಗೆಯ, ಸುರಹೊನ್ನೆಯ, ಈೞೆಯ, ಬಾೞೆಯ, ತೆಂಗಿನ, ಕೌಂಗಿನ, ನಾರಂಗದ, ಮಾದುಪಲದ [11]ಮರಂಗಳ ಮಱೆಯೊಳಱ[12]ಸುತ್ತುಂ, ಸುತ್ತಲುಂ ಬಂದು ನೋಡುತ್ತುಂ, ಅಶೋಕೆಯ, ಮಲ್ಲಿಗೆಯ, ಮಾಧವೀಲತೆಯ, ಮಂಟಪಂಗಳೊಳಗೆ ಪೊಕ್ಕು ತೊಳಲ್ದಱಸಿ ಯೆಲ್ಲಿಯುಂ ಕಾಣದೆ [13]ಬೞಲ್ದು ಬೈಗಾದಾಗಳ್ ಮನೆಗೆ ಬಂದು ಪಿರಿಯ ಮಾಡದೊಳಿರ್ದು [14]ತೆಱಂಬಿನೊಳ್ ಬಿೞ್ದ ಮೀನಂತೆ ಮಿಡಮಿಡಮಿಡುಕಿ, [15]ಪಱಿದಿಕ್ಕಿದೆಳಲತೆಯಂತೆ ಕೊಱಗಿ, ಸಮುದ್ರ[16]ದ ನಡುನೀರೊಳ್ ಬಿೞ್ದಂತೆ ಮಱುಗಿ, ಬ್ರತಂಗೆಟ್ಟ [17]ಕನ್ನೆಯಂತೆ ಕುಂದಿ, ದೋಸಂಬೊರ್ದಿದ ತುೞಿಲಸಂದನಂತೆ ಕಂದಿ, ಚಾರಿತ್ರಂಗೆಟ್ಟ ಋಷಿಯಂತೆ [18]ಮೆಯ್ಯಱಿಯದೆ, [19]ಕೋಳ್ಪಟ್ಟರಂತೆ ಪುಯ್ಯಲಿಟ್ಟೊಳಱಿಯುೞುತ್ತುಮಿರೆ – ನಂಟರೆಲ್ಲಂ ಕೇಳ್ದು ಬಂ"ದಿನ್ನಮಱಸುವಂ ಬನ್ನಿ"ಮೆಂದು ಮನೆಯಂ ಪೊಱಮಟ್ಟು ಪೊೞ[20]ಲೊಳಗೆ ತೊಳಲ್ದಱಸುತ್ತುಂ—

(1) ನಟ್ಟೆ ಬೇಗಮೆಮ್ಮತ್ತೆಗಳ್ಗಿದನಱಿಪಿ (ಕ,ಟ) ತ್ತೆಗಳ್ಗಱಿಯಪೇಳಿ (ಚ,ಜ) (2) ದಟ್ಟಿದಾಗಳಲ್ಲಿಯುಂ ಮುನ್ನಮೆ ಮರುಕಂಪುಟ್ಟೆ ನಿದ್ರೆ (ಕ,ಟ) (3) ದೊಡೆಬೇಗಂಬಂದುನೋಡಿಮಗನಂ (4) ಕಾಣದುಮ್ಮಳಿಸುತಿರ್ದು ಬೆಳ (ಕ,ಟ) (5) ಳ್ ಮೇಗಣನೆಲೆಯನೇಱಿ ಬಳಸಿಯುಂನೋಡಿ (ಕ,ಟ) (6) ಗೆಲ್ದು ಪಳಯಿಗೆಯನೆತ್ತಿಸಿದಂತೆ ನಿಮಿರ್ದು(ಕ,ಘ) (7) ನೀರಿೞಿಯೆ (ಕ,ಜ) (8) ೞಿದು ಸೊಸೆವಿರ ಮಾಡಂ (ಚ,ಘ) (9) ವನದಿಂಮೆಲ್ಲನೆ (ಕ,ಟ) (10) ಬನಮೇ (ಕ,ಚ) (11) ಮರಗಳೊಳ್ (ಕ) (12) ಸುತ್ತುಂ ಬಂದು (ಟ) (13) ಬಳಲ್ದು ರಾತ್ರಿಯೊಳ್ ಮನೆಗೆ ಬಂದು ಆಪಿರಿಯಮಾಡ (ಟ) (14) ತರಂಬಿ (ಕ) ತರುಂಬಿ (ಖ) ಅಱುಬಿ (ಚ,ಜ) (15) ಪರಿದಿಕ್ಕಿದ (ಚ,ಜ) (16) ದೊಳ್ಬಿರ್ದು ಕೆಟ್ಟಂತೆ (ಟ) (17) ಕಂತಿಯಂತೆ ಕಂದಿ (ಕ,ಟ) (18) ಮೆಯ್ಯಱಿಯದೆ (ಚ,ಜ) (19) ಮೆಟ್ಟಿಟ್ಟು (20) ಲೊಳೆಲ್ಲ

ಕಂ|| ಕಂಡಿರೆ ವಣಿಜೋತ್ತಮನಂ |
ಕಂಡಿರೆ[1] ಸುರಪತಿಸಮಾನ ಭೋಗಿಯನಿಂತೀಂ ||
ಕಂಡಿರೆ [2]ಮನೋಜನಿಭನಂ |
ಕಂಡಿರೆ ನೆಗಲ್ದ[3]ಬ್ಬಕುಳನನತಿನಿರ್ಮಳನಂ || ೪೭ ||

ಉ|| ಕಂಡಿರೆ ಗಾಳಿಯುಂ ಬಿಸಿಲುಮೆಂಬಿವವೆನ್ನವೊ ಪೇೞಿಮೆಂಬನಂ |
ಕಂಡಿರೆ ಚಿಂತೆಯಂ ಭಯಮುಮೆಂ[4]ಬಿವುವೆನ್ನವೊ ಪೇೞಿಮೆಂಬನಂ ||
ಕಂಡಿರೆ ಸಗ್ಗದಿಂದಿೞಿದು ಬಂದಮರೇಂದ್ರನ ತೇಜ[5]ದನ್ನನಂ |
ಕಂಡಿರೆ ಮಿಕ್ಕ ಗರ್ಭಸುಖಿಯಂ ಸುಕುಮಾರನನತ್ಯುದಾರನಂ ೯ ||

ವ|| ಎಂದೆಲ್ಲರುಮಂ ಬೆಸಕೊಳು[6]ತ್ತುಮೆಲ್ಲದೆಸೆಗಳುಮಂ ನೋಡಿ ಕಾಣದೆ ಪೊೞಲೆಲ್ಲಮಂ ತೊಳಲ್ದು ಬಳಲ್ದು ಬೈಗಾದಾಗಳನಿಬರುಂ ಮಗುೞ್ದು ಬಂದು[7]ಮನೆಯಂ ಪೊಕ್ಕಾಗ[8]ಳಾ ಮನೆಯೆಂತಿರ್ದುದೆಂದೊಡೆ—

ಮಲ್ಲಿಕಾ|| ಇಂದ್ರನಿಲ್ಲದ ಸಗ್ಗದಂತಸುವಿಲ್ಲ[9]ದಿರ್ದೊಡಲಂತಿರುಳ್ |
ಚಂದ್ರನಿಲ್ಲದ ಪೊೞ್ತಿನಂಬರದಂತನರ್ಘ್ಯಲಸನ್ಮಹಾ ||
ರುಂದ್ರನಾಯಕರತ್ನಮಿಲ್ಲದದೊಂದು ಭೂಷಣದಂತೆ[10]ಗ |
ರ್ಭೇಂದ್ರನಿಲ್ಲದ ಮಾಡ[11]ದೊಂದಿರವುಂ ಪಲರ್ ನೆರೆದಿರ್ದೊಡಂ || ೪೯ ||

ವ|| [12]ಅಂತಲ್ಲಿಯೆಲ್ಲರುಂ ನೆರೆದಿರ್ದುಂ ಮನೆ ಮನೆವಾೞ್ತೆ ಪಸಿವು ನಿದ್ದೆ ಯೆಂಬಿವನೊಂದುಮನಱಿಯದೆ ಚಿತ್ರದ ರೂಪುಗಳಂತೆ ನಿಶ್ಚೇಷ್ಟಿತರಾಗಿರ್ಪಿನಂ ಅತ್ತ ಸುಕುಮಾರಂ [13]ಮುನ್ನಿನ ಭವದತ್ತಿಗೆ(?) [14]ಕ್ರೋಧಕಷಾಯೋದ್ರೇಕದಿಂ ಸತ್ತು ಸಂಸಾರದೊಳ್ ಭ್ರಮಿಸುತ್ತೀ ಭವದೊಳ್ ನರಿಯಾಗಿ ಪುಟ್ಟಿ ತೊಳಲುತ್ತುಂ ಮಹಾಕಾಳಬನದೊಳಗೆ ಸುಕುಮಾರಂ [15]ನಡೆದ ಪಜ್ಜೆಯೊಳ್ ಕಾಲೊಡೆದು ನೆತ್ತರ್ ಸುರಿದೊಡಾ ನೆತ್ತರ ಪೊಲಸಿನ ನಾತಕ್ಕೆ ಪಜ್ಜೆವಿಡಿದು [16]ಬಂದು ಅಲ್ಲಿ ಪಟ್ಟಿರ್ದ ಋಷಿರೂಪಂ ಕಂಡು ಪೆಣನೆಂದು ಬಗೆದು ಸಾರ್ದು ತನ್ನೆರಡುಂಮರಿಗಳೊಂದುಕಾಲಂ ತಾನೊಂದು ಕಾಲಂ ಪತ್ತಿ ತಿಂಬಾಗಳಾ ಸುಕುಮಾರ[17]ಮುನೀಂದ್ರಂ—

---

(1) ಸುರಸದೃಶ ಭೋಗಭಾಗಿಯನೆತ್ತಂ (ಕ, ಟ) (2) ಮನಸಿಜ (ಕ, ಟ) (3) ಳ್ದಿಭ್ಯ (ಜ,ಚ,ಛ) (4)ಮೆಂಬಿ(ವ)ದ ನೊಯ್ಯನೆಕಾಣದಾತನಂ (ಕ,ಟ) ಮೆಂಬಿವು ಮೆಂತವೊ(ಕ,ಟ) (5)ದಂದನಂ(ಕ,ಟ) (6)ತ್ತುಂ ಮತ್ತಮೆಲ್ಲೆಡೆಯೊಳಂ ಪೊಕ್ಕಱಸಿ ಕಾಣದೆ (ಕ,ಟ) (7) ಮಾಡಮಂ(ಕ,ಜ) (8) ಳಾಮಣಿ ಮಾಡಮೆಂತಿ(ಕ,ಟ) (9) ದಿರ್ಪೊ (ಕ,ಟ) (10) ವೈಶ್ಯೇಂದ್ರ (ಕ,ಟ) ತ್ರಿದಶೇಂದ್ರನೀಲದಮಾಡ (ಚ,ಜ,ಛ) (11) ದೊಂದಿರವಲ್ಲಿ (ಖ,ಗ) (12) ಎಂದಲ್ಲಿ ಯೆಲ್ಲರುಂ ನೆರೆ ದುಬ್ಬೆಗಂ ಬಡುತಿರ್ದು ಬೆಳಗಾದಾಗಳ್ ದೆಸೆದೆಸೆಗೆಲ್ಲಮಱಸಲಾಳ್ಗಳನಟ್ಟಿ ತಂತಮ್ಮಮನೆವಾೞ್ತೆಯ ಚಿಂತೆಯಿಲ್ಲದೆ ಪಸಿವಂ ನೀರೞ್ಕೆಯಂ ನಿದ್ದೆಯು ಮೆಂಬೊಂದುಮನಱಿ (ಕ, ಗ, ಛ) (13) ವಾಯುಭೂತಿಯಾದಂದಿನ (ಕ,ಟ) (14) ತ್ತಿಗೆ ನರಿಯಾಗಿ ಪುಟ್ಟಿತೊಳಲುತ್ತು (ಚ, ಜ) (15) ನಡೆದಲ್ಲಿ ಕಾಲೊಡೆದು ನೆತ್ತರ್ಪತ್ತಿರ್ಪ (ಕ,ಟ) (16) ಬಂದೇಕಪಾರ್ಶ್ವದೊಳ್ ಪಟ್ಟಿರ್ದ (17) ಮುನಿಪಂ

ಕಂ|| ಪೋದ ಭವಂಗಳೊಳೊಡಲಿಂ |
ದಾದುದು[1] ಕೇಡೆಂದು ಬಗೆದು ಮೆಯ್ಯ ಮಮತ್ವಂ ||
ಪೋದುದಱಿಂ ಶುಭಮತಿ ತನ |
ಗಾದುದಱಿಂ ತಳರದಿರ್ದನುನ್ನತಚಿತ್ತಂ || ೫೦ ||

ವ|| ಅಂತಾ ನರಿಗಳ್ ಮೊಱಕಾಲ್ವರಮೊಂದುದಿವಸಂ ತಿಂದು ಮಱುದಿವಸಮೆರಡುತೊಡೆಗಳುಮಂ ತಿಂದು ಸಮೆದು ಮೂಱನೆಯ ದಿವಸಂ ನಡುವಿರಳಪ್ಪಾಗಳ್ ಬಸಿಱ ಬಱಿಯಂ ತಿಂದು ಕರುಳನುರ್ಚಿದಾಗಳ್ ಆ[2] ತಿರ್ಯಗುಪಸರ್ಗಮಂ ಸೈರಿಸಿಕೊಂಡು ಧರ್ಮಧ್ಯಾನದಿಂ ನಿಶ್ಚಳಮನನಾಗಿ ಮುಡಿಪಿ ಪಂಚಾಣೂತ್ತರೆಗಳ ನಡುವಣ ಸರ್ವಾರ್ಥಸಿದ್ಧಿ[3]ಯೊಳ್ ಪುಟ್ಟಿದಾಗಳ್ ಕಿನ್ನರಕಿಂಪುರುಷಾದಿ ದೇವರ್ಕಳಾಗಳೆ ಆಸನಕಂಪದಿಂದಱಿದು ಕೃತಾರ್ಥನಾದ ಮಹಾಪುರುಷನ ಶರೀರಮಂ ಪೂಜಿಸಿ ಬರ್ಪಂ ಬನ್ನಿಮೆಂದು ಪೊಱಮಟ್ಟು ಬಂದು ಮಹಾಕಾಳದತ್ತಭಿಮುಖಮಾಗಿ ದೇವನಿಕಾಯಮಾಕಾಶದೊಳ್ ಪೋಪಾಗಳಾ ಯಶೋಭದ್ರೆಯೊರ್ವಳೆ ಮಾಡದ ಮೇಗಣ ನೆಲೆಯನೇಱಿ ಮಾನಸರಾರುಮೆನ್ನ ಮಗನ ಪೋದ ದೆಸೆಯಂ ಪೇೞ್ವರಿಲ್ಲಿಂ ದಿಶಾದೇವತೆಗ[4]ಳಪ್ಪೊಡಂ ಪೇೞ್ದೊಡೊಳ್ಳಿತ್ತು ಯೆಂದು ಚಿಂತಿಸಿ ಮೆಯ್ಯನಿಕ್ಕಿರ್ದಾಗಳ್ ಆಕೆಗೆ ದಿವ್ಯಗಂಧ[5]ಮಯಮಪ್ಪೆಲರ ತೀಟದಿಂ ಸುಕುಮಾರಂ ಬಂದಂತೆ[6]ರಾಗಿಸಿ ಶಂಖಕಾಹಳಾರವಂಗಳಂ ಕೇಳ್ವುಮತ್ತೆ [7]ಸುಯ್ದೆೞ್ದು ನಿಂದಾ ಧ್ವನಿಯನಾಲಿಸುವಾಗಳ್—

ಕಂ|| ನಲ್ಲ[8]ವೊ ಸುಕುಮಾರಾ ನೀ |
ನಲ್ಲದರಾರ್ ತೊಟ್ಟಸಿಂತು [9]ದೀಕ್ಷಿತರಾ[10]ದರ್ ||
ಎಲ್ಲ ತಪಂಬಟ್ಟವರೊಳ |
ಗೆಲ್ಲಂ ಪ್ರಾಯೋಪಗಮನವಿಂತಾರ್ಗಾಯ್ತೋ || ೫೧ ||

ಶಾ|| [11]ಇಂತೀ ತಿರ್ಯಗುಪದ್ರವಕ್ಕೆ ಮನದೊಳ್ ಸೈರಿಪ್ಪನಾವಂ ತಗು |
ಳ್ದಿಂತಾವೊಂ ಪರಿಣಾಮಮಂ [12]ನಿಲಿಸಿದೊಂ ನಿನ್ನಂತವಷ್ಟಭದಿಂ ||
ದಿಂತಾವಂ ನೆಗೞ್ದರ್ದ[13]ನುತ್ತರ ವಿಮಾನೋತ್ಪನ್ನನಾದೊಂ ನರಂ |
ಗಿಂತಾವೊಂಗೆರಡುಂಭವಂ ಸಫಲ[14]ಮಾಯ್ತುತ್ಕೃಷ್ಟಪುಣ್ಯಾರ್ಜಿತಂ || ೫೨ ||

---

(1) ನೋೞವೆಂದು (ಜ, ಚ, ಗ) (2) ತಿರಿಕೋಪಸರ್ಗಮಮಂತಾ ಮಹಾಪುರುಷಂ ಸೈರಿಸಿ (ಚ,ಜ,ಗ) (3) ಯನೆಯ್ದಿದಾಗಳ್ (ಗ,ಘ,ಖ) (4) ಳಾದೊಡಂ (ಕ) (5) ಮಿಶ್ರಿತ (ಕ,ಗ) (6) ರಾಗಮಾಗೆರ್ದು (ಗ,ಖ) (7) ಸುಯ್ದು ನಿಂದಾಲಿಸುವಾಗಳ್ (ಕ,ಟ) (8) ನೆಸುಕುಮಾರನೆ (ಕ, ಟ) (9) ದೀಕ್ಷೆಗೆ ಸಂದರ್ (ಕ,ಟ) (10) ದರೊಳೆಲ್ಲಂ ತಪಂ (ಕ) ದರ್। ಬಲ್ಲೆಂದೀಕ್ಷಿತರಾದರೊ। ಳೆಲ್ಲಂ (ಟ) ಬಲ್ಲೆತಪಂಬಟ್ಟವರೊಳ।ಗೆಲ್ಲಂ (ಚ,ಜ) (11) ಇಂತಾವಂ ತಿರಿಕೋಪಸರ್ಗಮನಿದಂ ಸೈರಿಪ್ಪಗಂಡಂ(ಕ,ಟ) (12) ನಿಱಿಸಿದೊಂ (ಕ,ಟ) (13) ನುತ್ತಮ (ಜ,ಚ) (14) ಮೋಕ್ಷಾಂ ಸತ್ಪುಣ್ಯದಿಂ ಗಣ್ಯದಿಂ (ಟ) ಮೊಸತ್ಪುಣ್ಯದಿಗೌಣ್ಯದಿಂ (ಕ) ಗಳುಣ್ಯದಿ (ಚ)

ಕಂ|| [1]ಧೀರಾ ! ನಮೋಸ್ತು ಗುಣಗಣ |
ಧಾರಾ ! [2]ರಾಜಿತ ತಪಃಕ್ರಮೋದಿತ[3]ಶೂರಾ ! ||
[4]ವೀರಾ ! ನಮೋಸ್ತು ವಿಳಸ |
ದ್ಧಾರಾ ! [5]ಸಂಯತಿ ವಿನೂತ್ನ ರತ್ನಾಧಾರಾ || ೫೩ ||

ವ|| [6]ಎಂದಡಿಗಡಿಗೆ ಪೊಗೞುತ್ತುಂ ಪೊಡೆವಡುತ್ತುಂ ಪೋಪಾಗಳಾ ಧ್ವನಿ[7]ಯಿಂದ ಮೆನ್ನ ಮಗಂ ತಪಂ[8]ಬಡುತುಮೆ ಪ್ರಾಯೋಪಗಮ[9]ನವಿಧಿಯಂ ಕೆಯ್ಕೊಂಡು ತಿರಿಕೋಪಸರ್ಗದಿಂ [10]ಮಡಿದನೆಂದು ನಿಶ್ಚೈಸಿ[11]ಬೆಳದಾಗಳಾ ಮಾಡದಿಂದಿೞಿದು ಬಂದು ಬಂಧುಗಳುಮಂ ಸೊಸೆ ವಿರುಮುಂ [12]ಕರೆದು ಸುಕುಮಾರನಪ್ಪೊಡೆ ಮುನಿದು ಪೋಗಿರ್ದಂ. ನೀವೆಲ್ಲಂ [13]ವಿಾವುದುಣ್ಬುದು ತಂಬುಲಂಗೊಳ್ವುದು [14]ಚಿಂತಿಸಲ್ವೇಡೆಂದು[15]ಆೞ[3] ನುಡಿದು ಬೞಿಯಂ ಸೊಸೆವಿರ ಮೊಗಮಂ ನೋಡಿ " ಬೇಗಂ ಕೆಯ್ಗಿಯ್ದು ಬನ್ನಿಂ ಬೇಗಂ ಪೋಗಿ ತಿಳಿಪಿ ತರ್ಪ" ಮೆನೆ [16]ಮೊಗಮಿನಿಸಲರ್ದು ಕೆಲಬ " ರಿದೆಂತಪ್ಪಮಾತೆಂ " ದು ತಂತಮ್ಮ ಮಾಡಂಗಳ್ಗೆ ಪೋಗಿರ್ದೊರ್ವರೊರ್ವರಲ್ಲಿಗೆ ವಂದಿಂತೆಂದರ್—

ಕಂ|| ಎನ್ನಂ ಪತಿ ಕಂಡಲ್ಲಿಂ |
[17]ಮುನ್ನಮೆ ತಾಂ ಬಾರದಂದು ನಿನಗೆ ಸಹಸ್ರಂ ||
ಪೊನ್ನ[18]ನಿರದೀವೆನೆಂದೊಡೆ |
[19]ಭಿನ್ನಾಂಬುಜವದನೆ ನುಡಿಗು ಮಾಕೆಗೆ ನಯದಿಂ || ೫೪ ||

ವ|| ಕಂಡನಿತಱಿೞಳೆ ಬರ್ಕುಮೆಂಬ ಪೂಣ್ಕೆಯನಱಿಯೆನಬ್ಬಾ !

ಕಂ|| ಆಂ ಪೋಗಿ [20]ನುಡಿದೆನಪ್ಪೊಡೆ |
ತಾಂ ಪಿರಿದನುರಾಗಮಾಗಿ ಬಾರದೆ ಮಾಣ್ದಂ ||
ದೇಂ [21]ಪಡೆವಾತೊ ನಿನಗೀ |
ವೆಂ ಪೊನ್ನಂ ಲಕ್ಕಲೆಕ್ಕದಿಂ [22]ಕಮುಳಮುಖೀ || ೫೫ ||

ವ|| ಎಂಬ ಮಾತಂ ಕೇಳ್ದು ಮತ್ತೊರ್ವಳಲ್ಲಿಗೆಬಂದು ನುಡಿದಾಗಳೆ ಬರ್ಕುಮೆಂಬಗ್ಗಳಿಕೆಯ ಮಾತನಱಿಯೆನಬ್ಬಾ !

---

(1) ವೀರಾ (ಕ,ಟ) (2) ಜಿನಮತತಪಃ (ಚ,ಜ) (3) ಸೂರಾ (ಕ,ಗ) (4) ಧೀರಾ(ಜ,ಚ) (5) ಸಂಯಮವಿನೂತ (ಕ,ಟ) ರತ್ನಾಕಾರಾ (ಜ,ಚ) (6) ಎಂದು ಪೊಗೞು (ಕ,ಟ) (7) ಯನಾಲಿಸುತ್ತೆ (ಕ, ಟ) ನಾಲಿಸುತ್ತುಂ ತನ್ನ (ಜ,ಚ) (8) ಬಟ್ಟುಪ್ರಾ (ಕ,ಟ) ಬಡುತ್ತೆಬೇಗಂ ಪ್ರಾ (ಚ, ಜ) (9) ನಮಂ (ಕ, ಟ) ಮಂಕೆಯ್ಕೊಂಡು ಮುಡುಪಿದನೆಂದು (10) ಮುಡುಪಿ ಸರ್ವಾರ್ಥಸಿದ್ಧಿಯನೆಯ್ದಿದನೆಂದು (ಜ,ಚ) (11) ತನ್ನಂತಾನೆ ಸಂತೈಸಿಕೊಂಡಿರ್ದು (ಕ,ಟ) ಸೈರಿಸಿರ್ದು(ಜ,ಚ) (12) ಬರಿಸಿ(ಕ,ಟ) (13) ಮಿಂದುಂಡು....ಗೊಂಡು (ಛ,ಚ) (14) ಚಿಂತೆಯನುಳಿಯಮೆಂದು (ಗ, ಘ) (15) ದಾಱಿಸೆ (ಜ,ಚ,ಗ) (16) ಮೊಗಂಗಳಿನಿ (ಜ, ಚ) (17) ಮುನ್ನಂ (ಚ,ಜ) (18) ನೊಸೆದೀ (ಜ,ಚ) (19) ಭಿನ್ನಾಬ್ಜ (ಕ) ಬಿನ್ನಾಂಬುಜ (ಟ) (20) ಮುನಿದೆ(ಜ) (21) ಪಿರಿದುಮಾತು (ಟ) ಪೆಱವುಮಾತು (ಕ) (22) ವನಜ (ಗ)

ಕಂ|| ಆಂ ಕಾಲ್ವಿಡಿದೊಡೆ ಮತ್ಪತಿ |
ತಾಂ ಕಡೆಗಣಿಸಿರ್ದೊಡೆನ್ನ ಸರ್ವಸ್ವಮುಮಂ ||
ನೀಂ ಕವರ್ವು[1]ದೆಂದು ನಚ್ಚಿದ |
ಪೊಂಕಂ ಬಱಕೇವುದಂದೆ ಸಾವುದು [2]ಪೆಱತೇಂ || ೫೬ ||

ವ|| ಎಂದೊ[3]ಡೊರ್ವರ್ಳಿಂತೆಂದಳ್. ಇಂತಪ್ಪ ಗಣಿದಮುಮಂ ಪಣಿದಮುಮನಱಿಯೆ ನಬ್ಬಾ!

ಕಂ|| ಈ ಮುಳಿಸು ತಿಳಿವ ಮುಳಿಸ |
ಲ್ತೇ ಮಾತನ್ನೆರ್ದೆಯ ಮಱುಕದಂದಮೆ ಪೇೞ್ಗುಂ ||
[4]ನೀಮೆಲ್ಲಂ ಸುಕುಮಾರ |
ಸ್ವಾಮಿಗೆ ಬೞ[5]ಯೋಗೆ ಬಾರದಿ[6]ರ್ಪೆನೆ ಬರ್ಪೆಂ || ೫೭ ||

ವ|| ಎಂದು ತನ್ನೆರ್ದೆಯ ಮಱುಕಕ್ಕೆ ಭಯಮಾಗೆ ನುಡಿಯುತ್ತಿರೆ ಮತ್ತೊರ್ವ[7]ಳಂತಿಂತೆಂಬವರ ಮಾತಿನೊಳೇನೋ!—

ಕಂ|| [8]ಪೋಗಲೆ ವೇೞ್ಪುದು ತಡೆಯದೆ |
ಬೇಗಂ [9]ಕೆಯ್ಗ್ಗಯ್ವೆನೆಂದು ಕನ್ನಡಿಯಂ [10]ಕೊಂ ||
ಡಾಗಳೆ ನೊಸಲೊಳ್ ಬೊಟ್ಟಂ |
[11]ಬೇಗದಿನಿಡುವಾಕೆ ಯಿಟ್ಟಳಾ ಕನ್ನಡಿಯೊಳ್ || ೫೮ ||

ವ|| ಮತ್ತೊರ್ವ[12]ಳುಂ ಸಂಕಟಂಬಟ್ಟು—

ಕಂ|| [13]ಉಡೆಯೊಳ್ ತಗುಳ್ಚಿ ಹಾರಮ |
ನುಡೆನೂಲಂ [14]ಕಟ್ಟಿ ಕೊರಲೊಳಿನ್ನೇ[15]ಕಿರ್ಪಂ ||
ತಡೆಯದೆ [16]ಬನ್ನಿಂ ಬೇಗಂ |
ಕಡುಮುಳಿಸಿಂ ಪೋದ ನಲ್ಲನಂ [17]ತರಪೋಪಂ || ೫೯ ||

ವ|| [18]ಎಂದು ಬಂದು ನಿಂದಾಕೆಯ ಕೆಲದೊಳ್ ಮತ್ತೊರ್ವರ್ಳ್—

---

(1) ದೆನ್ನನುಡಿದೀಬಿಂಕಂ ಬಳಿಕೇವು (ಕ,ಟ,ಚ) (2) ಪಿರಿದೇಂ (ಚ,ಜ) ಬಱಕೇವುದವ್ವಸಾವುದು (ಚ,ಛ,ಜ) (3) ಡಾನಿಂತಪ್ಪಣಿದುಮುಂ ಸಣಿದಮುಮ (ಚ, ಜ, ಝ) ಡೊರ್ವಳಾನಿಂತಪ್ಪಗಣಿದಮಂ (ಟ) (4) ನೀಮೇಂಸುಕು (ಕ) (5) ಯೋಗೆ (ಖ,ಗ) (6) ರ್ಕುವೆಬರ್ಪಂ (ಕ,ಟ) (7) ಳಂತಿಂತೆಂದುನುಡಿವರ (ಕ,ಟ,ಜ) (8) ಪೋಗಲ್ವೇಳ್ಪುದು (ಟ) (9) ಕೈಗೆಯ್ವುದೆಂದು (ಚ,ಜ) (10) ಕಂಡಾಗಳ್ನೊಸ (ಖ, ಗ, ಜ) (11) ರಾಗದಿನಿಡು (ಕ,ಟ) ರಾಗಂಬೆರಸಿಡುತುಮಿಟ್ಟ (ಜ,ಚ) (12) ಳತಿಸಂಭ್ರಮದಿಂ (ಕ,ಟ) ಅಂತೊರ್ವಳತಿ (ಚ,ಜ) (13) ಎಡೆಯೊಳ್ (ಖ,ಗ,ಛ) (14) ಕೊರಲೊಳಿಕ್ಕಿಯಿನ್ನೇ (ಕ,ಟ) (15) ಕಿರ್ಪಿರ್ (ಕ,ಟ) ಕಿರ್ಪೆಂ (ಜ,ಚ) (16) ಬಾರಿರೆ ಬೇಗಂ (ಟ) ಬರದಿರೆ ಪೋಪಂ (ಚ,ಜ,ಛ) ಬನ್ನಿರೆ (ಕ) (17) ತರೆ ಪೋಪಂ (ಕ,ಟ) (18) ಎಂದು ನಿಂದಾಕೆಯ (ಚ,ಜ) ಎಂದು ಬನ್ನಿಮೆಂದು ಬಂದುನಿಂದಾಕೆ (ಝ)

ಕಂ|| ಅಂದುಗೆಯಂ ಗಗ್ಗರಮುಮ |
ನಿಂದುನಿಭಾನನೆ ತಗುಳ್ಚಿ ಕೆಯ್ಯೊಳ್ ಕೊರಲೊಳ್ ||
ತಂದೆಸೆವ [1]ರತ್ನ ಹಾರಮ |
[2]ನಂದಂಬಡೆ ಕಟ್ಟಿ [3]ತುರಿಪದಿಂ[4]ದಂ ಬಂದಳ್ || ೬೦ ||

ವ|| [5]ಪೆಱತೊರ್ವಳ್ ತನ್ನ [6]ರೂಪುಮಂ ಚದುರುಮಂ [7]ನಚ್ಚುವಾಕೆಯಿಂತೆಂದಳ್—

ಕಂ|| ರೂಪಿನ [8]ಚೆಲ್ವೇ(ಲ್ವ)ಂ ಮಱಸುಗು |
ಮಾಪಸದನ[9]ಮಕ್ಕ [10]ಸತಿಗೆ ಪತಿಯೆ ಕರಂ ಕೂ ||
ರ್ತಾಪೊೞ್ತು ಮಂಜುವಂಜಮೆ |
ಕೋಪಮ[11]ನುಡುಗಿಸಲಿದೊಂದೆ ಸಾಲದೆ ಬನ್ನಿಂ || ೬೧ ||

ವ|| ಎಂದಿಂತು ಮೂವತ್ತಿರ್ವರುಂ ಕುಲಸ್ತ್ರೀಯರ್ಕಳುಮಪ್ಪ ಸೊಸೆವಿರೊಂದಾಗಿ [12]ಪೆಱಗೆವರೆ ಯಲ್ಲಿಂ ಪೊಱಗೆ ಸಮ[13]ಸ್ತ ಬಂಧುಜನಂಗಳೆಲ್ಲಂ ನೆರೆದು [14]ಬರುತ್ತಿರೆಯಂತೆ ತನ್ನ ಬೆಂಬೞಯನೆ ಬನ್ನಿಮೆಂದು ಯಶೋಭದ್ರೆ ಮುಂದೆ ನಡೆದು ಮಹಾಕಾಳ[15]ದ ಬಟ್ಟೆಯಂ ತಗುಳ್ದು ನಡೆವಾಗಳ್ ಅಲತಗೆಯ ರಸಂ ಪತ್ತಿದಡಿ[16]ವಜ್ಜೆ ಯಂತೆ ಕಾಲೊಡೆದು ನೆತ್ತರ್ ಪತ್ತಿದ ಪಜ್ಜೆಗಳಂ ಕಂಡು ನೋಡಿಂ[17] ನಿಮ್ಮೆಱೆಯನ ಪೋದ ಪಜ್ಜೆಯಿದೆಯೆಂದು ತೋಱುತ್ತುಂ ಪೋಪನ್ನೆಗಂ ದೇವರ್ಕಳ್ ಶರೀರಪೂಜೆಗೆಯ್ದು [18]ಪೋದಲ್ಲಿಯ ದಿವ್ಯಪುಷ್ಪಗಂಧಂ [19]ತೀಡಿದೊಡೆ ಪೆಱಗಣ ವರ್ಗಾಸೆಯಾಗೆ ಬೞಯಂ ಪೊಲಸು[20]ನಾರ್ಪಂತಾದೊಡೆ ಬೆಕ್ಕಸಂಬಟ್ಟು ಮಂತೆ ಬೇಗಮೆಯ್ದಿ ವರ್ಪನ್ನೆಗಂ ಏಕಪಾರ್ಶ್ವ[21]ದೊಳಿರ್ದ ಋಷಿ ರೂಪಕದ ವ್ಯತಕಮಂ [22]ಕಂಡು ಮುಚ್ಚಿವೋಗಿ ಬಿೞ್ದು ನೀಡಱಂದೆೞ್ಚತ್ತು ಸೊಸೆವಿರಂ ಕರೆದು "ನಿಮ್ಮ ಸ್ವಾಮಿಯಿ[23]ಯಿರ್ದನೆ ತಿಳಿಪೆ ಬನ್ನಿ" ಮೆಂದು ಬಸಿಱಂ [24]ಪೊಯ್ದು ಕೊಳ್ವಾಗಳವರೆಲ್ಲರುಮೆಯ್ದೆ ವಂದು [25]ನೋಡಿ ತಮ್ಮಂ ತಾವೇ ಬಡಿದಱತಿರೆ ತಾಯ್ ತಲೆದೆಸೆಗೆ ವಂದು ನಿಂದು—

(1) ರತ್ನಮಾಲೆಯ (ಕ,ಟ) (2) ನಂದಂಗಿಡೆ (ಚ,ಜ) (3) ತುರುಪ (ಕ,ಚ,ಜ) (4) ದಿಂಪರಿತಂದಳ್ (ಕ,ಜ,ಟ) (5) ಮತ್ತೊರ್ವಳ್ (ಕ, ಚ, ಜ) ಮತ್ತಮೊರ್ವಳ್ (ಟ) (6) ರೂಪನುಂ ಚದುರಮಂ (ಟ) (7) ಮ (ಮೆ) ಚ್ಚುವಾ (ಕ,ಗ,ಚ) ಮೆಚ್ಚುವಾಕೆ ಕೆಳದಿಗಿಂತೆಂದಳ್ (ಘ,ಟ,ಖ) (8) ಚೆಲ್ವಂ ಮರೆಸುಗುಮೇ (ಕ,ಚ,ಜ) (9) ಮಬ್ಬ (ಕ,ಟ) (10) ಸತಿಗೆ ಪತಿಗೆ (ಚ,ಜ) (11) ನುಱಯಿಸಲದೊಂದೆ (ಕ, ಟ) (12) ಪಿಂದನೆ (ಖ,ಗ,ಛ) (13) ಸ್ತಮುಳ್ಳಬಂಧು (ಚ,ಜ,ಖ) (14) ಬರೆಯೆನ್ನ ಬೞಯನೆ (ಚ, ಜ, ಗ) (15) ದತ್ತಭಿಮುಖಮಾಗಿ ಬಟ್ಟೆಯಂ ತಗುಳ್ದು (ಕ,ಟ) ಮುಖಮಾಗಿ ಮತ್ತಿತ್ತಲ್ ನೋಡುತುಂ ನಡೆವಾಗಳ್ (ಚ,ಜ) (16) ವಜ್ಜೆಗಳಂ ಕಂಡುನೋಡಿ (ಕ,ಟ) (17) ಡಿಮಿವು.... ಪಜ್ಜೆಗಳೆಂದು (ಟ) (18) ಪೋದೊಡ ಲ್ಲಿಯ (ಕ,ಟ) (19) ತೀಡೆಪಿರಿದುಂ ರಾಗಮಾಗಿ ಬಳಿಯಂ (ಕ, ಟ) (20) ನಾರ್ಪಗಳ್ ಬೆಕ್ಕ (ಚ,ಜ,ಖ) ನಾಱಸೋಳ್ಪಾಗಳ್ ಬೆಕ್ಕ (ಕ,ಟ) (21) ದೊಳ್ ಪಟ್ಟಿರ್ದ (ಕ,ಟ) (22) ಕನಂಕಂಡು– ಕಂ|| ಹಾಸುಕು (ಟ) (23) ಯಿರ್ದಪಂ (ಕ,ಟ) (24) ಪೊಯ್ದುಮೂರ್ಛೆವೋಗಿ ನೀಡಱಂ (ಕ, ಟ) (25) ನೋಡಿ, ಕಂ|| ಹಾ ಸುಕು (ಕ, ಗ, ಖ)

ಕಂ|| ಹಾ ! ಸುಕುಮಾರಾ ! ಧೀರಾ |
ಹಾ ! ಸುಕೃತಫಲಪ್ರಣೂತ ರಾಶೀ [1]ಭಾಸೀ ! ||
ಹಾ ! ಸುಖ ಭಾಗೀ ! ಭೋಗೀ ! |
ಹಾ ! ಸಕಳಧರಾತಳ ಪ್ರಸಿದ್ಧಾ ! [2]ಶುದ್ಧಾ ! || ೬೨ ||

ಹಾ ! ಎನ್ನೊಪ್ಪುವ ಮಱಿಯೇ |
ಹಾ ! ಎನ್ನುತ್ತಮ ಪದಸ್ಥ[3]ನೆನಿಸಿದ [4]ಕಱುವೇ ||
ಹಾ ! ಎನ್ನ ಕುಲಪತಾಕಾ ! |
ಹಾ ! ಎನ್ನೆರ್ದೆಯಂ ಸುಡಲ್ಕೆ ತಕ್ಕುದೆ ಮಗನೇ || ೬೩ ||

[5]ಆಗಳಱಿದ್ದೈ ಸುಧರ್ಮನಂ |
[5]ನಾಗಳ್ [6]ತಲೆವಱಿದೆ [7]ಯಾಗಳೆಮ್ಮಂ ತೊಱೆದ್ದೈ ||
[5]ಆಗಳ್ ಮತಿಯಂ[8]ನಿಱಿಸಿದೆ |
[5]ಆಗಳ್ ಸಗ್ಗಕ್ಕೆ ಪೋದೆಯೋ ಪೇೞ್ ಮಗನೇ || ೬೪ ||

ವ|| ಎಂದಿಂತು ತಾಯ್ [9]ಪಲವಿಸುವಾಗಳ್ ಮೂವತ್ತಿರ್ವರ್ ಪೆಂಡಿ[10]ರುಂ ಬಂದೊಂದೊಂದು ದೆಸೆಯೊಳ್ ಎಣ್ಬರೆಣ್ಬರಾಗಿ ನಾಲ್ದೆಸೆಯೊ[11]ಳೋಳಿವಟ್ಟು ನಿಂದಿ[12]ರ್ದಂದು ಕೆಯ್ಗಳಿಂ ತಂತಮ್ಮ ತಲೆಗಳನೊರ್ಮೆ ಪೊಯ್ದು ಕೊಳುತ್ತುಮೊರ್ಮೆ ತಮ್ಮ ಸ್ವಾಮಿಯತ್ತಲ್ ನೀಡಿನೀಡಿ—

ರಗಳೆ:—ಹಾ ! ವಿಳಸ[13]ದಿಭ್ಯಕುಲ ಪದವಿಯೊಳ್ ನಿಂದನೇ |
ಹಾ ! [14]ವಣಿಕ್ಪತಿಯಾಗಿ ಧರಣಿಯೊಳ್ ಸಂದನೇ || ೧ ||

ಹಾ ! ವಿಪುಳಗುಣ ಪುರುಷರತ್ನಮಾಗಿರ್ದನೇ |
ಹಾ ! ವಿನುತ ಗರ್ಭಸುಖಿಯಾಗಿ ಸಲೆ ಬಟ್ಟ(ರ್ದ)ನೇ || ೨ ||

ಹಾ ! ಎನ್ನ ರಾಜಪೂಜಿತನಾಗಿ ಮಿಕ್ಕನೆ |
ಹಾ ! ಎನ್ನಮುಚ್ಚಱಿದು ಚಿತ್ತದೊಳ್ ಪೊಕ್ಕನೇ || ೩ ||

ಹಾ ! [16]ಕೂರ್ತ ವನಿತೆಯರ ನಾಱಿ(ಲಿ)ಸಲ್ ಬಲ್ಲನೇ |
ಹಾ ! ಕೆಟ್ಟೆ ನೀಂ(ನೀಂ)ಮುಳಿಸಿನಂದಮೇಂ ನಲ್ಲನೇ || ೪ ||

ಹಾ ! ನಿನ್ನ ಕಣ್ಣಱಿಯದುಱದೆ ಮೇಣ್ ನಡೆದೆ[17]ಮೇ |
ಹಾ ! ನಿನ್ನ [18]ರಸಮಱಿಯದುರ್ಕಿ ಮೇಣ್ ನುಡಿದೆ[17]ಮೇ || ೫ ||

---

(1) ಭೋಗಿ (ಚ,ಜ) (2) ಬುದ್ಧಾ (ಕ,ಟ) (3) ನಾಗುವ (ಕ,ಟ) ನಪ್ಪ (ಚ,ಜ) (4) ಕಲಿಯೇ (ಕ,ಟ) (5) ಏಗ (ಖ,ಘ) (6) ತವೆಯುಱಿದೆ (ಕ,ಘ,ಗ) ತಲೆಗಿಱಿದೆ (ಜ,ಚ) (7) ಯೇಗಳೊಡಲಂ (ಚ,ಜ) (8) ಯೊಳ್ನೆಱಿದ್ದೈ (ಚ,ಜ) (9) ಪಳವಳಿಸುವಾಗ (ಕ) (10) ರುಮೋರೊಂದುದೆಸೆಯೊಳೆಣ್ಬರಾಗಿ (ಕ,ಟ) (11) ಯೂಳಳವಟ್ಟಿರ್ದೊಂದುಕೆಯ್ಯೊಳ್ ತಂತಮ್ಮ (ಚ,ಜ) (12) ರ್ದೊಂದು ಕೆಯ್ಯಂತಂದು ತಲೆಯೊಳ್ ಪೊಯ್ದುಕೊಳುತ್ತು ಮೊಂದುಕೆಯ್ಯಂ ತಮ್ಮ ಸ್ವಾಮಿ (ಕ, ಟ) (13) ದಿವ್ಯ (ಜ, ಜ) ದಿಬ್ಬ (ಗ, ಖ) (14) ವಣಿಜಪತಿ (ಕ) (15) ವಿಮಳ (ಚ,ಜ) (16) ಮುಳಿದವನಿ (ಕ,ಟ) (17) ದೆನೆ (18) ಸರಸಱಿ (ಕ,ಜ) ಸರಮಱಿಯದುಃಖಿ (ಟ)

ಹಾ ! [1]ನಿನ್ನ ಬಱಿಸದಂದೇನೊ ಕೆಯ್ಗೆಯ್ದಿಮೆ ? |
ಹಾ ! [2]ನನ್ನನೊಲಿಸುವಂತೇ ನ (ನೊ) ಮೇಗೆಯ್ದಿಮೆ ? || ೬ ||

ಹಾ ! ನಿನ್ನ ಮಚ್ಚಿಂಗೆ ಬೇಗ[3]ಮೇಂ ಬಾರಿಮೆ ? |
ಹಾ ! ನಿನಗೆ[4]ಮನದೊಳೇನೊ ಪೇೞ್ ಕೂರಿಮೆ || ೭ ||

ಹಾ ! ಎನಗೆ [5]ಕೂರ್ತು ನೀಂ ತಿಳಿಯ[6]ದಿಂತಿರ್ಪುದೇ ? |
ಹಾ ! ಎನಗೆ ಪಿರಿದೊಂದು ಮಱುಕಮಂ[7]ತರ್ಪುದೇ || ೮ ||

ಹಾ ! ಪೊೞಲ ನಡುವಗ್ಗಳಿಕೆ[8]ಯಿಂದಿರವೆತ್ತ |
ಹಾ ! ಪಿರಿಯ ಮಸಣದೊಳಗಿಂತು ಪೊಕ್ಕಿರವೆತ್ತ || ೯ ||

ಹಾ ! ಸರ್ವತೋಭದ್ರಮಾಡ[9]ಮದುವೆತ್ತ |
ಹಾ ! ಸುರ್ವುಗೊಂಡಿರ್ದ ಪೆರ್ಮೞೆಯ ಕೆಳ[10]ಗೆತ್ತ || ೧೦ ||

ಹಾ ! ಪೊಳೆವ ಮಾಣಿಕದ ಸೊಗ[11]ಯಿಪ್ಪ ಬೆಳಗೆತ್ತ |
ಹಾ ! [12]ಪರ್ವಿ ಪಸರಿಸಿದ ಕಾಯ್ಪು ಕಡುವಿಸಿಲೆತ್ತ || ೧೧ ||

ಹಾ ! ಮದನನಂತಪ್ಪ ರೂಪಿನೊಳ್ಪಿದುವೆತ್ತ |
ಹಾ ! ಮರುಳ ತೆಱನಪ್ಪ [13]ಋಷಿಯ ರೂಪುವಿದುವೆತ್ತ || ೧೨ ||

ಹಾ ! ರತ್ನಭೂಮಿಯೊಳ್ ನಡೆ[14]ವೊಂದು ನಯವೆತ್ತ |
ಹಾ ! ರೌದ್ರಮಪ್ಪೆಡೆಗೆ ನಡೆವ [15]ನಿರ್ಭರಮೆತ್ತ || ೧೩ ||

ಹಾ ! ಪಂಚಶಯ್ಯೆಯೊಳಗೊಱಗು[16]ವಿಂಬದುವೆತ್ತ |
ಹಾ ! ಪರಲ ಮೊನೆ[17]ಯೊತ್ತೆ ನೆಲವಟ್ಕಿ(ಕ್ಕೆ)[18]ಯಿರವೆತ್ತ || ೧೪ ||

ಹಾ ! [19]ನಲ್ಲರೊಡನೆಯ್ದೆ ತಳ್ತಿಸೆ[20]ದ ನಿನ್ನಿರವೆತ್ತ |
ಹಾ ! ನರಿಗಳುಗಿದಗಿದು ತಿಂಬೆಬದು [21]ಪೋರ್ಕುೞಿಯೆತ್ತ || ೧೫ ||

---

(1) ಎನ್ನನೀಂ ಬಱಿಸದಂದು ಕೈಗೆಯ್ದನೆ (ಚ,ಜ) ಎನ್ನಬಱಿಸ (ಟ) (2) ನಿನ್ನ ಬಱಿಸವಂದೇನುಮೆಯ್ದುಗೆ ದೆನೇಮಿ (3) ಮಾಂಬಾರೆನೆ (ಟ) (4) ನಿನಗೆ ಸಲೆಮನ (ಕ) (5) ಮುನಿದುನೀಂ (ಕ,ಜ,ಚ) (6) ದಿಂತಪ್ಪುದೇ (ಕ,ಟ) (7) ಮಾಳ್ಪುದೇ (ಚ,ಜ) (8) ನೆರಸಿರವೆತ್ತ (ಕ,ಟ) (9) ದೊಳಗಿರವೆತ್ತ (ಕ, ಖ, ಗ) •(10) ಳಗಿರವೆತ್ತ (ಕ,ಟ) (11) ಯಿಸುವ (ಕ, ಟ) (12) ಪೇಳ್ವೆನೊಗೆದೊಡಲಕಾಯ್ಪು (ಟ). ಪಚ್ಚನೆನಗೊದವಿಕಾಯ್ಪು (ಚ,ಜ) (13) ಋಷಿರೂಪು (ಕ,ಗ,ಚ) ರುಷಿಯ (ಜ,ಚ) (14) ವಂದು (ಕ) (15) ನಿರ್ಭರ (ಕ, ಟ) (16) ವೆಂಬುದು (ಕ,ಗ) (17) ಯೆತ್ತ (ಕ,ಟ) (18) ಯಿದು (ಚ, ಜ) (19) ಸ್ತ್ರೀಯರ್ೊರ್ನನಲಿದು (ಟ) (20) ತಳ್ತಪ್ಪಿದಿರ (ಚ,ಜ) ತಳ್ತಿಪ್ಪವಿತ (ಕ,ಟ) (21)· ಸೊರ್ಕುೞಿ

ಹಾ ! ಮನೋಹರಮಪ್ಪ ಸುರತಸುಖ[1]ದೊಳ್ಪು ಕಾನೆತ್ತ |
ಹಾ ! ಮಸಗಿ ನರಿಪಾಯ್ದು ತಿಂಬ ವೇದನೆಯೆತ್ತ || ೧೬ ||
ಹಾ ! ಎಂತು ಸೈರಿಸಿದೆ ಯಿಾ ಪರಿಯ ನೋವಿನೊಳ್ |
ಹಾ ! ಎಲ್ಲಿ ಪುಟ್ಟಿದೈ ಸ್ವಾಮಿ [2]ಯಿಾ ಸಾವಿನೊಳ್ || ೧೭ || – || ೬೫ ||

ಕಂ|| [3]ಎಂದೊಡನೊಡನನಿಬರುಮಿರ |
ದೊಂದಿ ಕರಂ ಪಳ(ವಿ)ಯಿಸುತ್ತುಮಿರೆ ಬಂಧುಜನಂ ||
ಬಂದು ಕಡು[4]ದುಃಖಂಗೆಯ್ದಂ |
ತೆಂದರ್ ಬಱಿಕಿಂತು ದುಃಖ[5]ಮೞಿಯದು ಕೇಳಿಂ || ೬೬ ||

ವ|| ನಿಮ್ಮ ಬಸಿಱಿಂ ಪೊಯ್ದು ಕೊಂಡೊಡೆ [6]ನೀಗದು, [7]ಅಱಿವು ಕೆಯ್ಕೊಂಡೊಡಂದು ನೀಗುಗುಂ. (ಕಣ್ಣ) ನೀರ್ ಸುರಿದೊಡೆ ಪೋಗದು, ಧರ್ಮದತ್ತಲ್ ಮನಂ[8]ಪೋಗೆ ಪೋಕುಂ. ಬಾಯಂ ಬಿಟ್ಟಲ್ಲಿ ತೊಲಗದು, ತಪಂಬಟ್ಟಲ್ಲಿ ತೊಲಗುಗುಂ. ಒಡನೆಸತ್ತಲ್ಲಿ ಕಿಡದು, ಸುಗತಿವೆತ್ತಲ್ಲಿ ಕಿಡುಗುಂ. ಎಂದಿಂತಾಱೆ[3] ನುಡಿದು ಅವರನಲ್ಲಿಂ ತೊಲಗಿಸಿ ಬಂದು ಶ್ರೀಖಂಡಕಾಳಾಗುರುವಿನ [9]ಇಂಧನಂಗಳಂ ತರಿಸಿ ಆ ಋಷಿ[10]ಯರ ಶರೀರಮಂ ಸಂಸ್ಕಾರವಿಧಿ[11]ಯಿಂ ಜಾಮಿಸಿ ತಾಮು ಮವರುಂ [12]ನೀರತಡಿಗೆ ವಂದಲ್ಲಿ ಮೂವತ್ತಿರ್ವರ್ [13]ಪೆಂಡಿರುಂ ಲೌಕಿಕಕ್ರಿಯೆಯೊಳೆ ತಂತಮ್ಮ ಕರ್ಣ[14]ಪತ್ರಂಗಳ್ಪೆರಸು ಆಭರಣಂಗಳೆಲ್ಲಮಂ ಕಳೆ[15]ದು ನೀರಿೞಿದು ಬಂದು ಪೊೞಲಂ [16]ಪೊಕ್ಕು ನಡೆವಾಗಳ್—

ಕಂ|| ಅತ್ತೆಯುಮಾಸೊಸೆವಿರುಮಿ |
[17]ನ್ನಿತ್ತ ಜಿನಾಲಯದೊಳಲ್ಲದೆಮ್ಮಾಲಯದೊಳ್ ||
ಮತ್ತೆಂತುಮಿರ್ಪೆ[18]ವಲ್ಲ ಮೆ |
ನುತ್ತಲ್ಲಿಂ [19]ತಳರ್ದು ಬಂದು ಬಸದಿಯೊಳಿರ್ದರ್ || ೬೭ ||

---

(1) ದೊಳ್ಪೆತ್ತ (ಕ,ಟ) (2) ನೋವಿನೊಳಂ (ಕ,ಟ) ಸುಕುಮಾರಾ (ಚ,ಜ) (3) ಎಂದಿಂತೊಡನೊಡನನಿಬರು (ಟ) ಎಂದೆಂದಂತೊಡ (ಕ) (4) ದುಃಖಮುಂಗೆ। ಯ್ದಂದರ್ (ಕ) (5) ಮುಳಿಯದು (ಕ, ಟ) (6) ನೀಗುಗುಮೆ (ಟ) ನೀಗುಗುಂ (ಕ) (7) ಅಱಿಂಕ್ಕೈಕೊಂಡೊಡೆ (ಟ) ತಪಮಂ ಕೆಯ್ಕೊಂಡೊಡೆ (ಕ,ಟ) (8) ಪರಿದೊಡೆ (ಚ,ಜ) (9) ಸಮಿದೆ(ತಿ)ಗಳಂ (ಕ,ಟ) ಸವಿವೆಯಂ (ಚ,ಜ) (10) ರೂಪಕದ ಮೃತಕಮಂ (ಕ,ಟ) (11) ಯಂಮಾಡಿ (ಕ,ಟ) (12) ನೀರೆಡೆಗೆ (ಕ,ಟ) (13) ರ್ವರುಂ ಸ್ತ್ರೀಯರುಂ (ಕ,ಟ) ರ್ವರುಂ ಲೌಕಿಕ (ಕ,ಜ) (14) ಪತ್ರಾದ್ಯಾಭರಣಂಗಳಂ (ಕ,ಟ) (15) ಕಳೆದೆಲ್ಲರುಂ ಮಿಂದು (ಕ,ಟ) (16) ಪೊಕ್ಕು ಮನೆಯತ್ತಲ್ (ಕ,ಟ) (17) ತೆತ್ತ (ಚ,ಜ) ನೆತ್ತ (ಕ,ಟ) (18) ವಲ್ಲಿಯೆ। ನುತ್ತಾಗಳೆ (ಕ,ಟ) ವಲ್ಲೆವೆನು (ಚ,ಜ) (19) ಮುಗುಳ್ದು (ಕ,ಟ)

ವ|| [1]ಇರುತ್ತುಂ ತಮ್ಮ ಮನೆಯಂ ಕ್ರಮದವರ್ಗೆ ಕೊಟ್ಟುಳ್ಳುದೆಲ್ಲಮಂ ದಾನಂಗೆಯ್ದು ಯಶೋಭದ್ರರೆಂಬಾಚಾರ್ಯರಲ್ಲಿಗೆ ವಂದು ದೀಕ್ಷೆಯಂ ಕೆಯ್ಕೊಂಡು ಕೆಲವುದೆವಸಂ ತಪಂಗೆಯ್ದು ಕಡೆಯೊಳ್ ಸುಗತಿಯನೆಯ್ದಿದರ್. ಇಂತಪ್ಪ ಸುಕುಮಾರಸ್ವಾಮಿ ತೊಟ್ಟನೊರ್ಮೆಯೆ ಲೋಕವಿಭಾಗಸ್ಥಿತಿಯಂ ಕೇಳ್ದಾಗಳೆ ನಿರ್ವೇಗದಿಂ ಪೊಱಮಟ್ಟು ಬಂದು ತಪಂಬಟ್ಟು ಸನ್ಯಸನಂಗೊಂಡು ತಿರಿಕೋಪಸರ್ಗಮಂ ಸೈರಿಸಿ ಬೇಗಂ ಸರ್ವಾರ್ಥಸಿದ್ಧಿಯಂ ಪಡೆದನೆಂಬುದಂ ಕೇಳ್ದವಧಾರಿಸಿಯಾದೊಡಂ ಅಱಿದು ನೆಗಲ್ವುದು ; ಈ ಮೆಯ್ಯೊಳ್ ಮೋಕ್ಷಗತಿವಡೆವುದೆಂತೆಂಬಾ—

ಮ|| ಅಱಿತಂ ಮುಂಬಯಣಂ ಲಸದ್ಗುಣಗಣಂ ಮೆ[2]ಯ್ಯಾಪು ಕಣ್ಣೊರ್ಮೆಯ |
ಲ್ಕಱಿನೊಳ್ ತಳ್ತೊ[3]ಡವರ್ಪ ಕಾಂತಿ ನೆಗಟುತ್ತಿರ್ದೊಳ್ತಪಂ ಸಂಬಳಂ ||
ನೆಱೆದಿದಿರ್ದುತ್ತಮಸಂಯಮಂ ಸಿ[4]ವಿಗೆಯಾಗೀ ಮಾಟಿಕ್ಕೆಯಿಂ ಪೋಪು[5]ದೇ |
ತೆಱದಿಂ[6]ಬೆರ್ಚದೆ ಮೋಕ್ಷದಲ್ಲಿ[7]ಗೆ ನಯಂ ಮಾಣ್ದಿರ್ಪುದೇ ಜೀವನೇ || ೬೮ ||*

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

**ಬಂಧುವರ್ಮ ನಿರ್ಮಿತಮಪ್ಪ**

## ಜೀವಸಂಬೋಧನಾ ಗ್ರಂಥಾವತಾರದೊಳ್

[8]ಲೋಕಾನುಪ್ರೇಕ್ಷಾ ನಿರೂಪಣಂ — ಸುಕುಮಾರಸ್ವಾಮಿ ಕಥಾನುವರ್ಣನಂ

**ಷಷ್ಠಾಧಿಕಾರಂ.**

---

* ಶ್ರೀ ಮುನಿಸುವ್ರತಾಯನಮಃ

ಬೃಹನ್ನಯಃ ಸಿದ್ಧಪದಾಯ ವಾಕ್ಯ- ಮಿತ್ಯಗ್ರಹೀದ್ಯಃ ಸ್ವಯಮೇವ ಗೀತಂ ||
ಲೋಕಾನ್ತಿಕೇಭ್ಯಸ್ಸ್ತವನಂ ನಿಶಮ್ಯ-ವಂದೇ ಜಿನೇಂದ್ರಂ ಮುನಿಸುವ್ರತಂ ತಂ ||

(ಚ, ಛ, ಜ) ಪ್ರತಿಗಳಲ್ಲಿವೆ—

---

(1) ಅಂತಿರ್ದಲ್ಲಿ ಯಶೋಭದ್ರೆ ತನ್ನ ಸೊಸೆವಿರೆಲ್ಲರುಮುಂ ನೋಡಿ ಗರ್ಭಿಣಿಯರಪ್ಪೆಣ್ಬರ್ ಸೊಸೆವಿರಂ ನೀಮಿಾಮನೆಗಂ ವಿತ್ತಕ್ಕಮೊಡೆಯರಾಗಿರಿಮೆಂದುಱಿದ ಸೊಸೆವಿರುಂ ತಾನುಂ ಯಶೋಭದ್ರಾಚಾರ್ಯರ ಪಕ್ಕದೆ ತಪಮಂ ಕೈಕೊಂಡು ತಪಂಗೆಯ್ದು ಸಮಾಧಿವಿಧಿಯಿಂ ಮುಡಿಪಿ ಸ್ವರ್ಗಲೋಕದೊಳ್ ಪುಟ್ಟಿದರ್. ಅಂತಪ್ಪ ಸುಕುಮಾರಸ್ವಾಮಿ ತೊಟ್ಟನೊರ್ಮೆಯೆ ಲೋಕವಿಭಾಗಸ್ಥಿತಿಗಳಂ ಕೇಳ್ದಾಗಳೆ ನಿರ್ವೇಗಂ ಪುಟ್ಟಿ ತಪಮಂ ಕೆಯ್ಕೊಂಡು ತಿರಿಕೋಪ........ರೆಂಬೀಕಥೆಯುಂ ಕೇಳ್ದಪ್ಪೊಡಮಱಿದಾರ್ತುನೆಗಟ್ವುದೀಮೆಯ್ಯೊಳ್ ಮೋಕ್ಷಕ್ಕೆಂತುಂ ನಡೆವುದೆಂಬಾ (ಕ, ಟ) ಮನೆಯಂ ವೃತ್ತಿಯೊಳ್ ನಿಲ್ಲಿಮೆಂದು ನಿಱಿಸಿ ಮತ್ತಮಿಪ್ಪತ್ತುನಾಲ್ವರ್ ಸೊಸೆಯರ್ಗಂ ತನಗಂ ತಕ್ಕವಸ್ತುಗಳುಂ ತೆಗೆದುಕೊಂಡು ದಾನಧರ್ಮಮಂ ಪರೋಪಕಾರಂಗಳಂ ಮಾಡಿ ವೈರಾಗ್ಯದಿಂದೊಡಲ್ ತವುವನ್ನೆಗಂ ನೋಂತು ಸುಖುಂಬಡೆದರಂತಪ್ಪ....ಟ್ಟನಿಂತೊರ್ಮೆಯೆ ಲೋಕವಿಭಾಗ ಸ್ಥಿತಿಗಳಂ ಕೇಳ್ದಾಗಳೆ ಪೊಱಮಟ್ಟು ಬಂದು ತಪಂಬಟ್ಟು ಸನ್ಯಸನಂಗೊಂಡು ಸರ್ವಾರ್ಥ (ಚ,ಜ) (2) ಯ್ಯಾಪಿನಾಳ್ಕೊರ್ಮೆ (ಕ,ಟ) ಯ್ಯಾರ್ವುನಾಣ್ಕೂರ್ಮೆ (ಚ,ಜ) (3) ಳ್ತೊದವಿಪ್ಪ (ಕ) (4) ಸಿವಗೆ(ಜ, ಚ) (5) ದೆಂದರಿಂದಿಂ (ಕ) ದೀ। ತೆಱದಿಂ (ಚ,ಜ) (6) ಬರ್ಚಿದ (ಟ) (7) ನೆನೆಯುಂ (ಟ) (8) ಲೋಕಾಭಿಧಾನಂ ದಶಮಾಧಿ (ಜ,ಚ)

## || ಸಪ್ತಮಾಧಿಕಾರಂ ||

## — ಅ ಶು ಚಿ ತ್ವಾ ನು ಪ್ರೇ ಕ್ಷೆ —

ಕಂ|| ಅಱೀವುದು ಪೊರ್ದಿದುದಂ ಪೆಱ |
ಗುಱೀವುದು ನೀಂ ಪೋಗೆ ದುಃಖಮಂ ನಿನಗೆಂತುಂ ||
ಘಱೀಯಿಸುವುದಶುಚಿ ನೀನೀ |
ಕೊೞೆಯೊಡಲಂ ಮಚ್ಚಿದಂದಮಾವುದೊ ಜೀವಾ || ೧ ||

ವ|| ಗೆಂಟುಮಾಡಲ್ಕೆ ತಕ್ಕ ಪೊಲ್ಲಮೆಗಳುಮಂ, ಏವಯ್ಸಲ್ಕೆ ನೆವ(ರ)ಮಪ್ಪುಕೆಯ್ವುದುಮಂ, ಮುಳಿಯಲ್ಕೆ ಕಾರಣಮಪ್ಪ ಪಗೆಯುಮಂ, ಪೇಸುಗೆಯಂ ಮಾಟ್ಪ ಕಿಸುಗುಳ(ಮು)ಮಂ ಈ ಮೆಯ್ಯೊಳೊಂದಱೊಳ್ ಇನಿತುಮಂ ಕಂಡಗ್ಗಲಿಸಿಯೆ ಯೇಱೀಸಿ ಮೆಯ್ಮಱೆದಿರ್ಪಿರೆಂಬುದೇಕೆ ?–

---

ಗಣೇ ಜನಾನನ್ದಕರೇ ವರಂತೇ – ವಿಧ್ವಸ್ತಕೋಪಪ್ರಶಮೈಕಚಿತ್ತೇ ||
ಯೋದ್ವಾದಶಾಂಗಂ ಶ್ರುತಮಾದಿದೇಶ – ಸುಶ್ರೈಯಸಂ ತಂ ಪ್ರಣಮಾಮಿ ನಿತ್ಯಂ || ೧ ||

ರೇತಶ್ಶೋಣಿತಜಾತಿ ಧಾತುನಿಚಿತಂ ಪ್ರಚ್ಛಾದಿತಂ ಚರ್ಮಣಾ |
ಸಾಂದ್ರೋದ್ರಿಕ್ತಗಲನ್ಮಲಂ ಬಹುಬಿಲೈರಂಗಂ ಜುಗುಪ್ಸಾ(ವಹಂ)ನುಗಾಂ ||
ಭೀತಿಂ ಕಿಂ ನ ತನೋತ್ಯಸಂಸ್ಕೃತಿ ಬಹಿಶ್ಚರ್ಮಾತ್ರ ಗಾತ್ರೇ ನ ಚೇತ್ |
ಸ್ಪೃಷ್ಟುಂ ದ್ರಷ್ಟುಮಪಿ ಕ್ಷಮೋಽಸ್ತಿ ಕಿಮಿದಂ ತ್ರಾತುಂ ಪತತ್ರ್ಯಾದಿತಃ || ೨ ||

ಟೀ|| ರೇತಶ್ಶೋಣಿತ ಜಾತಿ–ಪುರುಷನ ಶುಕ್ಲಂ ಸ್ತ್ರೀಯರ ಋತುಕಾಲದ ರಕ್ತಮೆಂಬೆರಡಱಿಂ ಪುಟ್ಟಿತ್ತು. ಧಾತುನಿಚಿತಂ–ಸಪ್ತಧಾತುಗಳಿಂತೀವಿತ್ತು. ಚರ್ಮಣಾ–ತೊವಲಿನಿಂದೆ, ಪ್ರಚ್ಛಾದಿತಂ–ಮುಚ್ಚಲ್ಪಟ್ಟಿತ್ತು. ಸಾಂದ್ರೋದ್ರಿಕ್ತಗಲನ್ಮಲಂ–ಮಂದಯ್ಸಿರ್ಪ ಪೊಱಸೂಸುತಿದ(ರ್ಪ) ಮಲಮನುಳ್ಳುದು. ಬಹು ಬಿಲೈಃ – ಮೂಗು ಮೊದಲಾದ ಪಲವು ಬಿಲಂಗಳಿಂ (ರಂಧ್ರಂಗಳಿಂ) ಅಂಗಂ–ಶರೀರಂ, ಜುಗುಪ್ಸಾನು(ಗ)ಂ–ಹೇಸುಗೆ(ಸಿಕೆ)ಯ ಬೞೀಸಂದ, ಭೀತಿಂ–ಅಂಜಿಕೆಯಂ, ಅಸಂಸ್ಕೃತಿ–ಸಮರುಗೆಯಿಲ್ಲದುದು, ಕಿಂ ನ ತನೋತಿ–ಏನ ಮಾಡದು. ಅತ್ರಗಾತ್ರೇ–ಈ ಶರೀರದೊಳ್, ಬಹಿಃ–ಪೊಱಗೆ, ಚರ್ಮ–ತೊಗಲು, ನ ಚೇತ್–ಇಲ್ಲಕ್ಕುಮಪ್ಪೊಡೆ, ದ್ರಷ್ಟುಂ–ನೋಡಲ್ಕೆ, ಸ್ಪೃಷ್ಟುಮಪಿ–ಮುಟ್ಟಲ್ಕಂ, ಪತತ್ರ್ಯಾದಿತಃ–(ಪರ್ದುಮೊದಲಾದ) ಪಕ್ಕಿ ಮೊದಲಾದುದಱತ್ತಣಿಂ, ತ್ರಾತುಂ–ಕಾಯಲ್ಕಂ, ಇದಂ–ಈ ಶರೀರಮಂ, ಕ್ಷಮಃ–ಆರ್ಪಂ, ಕಿಮಸ್ತಿ–ಯೇನೊಳನೆ — ಶರೀರಂ ಶುಚಿಯಲ್ಲೆಂಬ ಶುಚಿತ್ವಾನುಪ್ರೇಕ್ಷೆ— [ ಚ, ಜ ಪ್ರತಿಗಳಲ್ಲಿ ಮಾತ್ರ ]

ತಥಾಽಶುಚಿರಯಂ ಕಾಯಃ ಕ್ರಿಮಿಧಾತುಮಲಾನ್ವಿತಃ ||
ಯಥಾ ತಸ್ಯೈವ ಸಂಪರ್ಕಾದನ್ಯತ್ರಾಪ್ಯಪವಿತ್ರತಾ ||

ತಾ|| ಎಲೆ ಜೀವನೆ ಯಿಾ ಶರೀರವು ಕ್ರಿಮಿಧಾತುಮಲಂಗಳೊಡಗೂಡಿ ತಾನಂತಪವಿತ್ರಮಾಗಿರ್ಪುದ(ದುಮ)ಲ್ಲದೆಯುಂ ತನ್ನ ಪೊರ್ದುಗೆಯಿಂದತ್ಯಂತ ಪವಿತ್ರಮಾಗಿರ್ಪ ನಿನ್ನಂ ಅಪವಿತ್ರತೆಯಂ ನೆರಪಿದೀ ಶರೀರದಶುಚಿತ್ವಮಂ ಬಗೆಯದಿರ್ಪುದುಚಿತಮಲ್ಲೆಂಬೀಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂಗೆಯ್ವೆನದೆಂತೆನೆ. (ಇದಾದ ಬೞೀಕ – ಅಱೀವುದು ಎಂಬ ಕಂದ ಗ್ರಂಥಾಕ್ಷರದಲ್ಲಿ ಆರಂಭಿಸಿದೆ)

ಮ|| ಅಱಿವಂ [1]ಪೊರ್ದದ ಬಾಲಕಾಲಮೆ ಮೊದಲ್ ಸಂಕ್ಲೇಶಚಿಂತಾದಿಗಳ್ |
ತುಱುಗಿರ್ದಲ್ಲಿಯ [2]ಗಂಟುಗಳ್ ವಿಷಯವಷಂ ಪೊರ್ದಿರ್ದ [3]ಮಪ್ಪುಗ್ರಮಂ ||
ತಿಱಿಯುತ್ತೊತ್ತುವ ಕುತ್ತಮೆಂಬ ಪುೞುಗಳ್ ಕೊಂಡಿರ್ದ ಮೆಯ್ಯೆಂಬ [4]ಕ |
ರ್ಬುಱವಂಗೀಭವಕಲ್ತು ಬಿತ್ತು ಮಱುಮೆಯ್ಗಂ[5]ತೇವುದೇ ಬಂಡ(ಗ)ಮೋ || ೨ ||

ವ|| ಪುೞಿತ [6]ಕರ್ಬಿನ ಮೊದಲ್ ತಿನಲೊ[7]ಳ್ಳಿತಲ್ತು. ಬಿತ್ತಿಂಗೊಳ್ಳಿತ್ತು. ಮನುಷ್ಯರ ಮೆಯ್ ಸುಖದನುಭವಣೆಗೊಳ್ಳಿತಲ್ತು. ಸುಗತಿವಡೆಯಲ್ಕೊಳ್ಳಿತ್ತು. ಎಂಬಬಗೆಯೊಳ್ ನೆಗ[8]ೞ್ವುದು ಅಂತುಮಲ್ಲದೆಯುಂ, ಮತ್ತಂ

ಕಂ|| ಬರ್ದು(ೞ್ದು)ವುದುಂ ಭವಜಳಧಿಯೊ |
ಳೞ್ದುವುದುಂ ದುಃಖದಿಂದೆ [9]ಪೆರ್ಗಿಚ್ಚುರಿಯುಂ ||
ಪೊರ್ದುವುದುಂ ಮೆಯ್ಯಂ ಮ |
ಚ್ಚಿರ್ದಿರ[10]ವಿದು ಮಚ್ಚುವಂತೆ ಕುಱು ತಿಂಬವರಂ || ೩ ||

ವ|| ತಿಂಬವರನಱಿಯದೆಯುಮವರ್ಗೆ ತಾಂ ನೆಱೆಯ(ವರಂ)ದೆಯುಂ ಮಚ್ಚಿರ್ದ ಕುಱಗದೇಂ [11]ದೋಷಂ? ತನಗೆ ಸುಖಂಮಾೞ್ಪವರನೆ ಕಿಡಿಸುವೀ ಮೆಯ್ಯ ಪೊಲ್ಲಮೆಯ ನಱಿದುಂ [12]ನೆಱೆಯುತ್ತದನೆ ಮಚ್ಚುವಾ ಜೀವಾ, ನಿನ್ನದಲ್ತೆ ದೋಷಂ—

ಉ|| ಪೊಲ್ಲಮೆಯೆಲ್ಲಮೊಂದುರುಳಿಗೊಂಡವೊಲಾದೊಡಲೊಳ್ ಕಡಂಗಿ ಪೆಂ |
ಪೆಲ್ಲಮಡಂಗಿ ನಿನ್ನಿರವಿದೇಂ ಗಡ ಧರ್ಮದ [13]ರಾಗಮೊಂದಿ(ದ)ದಂ ||
ದೆಲ್ಲಿಗಮುಗ್ಗಳಂ ನೆಗ[14]ೞ್ದುಮೆಂತೆನೆ ಕಲ್ತಲೆ ಪಿಂಗೆ ಸಂಜೆಯಾ |
ದಲ್ಲಿಯ ರಾಗದೊಳ್ ಪೊರೆದ ಭಾಸ್ಕರನಂತೆ ಬೆಳಪ್ಪಿರೆಲ್ಲಿಗ(ಯು)ಂ || ೪ ||

ವ|| ಪೊಲ್ಲಮೆಯೊಳಡಂಗಿ ಕಿಡದೆ ಧರ್ಮಾನುರಾಗಿಯಪ್ಪುದು. ಅಂತಾದೊಡೆ ಕಲ್ತಲೆಯ ಪೋಗಿನ ಕಿಸುಸಂಜೆಯೊಳೆ ರಾಗಿಯಾದಾದಿತ್ಯನಂತೆ ಬೆಳಗುವಿರಂತಲ್ಲದೊಡೆ—

---

(1) ಪೊರ್ದಿದ (ಕ, ಚ, ಜ) (2) ಯಗಂಟು ಗಂಟೆರಸಮಂ (ಚ, ಛ, ಜ) ಗಂಟು ಕಟ್ಟಿ (ಕ) (3) ಮಪ್ಪುಗ್ರ (ಕ, ಚ, ಜ) (4) ಕಬ್ಬೞೊವೊಂಗೀಭವಮಲ್ತುಚಿತ್ತ (ಕ, ಚ, ಜ) (5) ತೇವುದೇ (ಗ, ಘ, ಖ) (6) ಕಬ್ರ್ (ಕ, ಚ, ಜ) (7) ಲೊಳ್ಳಿತ್ತೆ ? (ಕ, ಚ, ಜ) (8) ಗಳ್ವೊಡೊಳ್ಳಿ ತಲ್ಲ ಮದೇನುಂಬಾರ್ತೆಯಲ್ಲಮೆಂಬುದನಱಿದು ಮೆಯ್ಯಂಮಚ್ಚಿರ್ದಿರವು ಕುಱುತಿಂಬವರ ಮಚ್ಚುವಂತುದಿಂತಲ್ತೆ (ಕ, ಚ, ಜ) (9) ಮೆಂಬ ನೆಗೞ್ದುರ್ದುರಿಯುಂ (ಕ, ಗ, ಘ) ನೆಗೆದುರಿವುರಿಯಿಂ (ಖ, ಛ, ಜ) (10) ವೆಂದುಂ (ಗ, ಘ, ಜ) (11) ದೋಷಮೆ, ತನ್ನ ಬಸಮಾದವರಂ ಕಿಡಿಸುವ (ಕ, ಚ, ಜ) ಬಸಮಾದೊಡಂ (ಖ) ಮೊದೊವಂ (ಗ) (12) ನೆಱೆದುಮತ್ತದನೆಮಚ್ಚುವಿರೆ (ಖ, ಗ) (13) ರಾಗದೊಳೊಂದಿ (14) ೞ್ದಿರೆಂತೆನೆ (ಕ, ಚ, ಜ) (15) ಈ ಮೆಯ್ಯೊಳಡಂಗಿ (ಕ, ಚ, ಜ)

ಕಂ|| ಉಡುಗುತೆ ಬೇಗಂ ಸಂಜೆಯ |
ಕಡುರಾಗದೊಳೊಂದಿ ಭಾನು ರಸೆಗಿೞಿವಂತೊ ||
[1]ಕ್ಪೊಡನಱಿಯೆ [2]ಪಾಪರಾಗದೊ |
ಕೊಡಗೂಡಿದ[3]ನಾಱ್ಗುಗ್ರನರಕಾರ್ಣವದೊಳ್ || ೫ ||

ವ|| ಪಗಲ[4] ಪೋಗಿನ ಸಂಜೆಯೊಳೆ ರಾಗಿಯಾಗಿ ರಸೆಗಿೞಿವಾ(ದಾ)ದಿತ್ಯನಂತೆ ಗುಣದ ಕೇಡಿನೊಳ್ ಪಾಪಾನುರಾಗಿ[5]ಯಾದಾತಂ ನರಕಕ್ಕಿೞಿಗುಮೆಂಬುದಂ ಬಗೆಯೆ ನೀಂ, ವಿಪರೀತಚಿತ್ತನಾದೆಯಕ್ಕುಂ.

ಮ|| ಮೊಲೆಯಂ ಪೊಂಗೊಡನೆಂದು [6]ತಜ್ಜಘನಮಂ ಮತ್ತೇಭ[7]ಕುಂಭಂಗಳೇ |
ದಲರೆಂದಕ್ಷಿಯನಿಂದುವೆಂದು [8]ಮೊಗಮಂ ಮೆಯ್ಯಂ ಲತಾವಲ್ಲಿಯೆಂ ||
ದೆಲೆ ನೀನಿಂತಬಲಾಂಗಮಂ ಶುಭಗುಣೋದ್ಯದ್ವಸ್ತು[9]ವಂ ಮಾಡಿ ಕೊಂ |
[10]ಡೊಲಿವೈ ಜೀವನೆ ಪೇೞನಂಗ[11]ಮದದಿಂದಂ ಸೊರ್ಕಿದೈ ಮೊಕ್ಕಳಂ || ೬ ||

ವ|| [12]ಮದ್ದುಗುಣಿಕೆಯಂ ತಿಂದು [13]ಸೊರ್ಕಿದಾತಂಗೆ ಕಾಷ್ಠ[14]ಲೋಷ್ಟಾದಿಗಳೆಲ್ಲಂ ಪೊಂಬಣ್ಣಮಾಗಿ ತೋರ್ಪಂತೆ ಕಾಮದೇವನ ಸೊರ್ಕು[15]ಕೊಂಡವರ್ಗೆ ಅಶುಭಂಗಳೆಲ್ಲಂ ಶುಭಂಗಳಾಗಿ [16]ತೋರ್ಕುಮಾಗದೇ ?—

ಕಂ|| ಕಿಡುವುದು ತಾನುಂ ತನ್ನೊಳ್ |
ತೊಡ[17]ರ್ದವರುಮನಂತೆ ಕಿಡಿಸುವೀಯಱಿಯೊಡಲಂ ||
ಕಡುಮೋಹದೆ [18]ಮಚ್ಚಿರ್ದೊಡೆ |
ಪಡೆವೈ ನೀಂ ಮಚ್ಚುವೆತ್ತ ಕಳ್ಳನ [19]ಪಡೆಪಂ || ೭ ||

ವ|| “ದುಃಖಮಂ ನಿನಗೆ ಮಾಡುವ ಮೆಯ್ಯಂ ಮಚ್ಚುವುದುಂ ನಿನ್ನನಱಿಯಲೆಂದಿರ್ದುದಂ ಮಚ್ಚೆಂದು [20]ಬಗೆದು ಬೇಗಂ ಬೆರ್ಚದೆಯುಂ ಗುಣಮನೊಡರ್ಚದೆಯುಮಿರ್ಪುದುಂ ಗಾವಿಲಿಕೆ” ಯೆಂದಿಂತು ಮೆಯ್ಯ ಪೊಲ್ಲಮೆಯಂ ಪೇೞ್ದ[21]ನದಱುಕ್ಕೆಪಮಂ [22]ಬಗೆಯಲಾಗದೆ !—

(1) ಕ್ಪೆಡೆಯಱಿ (2) ಪೋಪ (ಕ, ಚ, ಜ) (3) ನಾಳ್ಗ (ಖ ,ಗ, ಫ) (4) ಪೋಗಿನೊಳೆ (ಖ, ಗ, ಚ) (5) ಯಪ್ಪಾತಂ (ಕ,ಚ,ಜ) ಯೈನೀಂ (ಖ,ಗ,ಫ) ಬಗೆಯದೆ (ಕ) (6) ಸಜ್ಜಘನ (ಕ,ಚ,ಜ) (7) ಸತ್ಕುಂಭ (ಕ,ಜ,ಚ) (8) ಮುಖಮಂ (ಕ,ಫ,ಖ) (9) ಸ್ತುಗಳ್ಮಾಡಿ (ಕ,ಖ,ಗ) (10) ಡೆಲೆವೋ (ಕ,ಚ,ಜ) ಡಾಲಿವೊ (ಖ,ಗ) (11) ವಶದಿಂದೇಂ ಸೊರ್ಕಿದೋ (ಕ,ಚ,ಜ) (12) ಮತ್ತಕುಣಿ (ಖ,ಗ,ಫ) (13) ಸೊರ್ಕುತಗುಳ್ದ ಮಾನಸರ್ಗೆ (ಖ,ಗ) ಸೊರ್ಕಿದೊಂದೆ (ಫ) (14) ಲೋಹಾದಿ (ಕ,ಚ,ಜ) (15) ತಗುಳ್ದಮಾನಸರ್ಗೆ (ಖ,ಗ) (16) ತೋರ್ಪುವಾ (ಕ,ಚ,ಜ) ಅಶುಭಶುಭಂಗಳಾಗಿ ತೋರ್ಕುಂ (ಖ,ಗ) (17) ರ್ದರುಮಮನಂತೆ (ಖ,ಗ) (18) ನಚ್ಚಿ (ಕ,ಚ,ಜ) (19) ಪಡಪುಂ (ಪಂ) (ಕ,ಜ,ಜ) ಕಡಪಂ (ಖ,ಗ) (20) ಬಗೆದುಂ ಗುಣಮ (ಖ,ಗ) (21) ವಿನ್ನಿದಱೊಳುರ್ಕೆಯ....ದು (ಕ, ಚ, ಜ) (22) ಬಗೆಯಯಾಗದೆ (ಗ, ಖ)

ಚಂ|| ಒಡಲನೆ ಮಚ್ಚಿ ಬೆರ್ಚಿ[1] ಸುಗುಣಕ್ಕೆ ತೊಡರ್ಚಿ ಕಳತ್ರ[2] ಬಂಧಮಂ |
[3] ಕಿಡಿಸಿ ನಿಜಸ್ವರೂಪದಱಿವಂ ಪಲವುಂ ಭವಮಿಂತು ಪೋದು[4] ವೇ ||
ನೊಡಲೊಡ ವೋಪೆನೆಂಬ ಬಗೆ [5] ಬಂದುದೆ ಕೂರ್ಮೆಯೊಳೊರ್ಮೆ [6] ಬೇಡ ಮೆ |
ಟ್ಟಿಡ[7] ದಿರು ನಂಬಿ ನೀಂ ಕಿಡದಿ[8] ರುಕ್ಕೆವದಿಂ ಕಿಡಿಸಲ್ ತಗುಳ್ದಪದಂ || ೮ ||

ವ|| ಕಿರ್ಚಿನ ತಣ್ಪುವುಂ ಒಡಲ[9] ನಣ್ಪುವುಂ ಒರ್ಮೆಯುಪ್ಪೊಡಂ ಕಾಣದೆ [10] ಬೆಳ್ಪಾಗಿ ಮಚ್ಚು[11] ವಾ ?—

ಕಂ|| ಸಾವೆ ಪಿತೃ ಪುಟ್ಟೆ ತಾಯ್ ನಾ |
ನಾವಿಧರುಜೆಗಳೆ ಸಹೋದರರ್ ಮುಪ್ಪೆ ಕರಂ ||
ಭಾವಿಸುವ ಕೆಳೆಯನಾಗಿರೆ |
ಜೀವಾ ನೀಂ[12] ನಚ್ಚಿ ಮಚ್ಚಿದೋ ! ನಿಜತನುವಂ || ೯ ||

ವ|| ಸಾವುಂ ಪುಟ್ಟುಂ ತಂದೆಯುಂ ತಾಯುಮಾಗೆ, ಕುತ್ತಂಗಳ್ ಸಹೋದರರಾಗೆ, ಮುಪ್ಪು ಕೆಳೆಯನಾಗೆ ಬಗೆದು ಮಚ್ಚಿದೆಯಕ್ಕುಮಲ್ಲದೊಡೆ—

ಉ|| ತೊಟ್ಟನೆ ಪೋದ ಜವ್ವನದ ಪೋಗಿನೊಳಂ ಬಗೆಯಿ(ದಿ)ಲ್ಲ ಪೆಂಡಿರುಂ |
ಪುಟ್ಟಿದ ಮಕ್ಕಳುಂ ನಿನಗೆ ಪೇಸಿದೊಡಂ ಮನದಲ್ಲಿ ಸಿಗ್ಗಣಂ ||
ಪುಟ್ಟಿದುದಿಲ್ಲ ಮೆಯ್ ಸಡಿಲೆ ಮೋಹದಳುರ್ಕೆ ಸಡಿಲ್ವುದಿಲ್ಲದೇಂ |
ನೆಟ್ಟನೆ ಮಾಣ್ಪುದೆಂದು ಬಗೆದೈ [13] ಜವನಿಂ ಕೊಲೆಯುಂ ಜರಾವಿಳಾ || ೧೦ ||

ವ || [14] ಮುನ್ನಮಾದ ಪರ್ಯಾಯಂಗಳಱಿವಂ [15] ಮುಪ್ಪಿನೊಳ್ ಕಂಡಾದೊಡಂ ನಂಬು ಜೀವಾ !

ಕಂ|| ಏಗೆಯ್ದೊಡಮೆಂತುಂ ನಿನ |
[16] ಗಾಗದುದುಮನೊದವಿ ನಿಂದ ಕರ್ಮದ ತೊಡರ (ವ) ಂ ||
ನೀಗದುದುಮನಂತ್ಯದೊಳೊಡ |
ವೋಗದುದುಮನಱಿದು ಮೆಯ್ಗೆ ನೀಂ [17] ಮುಯ್ವಾಂಪಾ || ೧೧ ||

ವ|| ತನಗೆ ಾಗುಬ್ದಾಗದು[18] ದುಮನಱಿದುಮೇಗೆಯ್ದೊಡಮೊಳ್ಪನೊಲ್ಲದಿರೆ ಪಾಪಂ ನೀಗದುದುಮಂ ಏಗೆಯ್ದೊಡಂ ನೀಮಱಿವಿರ್—

(1) ಗುಣವಿಂಗೆ (ಕ, ಚ, ಜ) (2) ಬಂಧುವಂ (ಖ, ಗ, ಛ) (3) ಬಿಡಿಸಿ (ಕ, ಚ, ಜ) (4) ವೆಂದೊಡಲೊಡ (ಕ, ಚ, ಜ) (5) ದಂಮುದೆ (ಕ, ಚ) ದಂದಱಿ (ಜ, ಛ) ಯಂತುಟೆ (ಗ, ಘ) (6) ಬೇಗ (ಕ, ಚ) (7) ದಿರಿಮೊಳ್ಳಿ ಕೆಯ್ದು ಪಡೆಯಿಂ ಸುಖಮಂ ಪೆರದೇಂ ಪರತ್ರೆಯೊಳ್ (ಕ, ಚ, ಜ) (8) ರುಕ್ಕೆವಿಸಲ್ ಕಿಡಿಸಲ್ ತಗುಳ್ದೊಡಂ (ಕ, ಖ, ಗ) (9) ನುಣ್ಪು (ಕ, ಚ) (10) ಬೇಳಾಗಿ (ಖ, ಗ) (11) ವುದೇ (ಕ) ವೋ (ಗ, ಖ) (12) ಬಗೆದು ನಚ್ಚಿ (ಕ, ಚ, ಜ) (13) ಕೊಲೆಯುಂದಮನಿ(ನೀ)ಂ ಜರಾತ್ರಯಂ (ಕ, ಚ, ಜ) ಕೊಲೆಯಂ ಮೃತಿಯಿಂ (ಖ, ಗ, ಛ) (14) ಮುನ್ನಿನ (ಕ) (15) ಮುಪ್ಪಿನೊಳಪ್ಪೊಡಂ ಕಂಡು ನಂಬಾ ಮೆಯ್ಮಱಿದಿರಲಾಗದು (ಕ, ಚ, ಜ) (16) ಬೇಗಂ ಅದನೊದವಿಂದ (ಖ, ಗ) (17) ಮುಯ್ಗೆಯ್ವಾ (ಕ, ಚ, ಜ) (18) ದು ನಂಟಂಗೆಮುಯ್ಗೆಯ್ವೊಡ ಮೊಳ್ಪ ನೊಡಂಬಡದ ಮೆಯ್ಯೊಳ್ಪಾಪಂ ನೀಗದುದನಱಿದು ಮೆಯ್ಗೆಮುಯ್ಗೆಯ್ವೊಡಂ ನೀಮರಿದಿರು (ಕ, ಜ, ಜ)

ಚಂ|| ಅಱಿನುಡಿಗೇಳದಿರ್ಪಿರವುವೋಲ್ ಕಿವಿ ಕೆಟ್ಟುವು ಮುಪ್ಪುಬಂಧಮಿ(ದಿ)ಂ |
ಬಱಿದಿರೆ ನೋಡೆಪೆಂಬ ತೆಱ[1]ದಿಂದಮೆ ಕಾಣವು ಕಣ್ [2]ಜವಂ ತಗು ||
ಳ್ದಱಿಯ[3]ಲವುಂಕೆ ತಾಂ ನಡುಗುಪಂತೆ ಶಿ(ಸಿ)ರಂ ನಡುಗುತ್ತುಮಿರ್ಪುದಿಂ |
ತಱಿವಱಿವಾಱಿಕ್ಕೆ [4]ಬೆರ್ಚದವೊಲಿರ್ಪುದು ಮೆಯ್ ನಿನಗಾದ ಮುಪ್ಪಿನೊಳ್ ||೧೨||

ವ|| ತನಗೆ ತಾಂ ಪೇಸುವಂತಿರ್ಪ ಮುಪ್ಪಿನೊಳಪ್ಪೊಡಂ ಬೆರ್ಚಿ ನೆಗಱ್ದಿಯಿಲ್ಲ ಜೀವಾ, ನೀನೇಂ ವಿಪರೀತಮಾದೆಯೋ ?

ಕಂ|| ಕಿರ್ಚ(ಚ್ಚ)ಂ ಪೊರ್ದಿದ ನೀರ್ ಕಡು |
ಬೆಚ್ಚನೆಯಾಗಿರ್ದು ಕುದಿವ ವೋಲೀ ಮೆಯ್ಯೊಳ್ ||
ಮರ್ಚ(ಚ್ಚಿ)ರ್ದ್ದು ಕಾಯ್ಪಿಯದ ನೀ |
[5]ನಚ್ಚೈಸದೆ ನೆಗಱ್ದೊಡಾಱ ಸುಖದಿಂದಿರ್ಪಯ್ ||೧೩||

ವ|| [6]ಪುಳ್ಳಿವಿಡಿದು ಬರ್ಪ ಕಿರ್ಚಿನ ಬೆಂಕೆಯುಮಂ, ಮೆಯ್ವಿಡಿದು ಬರ್ಪ ದುಃಖದ ಬೆಂಕೆಯುಮ[7]ನಾ ಪುಳ್ಳಿಯ ತಗುಳ್ಪಮನೀ ಮೆಯ್ಯ ತಗುಳ್ಪಮನಿಚ್ಚೈಸದೆ ನೆಗಱ್ದಂದು ನಂದುಗುಮದಱಿಂ ನೀನೆಂತುಂ ಮೆಯ್ಯ ವಶನಾಗದಿರ್. ನಿನಗೆ [8]ಮೆಯ್ ಪಗೆಯಪ್ಪುದಂ ನೀಂ [9]ಬಗೆದೆಯಿಲ್ಲಾ !

ಉ|| ಮೆಯ್ಯಿಂಬಂ ಬಗೆದೇಕೆ ಸೇದೆಗಿ(ವ)ಡುವೈ [10]ಪೇೞ್ ಜೀವ ನಿನ್ನಿಂಬ [11]ನೀ |
ಮೆಯ್ಯೊಂದಾಗಿಯುಮೊರ್ಮೆ ಮೇಣ್ ಬಗೆಗುಮೇ ತಕ್ಕೊರ್ಮೆಯಂ [12]ಕೂರ್ಮೆಯಂ ||
ಮೆಯ್ಯುಂ [13]ಮೆಯ್ಯೊಳವುಳ್ಳೊಡಪ್ಪುದು ಮಹಾ[14]ದುಃಖಾಗ್ನಿಯತ್ತಣ್ಗೆ ಕೊಂ |
ಡುಯ್ಯಲ್ [15]ಪಾಪಮನಪ್ಪುಕೆಯ್ಯಲಱಿಯಲ್ಕೆಂದಿರ್ಪುದಂ ಮಚ್ಚುವಾ(ವೋ)
||೧೪||

ವ|| ಪಗೆವಂಗಾಳಾಗಿ ಪೊಕ್ಕಿಱ[16]ಯಲ್ ಬಂದು ಪತ್ತಿರ್ದನುಮಂ, ಕರ್ಮಕ್ಕಾಳಾಗಿ ಕಿಡಿಸಲ್ ತಗುಳ್ದಿರ್ದ(ರ್ಪ) ಮೆಯ್ಯುಮಂ ನಂಬಿದೊಡಾತನಱಿದಂ, ಈತಂ ನರಕಕ್ಕಿಱಿದನೆಂಬುದಂ ಪೇೞಲ್ವೇೞ್ಕುಮೇ ?—

ಕಂ|| ಪೊರೆದನಿ[17]ತಱಿಂದೆ ಜೀವಾ |
ಪರಮಾತ್ಮಪದಸ್ಥನಪ್ಪ ಶಕ್ತಿಯ ನಿನ್ನಂ ||
ಪರಿಭವಿಸಿ ಕಿಡಿಸಿತೆಂದೊಡೆ |
ಶರೀರಮಂ [18]ಪೊರ್ದಿ ಕಿಡದ ವಸ್ತುಗಳೊಳವೇ ? ||೧೫||

---

(1) ನ(ದ)ಂತಿರೆ (ಕ, ಚ, ಜ) (2) ಮರಂತಗು (ಖ, ಗ, ಛ) (3) ಲರುಂತೆ (ಕ, ಘ, ಜ) (4) ಮಚ್ಚಿದವೊ (ಕ, ಜ, ಚ) (5) ನಿಶ್ಚೈಸಿನೆಗ (ಕ, ಚ, ಜ) ನಿಶ್ಚಯಿಸಿದೆ (ಖ, ಗ) ನಿಶ್ಚೈಸದೆ (ಘ) (6) ಪುಳ್ಳಿಯಂಪಿಡಿದಿರ್ದ (ಕ, ಚ, ಜ) (7) ಯುಮಂಕಂಡಾಪುಳ್ಳಿಯ ತೆಗಳ್ಪುದೀಮೆಯ್ಯಂ ಧರ್ಮದೊಳ್ ತಗುಳ್ಪುದಿದಂ ನಿಶ್ಚೈಸಿ ನೆಗಳ್ದೊಡೆ ವಂದು (ಖ, ಗ, ಘ) ಯುಮಂ ಕಿರ್ಚುಪುಳ್ಳಿಯ ತಗುಳ್ಚುಮದುಮಂ ನೀ ಕರ್ಚುಮೆಯ್ಯಂ ತಗುಳ್ಪುಮದುಮಂ ನಿಶ್ಚೈಸಿನೆಗ(ಕ, ಚ, ಜ) (8) ಮೆಯ್ನೆಯಪ್ಪುದು(ಕ) (9) ಬಗೆಯಲಾಗದೇ(ಕ, ಚ, ಜ) (10) ಪೆರ್ಚಿಪರ್ (ಕ, ಚ, ಜ) (11) ನಿಂಮೆಯ್ಯಿ(ಯ್ಯೊ)ಂದಾಗಿ (ಕ, ಖ, ಗ) (12) ಮೋಹದಿಂ (ಖ, ಗ) (13) ಮೆಯ್ಯೊಳಿವೊಳ್ಳೊಡ (ಕ, ಚ, ಜ) (14) ದುಃಖಾಬ್ಧಿ (ಖ, ಗ) (15) ಪೋಪುದ (ಕ, ಚ, ಜ) (16) ಯಲೆಂದು (ಕ) (17) ತರಿನೀಜೀವಂ (ಕ, ಚ, ಜ) (18) ನಂಬಿ (ಖ, ಗ, ಘ)

ವ|| ಜ್ಞಾನದರ್ಶನಾದ್ಯನಂತಗುಣವಂತನಪ್ಪ [1]ನಿನ್ನಂ ಮೇಳಿಸಿದನಿತಱೊಳೆ [2]ಸಂಸಾರ ಸಮುದ್ರದೊಳಗಾಱಿಸಿತೆಂದೊಡೆ ಉೞಿದ ವಸ್ತುಗಳನೇ[3]ಗೆಯ್ಯದು ?—

ಚಂ|| ತನುವಿನ ಪುಟ್ಟಿದಂದೊಡನೆ ಪುಟ್ಟಿದುವಿಂದ್ರಿಯಮಿಂದ್ರಿಯಂಗಳಿಂ |
ಜನಿಯಿಸುಗುಂ ಮಹಾವ್ಯಸನಮಾ ವ್ಯಸನಂ ಮಿಗೆ [4]ಬಂಧಮಾದುದಾ ||
ಯೆನೆ ಕಡುಸೇದೆ ಸೇದೆಯೊ[5]ಳೆ ದುಷ್ಪರಿಣಾಮಮುದಾಗೆ ಪಾಪದು |
ರ್ವಿನಮದಱಿಂದಿವಂ [6]ಪಡೆವೊಡಲ್ ಪಡೆಯಲ್ ಗಡ ಭವ್ಯಜೀವನೇ || ೧೬ ||

ವ|| [7]ಅಳಿವುವಿಡಿಯೆ ಪರಿಭವಂ ಬರ್ಪಂತೊಡಲ್ವಿಡಿದು(ಯೆ) ಪಾಪಂಬರ್ಕುಮದು ಬರೆ [8]ಕಿಡದವರೊಳರೇ ?

ಕಂ|| ಎಂತುಂ ಕಿಡುವುದು ದುಃಖಮ |
ನೆಂತುಂ ಮಾಡುವುದದೆಂತು[9]ಮಶುಚಿಯೊಡಲ್ ನೀ ||
ನೆಂತಳಿಪುವೆ ಯೆಂತಿರ್ದಪೆ |
ಯೆಂತೞ್ವೆ ಮರುಳೆ ಮುನ್ನಮುೞಿದುದೆ ಸಾಲ್ಗುಂ || ೧೭ ||

ವ|| ಪೞಿದ ಪೞುಗೋ[10]ಲನೞ [11]ವುತ್ತುಮೇಱುವುದುಂ ಪಗೆಯನೞಿದು ಮೆಟ್ಟಿ (ಬೆಳ್ಪ)ಡುವುದು ಪೊಳ್ಳಿತ್ತೆ ?—

ಉ|| ಧಾತು[12]ಮಲಾದಿ ದೋಷಸಹಿತಂ ಪೊಱಗುಗ್ರದುರಂತಕರ್ಮಸಂ |
ಘಾತವಿಭಾಗಮತ್ತೊಳಗೆ ಬೋಧದ ಭಾಗ ಮ[13]ದತ್ತ ನೆಟ್ಟನಿಂ ||
ತೀ ತನುವಿತ್ತಣಿರ್ದೆರಡು ಭಾಗಮುಮಂ ಬಿಸುಟಂತರಂಗದೊಳ್ |
ಪ್ರೀತಿಯಿನಾತ್ಮನಂ ನಿಱ[14]ಪುದಲ್ಲದೊಡೀ ತನು ಪೊಳ್ಳಿಕೆಯ್ಗುಮೇ ? || ೧೮ ||

ವ|| [ಅದಱಿಂ] ಮೆಯ್ಯ ಪೊರೆಗಳಿಂತು ಮೂಱುಭಾಗಂ ;—ಅಲ್ಲಿ ಪೊಱಗಣ ಭಾಗಂ ಧಾತುಮಲಾದಿದೋಷಸಹಿತಂ ; ನಡುವಣ ಭಾಗಂ ಕರ್ಮ ಬಂಧ[15]ಮಯಂ ; ಒಳಗಣ ಭಾಗಂ ಜ್ಞಾನಮಯಂ. ಅದಱಿಂ ಪೊಱಗಣೆರಡು ಭಾಗಮುಂ ಗೆಂಟುಮಾಡಿ ಜ್ಞಾನಭಾಗಮಪ್ಪಂತರಂಗ ರಂಗದೊಳಾತ್ಮನಂ ನಿಱಿಸು[16]ವುದು. ಅಂತುನಿಱಿಸಿದಂ ತನಗೆ ಕೇಡಿಲ್ಲದಂತು[17]ಸಂತನಿಱಿಸಿದಂ—

(1) ನೀನುಂ ಮೇಳಿಸದನಿ (ಕ,ಖ,ಗ) ನಿನ್ನಂಮೇಳವಿಸಿದ (ಚ,ಜ) (2) ನಿನ್ನಂ ಭವಸಮುದ್ರ (ಜ,ಚ) (3) ಗೆಯ್ವುದು (ಕ,ಚ,ಜ) (4) ಬಂದನಂತಮಾಯ್ತೆನೆ (ಕ,ಜ,ಚ) ಬನ್ನಮುಂ (ಗ,ಖ) (5) ಯೆಡೆಪುಟ್ಟಿದ (ಖ,ಗ) (6) ಪಡೆವೋಲ್ಗೆಡೆಯುಪ್ಪುದೇ (ಕ,ಗ,ಖ) ಪಿಡೆವೊಡಗ್ಗೆಡೆಯುಪ್ಪುದೆ (ಚ,ಜ) (7) ಅಂತಳಿಪುವಿಡಿ (ಕ,ಚ,ಜ) (8) ಕಿಡದವರುಂಪರಿಭವಂ ಬಡದವರುಮೊಳರೆ (ಗ,ಖ) (9) ಮಶುಭಮೆದಲ್‌ನೀ (ಕ,ಚ,ಜ) ಮಶುಭದಮೆ (ಗ,ಖ) (10) ಗೋಲುಮ (ಕ) (11) ವುತ್ತೇಱ ಮೆಟ್ಟುಡುವುದೊಳ್ಳಿತ್ತೆ (ಚ,ಜ) (12) ಮಲಪ್ರದೋಷ (ಕ,ಚ,ಜ) (13) ದೆತ್ತ (ಖ,ಗ) (14) ಪುದೀತನುವಲ್ಲದೊಡೊಳ್ಳಿ (ಕ,ಗ,ಚ) (15) ಮದಱೊಳ (ಕ,ಖ,ಗ) (16) ವುದುತನಗೆ (ಕ,ಗ) (17) ಸುಖಂ ನಿಱಸಿದೊಂ (ಕ,ಚ,ಜ)

ಕಂ|| ಮೆಯ್ಯೊಳೊಡಗೂಡಿ ನೀನುಂ |
ಮೆಯ್ಯೆ[1] ನಿಸಿದೆ ಜೀವ [2]ನಿನ್ನ ದುರಿತದ ವಶದಿಂ ||
ಪೊಯ್ಯೆ ಸುಡೆ ಕಡಿಯೆ ನೊಂದಪೆ |
[3]ಯಯ್ಯೋ! ಜಗದಲ್ಲಿ ಕೂಡಿ ನೋವುದು ಪಿರಿದೇ? || ೧೯ ||

ವ|| ಜ್ಞಾನಮುಂ ಸುಖಮುಂ ಸಹಜಮ[4]ಪ್ಪ ಜೀವಾ! ನೀನೀ ದೇಹದೊಳ್ ಬೆರೆಸಿ ದೇಹಿಯೆನಿಸಿದ್ದೈ. ದೇಹಿಯೆಂಬ ಮಾತು ನಿನ್ನೊಳಾದಂದು(ದೆ) ನಿನ್ನ ಸುಖಂ [5]ನಹಿಯಾಯ್ತು. [6]ತಾಂ ಪಿಡಿದು ಬಂದ ನೋವೆಲ್ಲಮಮಂ ನಿನಗೆ ಮಾಡುತ್ತುಮಿರ್ಕುಂ. ಅದಱಿಂ ಮೆಯ್ ನಿನಗೆ ಪಗೆಯೆಂಬುದು. ಅಂತಾಗಿಯುಮದಶುಚಿ[7]ಯೆಂಬುದಂ ನೀಂ ಬಗೆಯಾ!

*ಮ|| ಅಡಗಿನ [8]ತೋಲ ನೆತ್ತರ ಮಿದುಳ್ಗಳ ಶಲ್ಯದ ಪುಂಜ ಮೊತ್ತಿ ಬಂ |
ದೆಡಸುವ ವಾತಪಿತ್ತಕಫದೋಷಸಮೂಹದೆ ಪತ್ತಿ ನಿಲ್ವುದೆಂ ||
ದೊಡೆ ಪೆಱತೇಂ ಕ್ರಿಮಿವ್ರಜದ ಮೂತ್ರಪುರೀಷದ ಕೊಂಡಮೆಂದು [9]ಮಿಾ |
ಯೊಡಲಿದಱಂದಮಂ ಬಗೆದು ಭಾವಿಸಿ ಪೇಸದುದೇಕೆ ಜೀವನೇ || ೨೦ ||

ವ || [10]ಗೆಂಟಱೊಳೆ ಕಂಡು ಪೇಸುವ ಕಿಸುಗುಳದೊಳಗ್ಗಳಿಸಿರ್ದು [11]ಪೇಸೆ ನೀಂ. ಸಮ್ಮಗಾಱನ ಮೂಗಿನಂತಾದೆಯಾಗಡೆ! ವಾಸನಾದೋಷಮಪ್ಪುದು ನಿನ್ನ ನೇಕಱಿಯಲೀಗು ಮಕ್ಕಟಾ!—

ಕಂ|| ಮುನ್ನೆ ಶುಚಿಯಪ್ಪುವೆಲ್ಲಂ |
ತನ್ನಂ [12]ಸಾರ್ದಶುಚಿಯಪ್ಪುವೆಂದೊಡೆ ಪೆಱತೇಂ ||
ನಿನ್ನೀ [13]ಮೆಯ್ಯೊಳ್ ಗುಣಮಿ |
ಲ್ಲಿನ್ನಿದಱಿಂ ಕಷ್ಟಮುಂಟೆ [14]ಭಾವಿಸೆ ಜಗದೊಳ್ || ೨೧ ||

ವ|| ತುಱುಂಬಿ[15]ಯುಂ ಮುಡಿದುಂ ಬಿಸುಟ್ಟ ಪೂವುಮನುಟ್ಟು ಕಳೆದ [16]ಸೀರೆಯುಮಂ, [17]ಪೂಸುವಲ್ಲಿಯುದಿರ್ದ ಕತ್ತುರಿಯುಮಂ, ಮಿಂದನೀರುಮಂ, ಉಂಡು ಮಿಕ್ಕ ತಲಾಗೆ[18]ಯ ಕೂೞುಮಂ ನೀನೆ ಮಗುೞ್ದು ಮುಟ್ಟಲ್ ಪೇಸುವೆಯೇಕೆ? ಮೆಯ್ಯಂ [19]ಮುಟ್ಟಿದುವೆಂಬ ನಿತಱೊಳೆ ಶುಚಿಯಪ್ಪ ವಸ್ತುಗಳೆಲ್ಲಮಶುಚಿ[20]ಯಾದುವು. ಇಂತಪ್ಪ ಮೆಯ್ ಮತ್ತ[21]ಮಿಂತಪ್ಪುದಲ್ತೆ!—

---

(1) ನಿಸಿಯೆ (ಕ,ಚ,ಜ) (2) ದುರಿತವೈರಿಯ (ಕ, ಗ, ಖ) (3) ಯಯ್ಯಾಗದಲ್ಲಿ (ಕ) ದಲ್ಲಿ ಕೂಡಿನಮೆವುದು (ಕ,ಗ,ಖ) ಮಾಡಿನೋವುದು (ಚ,ಜ) (4) ಪ್ಪೆಲೆ ಜೀವಾ (ಕ) (5) ನಾಸ್ತಿ (ಕ,ಖ,ಗ) ಹೀನಮಾ(ಚ,ಜ) (6) ತನು (ಕ,ಖ) (7) ಯಪ್ಪುದನೆ (ಕ,ಗ) (8) ತೊವಲ (ಕ,ಖ) (9) ಮೆಂದೊಡೀಯೊಡಲಿದ (ಕ, ಚ, ಜ) (10) ಅದೆಂತೆಂದೊಡೆಗೆಂಟ (ಚ,ಜ) (11) ಪೇಸದುದೇಕೆ (ಕ,ಜ,ಗ) (12) ಪೊರೆದನಿತಱಿಂದೆ ಪುತ್ತಮುಶುಚಿಯಪ್ಪನ್ನವು ಮೆಯ್ಯ ಗುಣಮಿಾಮೆಯ್ಯಿನ್ನದಱಿಂದಿ (ಕ,ಖ,ಗ) ಸಾರ್ದನಿತ (ಛ) ಮೆಯ್ಯುಗುಣ (ಮಿಾ) ಮೆಯ್ಯಿಂದಿನ್ನದಱಿಂ (ಜ,ಚ) (13) ನ್ನೀಯೊಡಲೊಳ್ (ಖ,ಗ) (14) ಪೇಳೀಜಗ (ಕ,ಗ) ಪೆಱವೀ (ಚ,ಜ) (14) ಬಿಕಳಿದಪೂ (ಕ,ಚ,ಜ) (15) ಪುಟ್ಟಿಗೆಯುಮಂ (ಕ, ಚ, ಜ) (16) ಪೂಸಿಕಳೆದ (ಕ, ಜ, ಚ) (17) ಯೆಂಜಲಕೂೞು (ಕ,ಗ) (18) ಪುದಿದು (ಕ,ಜ) (19) ಯಪ್ಪುದು (ಜ,ಚ) (20) ಮೆಂತಪ್ಪುದೆಂದೊಡೆ (ಕ,ಗ,ಜ)

* ಈ ಪದ್ಯವು ರಸರತ್ನಾಕರದಲ್ಲಿ ಉದ್ಧೃತವಾಗಿದೆ.

17

ಉ|| ಮೂಳೆಯ ಕಂಭ[1]ಮಿಲ್ಲಿ ನಿಡುಯೆ[2]ಲ್ವಿನ ಬೆಮ್ಮರನಂತೆ ಪತ್ತಿಕೊಂ |
ಡೋಳಿಯೆ ನೀಳ್ದ ನಿಂದ ಬಱು[3]ಯೆಲ್ ಗಲಿ[3]ಗಳ್ [4]ಸೆರೆ ಪಂಜರಂ ತಗು ||
ಳ್ದೀಳಿದ[5]ಮಪ್ಪ ತೋಲ್ ಪೊದಕೆ ಮಾಂಸಮೆ ಕೇರ್ಗಳಮೇಧ್ಯಪೂರ್ಣ ದೇ |
ಹಾಳಯ[6]ಮಿಂತಶುದ್ಧ ಮಿದನೇಂ ಶುಚಿಯೆಂಬುದೆ ಭವ್ಯ ಜೀವನೆ || ೨೨ ||

ವ|| ಅಂತುಮಲ್ಲದೆಯುಂ – ಮನೆಯೊಳಗೊಂದು ಬೆರಳನಿತು ಶಲ್ಯಮಿ[7]ರ್ದುದೆಂದೊಡೇನಂ ಕೊಟ್ಟಾದೊಡಮುದಂ ಕಳೆಯಿಸು (ವಿ) ವರ್. ಕಾಣ್ಬನಿತಱೊಳಮೇಧ್ಯಮಿರ್ದೊಡೆ ಅತ್ತಲ್ ನೋಡಲುಂ ಪೇಸಿ ತೊಲಗಿ ಪೋಪ(ಪಿ)ರ್. ಇ(ಅ)ಂತ[8]ಪ್ಪರ್ ಮೆಯ್ಯೆಂಬ ಮನೆ ಶಲ್ಯದೊಳಂ, ಪೊಲಸಿನೊಳಂ, ಚರ್ಮದೊಳಂ ಸಮೆದಮೇಧ್ಯದೊಳ್ ಮೂತ್ರದೊಳಂ [9]ತೀವಿರ್ದೊಡಲಿಂಗೆ ಪೇಸದಿದನೆ ಪ್ರಧಾನಂಮಾಡಿರ್ಪಯ್, ನಿನಗೆ ಸಾಲಮುಂ ಸೋಲಮುಮುಂಟ[10]ಪ್ಪುದು—

ಕಂ|| ದೋಸಂ[11]ಗಳವೆನಿತನಿತಱ |
ರಾಸಿಯ [12]ನಗ್ಗದ ವಿನಾಸಿಯಂ ಕುತ್ಸಿತಸಂ ||
ವಾಸಿಯನಱಿಯೊಡಲಂ ಕೃತ |
ನಾಸಿಯನಿದನೇಕೆ ನಂಬಿ ಗುಣಮಂ ಕಿಡಿಪ್ಪೈ || ೨೩ ||

ವ || [13]ಸೂಳೆ[3]ವೆಂಡಿರಂ ನಂಬಿ ನಿಜಾಂಗನೆಯರಂ ಬಿಡುವೆಗ್ಗರಂತೆ ಮೆಯ್ಯಂ ನಂಬಿ ಗುಣಮಂ ಕಿಡಿಸುವಿರೆಂಬುದೇನೊಳ್ಪಿತ್ತೆ ?—

ಉ|| ಪ್ರಾಣ[14]ದ ಪೋಗಿನೊಳ್ ಪೆಣನಿದಂ ಕಳೆಯಿಂ ಸುಡಿ[15]ಮೆಂದು ಪೇೞ್ವ ರಾ |
ಪ್ರಾಣಮನೋಪಿ ಸದ್ಗುಣಮನೊಕ್ಕೊಡೆ ಬಾಲಿಶ್ವಿಣನೆಂಬರುರ್ಕಿನೊಳ್ ||
ಪ್ರಾಣಮುಮೊಳ್ಗುಣಂಗಳು[16]ಮಪೊರ್ಮೆಯೆ ಪೋದೊಡೆ ನಾಯ ಬಾಯ್ಗೆ ತಾಂ |
ಮಾಣದೆ ಬಂದೊಡಲ್ ಪಡುಕೆಯೆಂಬ[17]ರಿದೇಂ ತನು ಕಷ್ಟಮಾದುದೋ || ೨೪ ||

---

(1) ದಲ್ಲಿ (ಕ,ಗ) ಮಲ್ಲಿವಿಡಿ (ಚ,ಜ) (2) ಲ್ವಿದು ಬೆನ್ನರಮಂತೆ (ಕ,ಚ,ಜ) (3) ಯೆಲ್ಗಳೆರಡ್ಸೆರೆ (ಕ,ಗ) (4) ನರಪಂಜರಂ (ಚ,ಜ) (5) ಚರ್ಮದಿಂ ಪೊದಕೆಮಾಂಸದಕೇರ್ಗಳ (ಚ,ಜ) (6) ಮಪ್ಪ ಶೌಚಿಯುಮಿದಂ ಪ್ರಭುಮಾಳ್ಪುದೆ (ಕ,ಜ,ಚ) (7) ರ್ದೊಡೇನಂ (ಕ) (8) ತಪ್ಪಮೆಯ್ಯೆಂಬ (9) ತೀವಿರ್ದೀಮನೆಗೆ (ಕ,ಚ) ತೀವಿರ್ದೀ (ಕ,ಜ) (10) ಪ್ಪುದಾಗದೆ (ಕ,ಜ,ಗ) (11) ಗಳುಮೆನಿ (ಕ,ಖ,ಗ) (12) ನತ ಶೀಘ್ರನಾಶಿಯಂ (13) ಮುಗಿಲ (ಮಟೆಯ) ನೀರಂನಂಬಿಡೊಣೆಯನೀರಂ ತುಳುಂಕಿಕಳೆವ ಕೋಡಗದಂತೆ ಮೆಯ್ಯಂ ನಂಬಿ (ಜ,ಜ) (14) ದಗಲ್ಕೆಯೊಳ್‌ಪೆಣ (ಕ,ಚ,ಜ) (15) ಮೆಂಬ ರಾತಿಯೊಳು (ಕ) (16) ಮತ್ತೊರ್ಮೆಯೆ (ಕ) (17) ರದೇಂ

ವ|| ಇಂತಾವೆಡೆಯೊಳಂ ಕಷ್ಟ[1]ಮುಂ ನಿಕೃಷ್ಟಮು[2]ಮಪ್ಪ ಮೆಯ್ಯಂ ಎಂತು ಅಮೇಧ್ಯಮಂ ಖರ್ಜೂ[3]ರದ ಮರದ ಮೊದಲೊಳಗಿಕ್ಕಿ ತುದಿಯೊಳಾದ ಫಲಮಂ ಕೊ[4]ಳ್ವರ್. ಅಂತೆ ಅಶುಚಿ[5]ಯಪ್ಪೀ ಮೆಯ್ಯಂ ಧರ್ಮ[6]ದತ್ತುಯ್ದು ತಗುಳ್ಚಿ ಪರತ್ರೆಯ ಫಲಮಂ [7]ಕೊಳ್ವುದೊಳ್ಪಿತ್ತಲ್ಲದೊಡೆ ದುಃಖ[8]ಕ್ಕೆಡೆಯಕ್ಕುಮೆಂಬಿನಿತಂ ಬಗೆವುದು—

ಕಂ|| ತನುಕಿಸು[9]ಗುಳಮೆಂಬುದನಱ |
ವನಿತಱವುಮದಂ ಬಿಸುಟ್ಪ ಸಾಹಸ[10]ದನಿತುಂ ||
ನಿನಗರಿದಾ[11]ಯ್ತುಕ್ಕಟ ! ಮಿ |
[12]ಕ್ಕನಂತ ಗುಣಮಿಂತಡಂಗೆ ಕೆಟ್ಟೈ [13]ಜೀವಾ || ೨೫ ||

ವ|| ಮೂಱುಲೋಕದ ವಸ್ತುಸ್ಥಿತಿಗಳನೊರ್ಮೊದಲಱವ ಶಕ್ತಿಯನು[14]ಳ್ಳ ನೀನುಂ ನಿನ್ನ ಮೆಯ್ಯ ಕಿಸು[15]ಗುಳಮನಱಯದಂತಾಯ್ತೆ ! ನಿನ್ನೊಳಿರ್ದನಂತವೀರ್ಯಶಕ್ತಿಯುಂ ಪೊಲ್ಲಮೆಯುಂ ಬಿಸುಡಲಾಱದಂತಾಯ್ತೆ ! [16]ಕಿಡುವೊಡಲಂ ನಚ್ಚಿ ಗುಣಮನಕ್ಕಟಾ ! ನಿರವಶೇಷಮಿಂತು ಕಿಡಿಸು[17]ವುದೇ ?

ಚಂ|| ಬಸಿಱೊಳಗಿರ್ದ ತಾಯೊಳಗೆ ಕಾಱದುದಂ ತೆಗೆದುಂಡು ಕರ್ಮದಿಂ |
ಮಸ[18]ಕದಮೇಧ್ಯದೊಳ್ ನೆಲೆಸಿ ಜಂತುಗಳೊಳ್ ಪುದು[19]ವಾಳ್ದು ದಾಹಮುಂ ||
ಪಸಿವುಮೊಡರ್ಚೆ ಬ[20]ರ್ದಿ ನಮೆದಿರ್ದಿರವಂ ಬಗೆದಂತು ಪುಟ್ಟಿದಂ |
ತೆಸಗುವುದೆಂದು ಪೇಱ್ದೊಡಱಯಿರ್ [21]ನಿಮಗೇಂ ಕಡುದುಃಖ[22]ಮಱ್ತೊಯೋ !
|| ೨೬ ||

ವ|| ಅಮೇಧ್ಯದೊಳ್ ಪುಟ್ಟಿದ ಪುೞುವುಂ. ಬಸಿಱೊಳ್ [23]ಪುಟ್ಟಿದ ಮೆಯ್ಯುಮೆಂತು ಮಶುಚಿಯೆಂಬುದನಱದುಂ ಪೇಸದುದದು [24]ವಾಸನೆಯ ಮೋಹಮುಪ್ಪುದನೀಕಥೆಯಂ ಕೇಳ್ದು ನಂಬುವುದದೆಂತೆನೆ—

---

(1) ನುಂ (ಕ) ನುಂಮುಷ್ಟನುಂ (ಚ,ಜ) ಕನಿಷ್ಠಮುಂ (ಖ,ಗ) (2) ಮೆನಿಸಿರ್ದ (ಕ,ಚ) (3) ರದ ಮೊದಲೊ (ಖ,ಗ) (4) ಳ್ವಂತಶುಚಿ (ಗ,ಘ) (5) ಯಾಗಿರ್ದ (ಕ,ಜ,ಚ) (6) ದೊಳ್ತಗುಳ್ಚಿ (ಕ,ಗ,ಜ) (7) ಕೆಯ್ಕೊಳ್ವ (ಕ,ಚ,ಜ) (8) ಕ್ಕೊಳಗಕ್ಕು (ಕ,ಖ,ಗ) (9) ಕುಳ (ಗ,ಖ,ಚ) (10) ದಿನಿಸುಂ (ಕ) (11) ಯ್ತುಱದಕ್ಕಟ (ಚ,ಜ,ಘ) (12) ಮಿನಿತುಂ (ಕ,ಚ,ಜ) (13) ಕಂದಾ (ಕ,ಗ) (14) ಳ್ಳನಿತುಂ (ಕ,ಗ) (15) ಕುಳಿಗೆಯ (ಕ,ಚ) ಗುಳಕ್ಕೇ (ಖ,ಗ) ಗುಳತೆಯ (ಘ) (16) ಕೇಡಂವೊಡಲನಕ್ಕಟಾ (ಕ,ಗ,ಚ) (17) ವರೇ (ಕ,ಚ) (18) ಗಿದ (ಗ,ಖ) (19) ವರ್ದು ಕ್ಷುತ್ತೃಷಾವಶಗತನಾಗಿ (ಚ,ಜ) (20) ದಿನ್ನು (ಕ,ಗ) (21) ಬಱಯರ್ (ಚ,ಜ) (22) ಮತ್ಥಿರ್ಯೋ (ಕ,ಗ,ಖ) (23) ಪುಟ್ಟಿಪೊಱಮಟ್ಟ (ಕ,ಚ) (24) ದುರ್ವಾಸನೆಯ (ಕ,ಜ) ಸನೆಯದೋಷದ (ಗ,ಖ)

*

## — ವಿದರ್ಕನ ಕಥೆ —

### [ ಸುಭೌಮರಾಜನ ಕಥೆ ]

ಕಂ|| ಅತಿಶಯ ವಿದೇಹ ವಿಷಯಮ |
ನತಿನುತನಾಳ್ಗಂ ಸುಭೌಮನೆಂಬ ನರೇಂದ್ರಂ ||
ವಿತತಶ್ರೀಯುತನಾತಂ |
ಗತಿನಿಪುಣಂ ಮಂತ್ರಿ ಸುಮತಿ[1]ಯೆಂಬೊಂ ಪೆಸರಿಂ || ೨೮ ||

ವ|| ಆಪೆರ್ಗಡೆ[2]ಯೊಂದುದಿವಸಂ ಪೂರ್ವಾಹ್ಣದೊಳ್ ಅರಸನನೋಲಗಿಸುವ ಪೊೞ್ತಂ ತಪ್ಪಿಸಿ [3]ತಡೆದು ಬಂದೊಡರಸನಾತನ"ನಿದೇಕೆ ತಡೆದಿ"ರೆಂದೊಡಾತಂ "ಬಿನ್ನಪಂ" ಎಂದಿಂತೆಂದಂ—

ಶಾ|| ಅವ್ಯಾಬಾಧ [4]ಸುಖಾಭಿಲಾಷಿಗ[5]ಳನೂನೋದ್ಯದ್ದಯಾ[6]ಭಾಷಿಗಳ್ |
ದಿವ್ಯಜ್ಞಾನಿಗಳೂರ್ಜಿತವ್ರತಲತಾಸಂಸ್ಥಾನಿಗಳ್ [7]ಸಾಧು ಸಂ ||
ಸೇವ್ಯರ್ ನಮ್ಮ ಪೊೞಲ್ಗೆ ವಂದೊಡವರಂ ಸದ್ಭಕ್ತಿಯಿಂ ಬಂದಿಸಲ್ |
[8]ಭವ್ಯರ್ಕಳ್ ನೆರೆದೊಪ್ಪಿ ಪೋಗುತಿರೆ ಕಂಡಾನುಂ ಮನೋರಾಗದಿಂ || ೨೯ ||

ವ|| ಅವರೊಡನೆ ಪೋಗಿ ಕಂಡು ಮನಂಗೊಂಡು [9]ನಾಡೆ ಪೊೞ್ತುರ್ದನಪ್ಪುದಱಿಂ ತಡೆದೆ ನೆಂಡೊ[10]ಡೆ "ಪೇೞವರ್ ದಿವ್ಯಜ್ಞಾನಿಗ[11]ಳೆ, ಮುಂತಪ್ಪುದನಿಂತಕ್ಕುಮೆಂದಱಿವರಪ್ಪೊಡೆ ಪೋಗಿ ಬೆಸಕೊಳ್ವಂ, ಬಾ!" ಎಂದು ಆತನನೊಡಗೊಂಡು ಪೋಗಿ ಭಟ್ಟಾರಕರಂ ಬಂದಿಸಿ ಮುಂದೆ ಕುಳ್ಳಿ[12]ರ್ದು "ನಾನಿನ್ನೆನಿತು ಕಾಲಂ ಬಾೞ್ವೆ"ನೆಂದು ಕೇೞ್ದು ಬೆಸ[13]ಕೊಳ್ವುದುಂ, ಭಟ್ಟಾರರೆಂದ(ಬ)ರ್ "ನಿನಗಿನ್ನೇೞುದಿವಸಮಾಯು[14]ಷ್ಯಮುಂಟು" ಎಂದೊಡೆ "ಎನಗೇ ತಱಿಂ ಸಾವಕ್ಕು"ಮೆನೆ "ಸಿಡಿಲ್ ಪೊಡೆ[15]ಯೆ ಸಾವಕ್ಕು"ಮೆಂದೊ[16]ಡೆ "ಮತ್ತೆಲ್ಲಿ ಪುಟ್ಟುವೆ"ನೆನೆ "[17]ನಿನ್ನ ಮಜ್ಜನಂಬುಗುವ ಪಚ್ಚವಡದ ಕುೞಿಯೊಳಗೆ [18]ಕರಿಯ ಪಿರಿಯ ನಿಡಿಯ ತಲೆಯ ಪುೞುವಾಗಿ ಪುಟ್ಟುವೆ"ಯೆಂದೊಡೆ ಅರಸ"ನ(ನಿ)ದನೆಂತು ನಂಬಲಕ್ಕು"ಮೆಂದೊಡಾಗಳ್ ಭಟ್ಟಾರರೆಂಬರ್—

---

(1) ಯೆಂಬೊನನಿಂದ್ಯಂ (ಕ,ಚ,ಜ) ಯೆಂಬ ನರೇಂದ್ರಂ (ಖ,ಗ) (2) ಪೂರ್ವಾಹ್ಣದೊಳ್....ತಪ್ಪಿ ಯೊಂದುದಿವಸಂ (ಕ,ಚ,ಜ) (3) ತಡೆದೊಡ (ಕ,ಜ) (4) ಗುಣಾಭಿ (ಕ,ಚ,ಜ) (5) ಳನಿಂದ್ಯೋದ್ಯದ್ದ (ಖ,ಗ) (6) ಭಾಸಿಗಳ್ (ಖ,ಗ) (7) ಸಾಧುಗಳ್ (ಕ,ಚ,ಜ) (8) ಭವ್ಯರ್ ಕೇಳ್ನೆರೆ (ಚ,ಜ) (9) ಪಿರಿದಂಪೊ (ಕ,ಗ) (10) ದೊಡರಸನೆಂದನಾ ದಿವ್ಯಜ್ಞಾನಿಗಳೇ ಮುಂದಪ್ಪುವನಱಿವರಪ್ಪೊಡೆ (ಕ) ಮ ನುಡಿಯೆ ಅರಸನೆಂದಂ ಅವರ್ ದಿವ್ಯ (ಚ,ಜ) (11) ಳೆಂತಕ್ಕುಮೆಂದಱಿವಿರ (ಕ,ಖ) ಳೆಂತಕ್ಕುಮೇನೆಂಬುವನೆಂತುಂತಾ ವಱಿ (ಗ,ಚ) (12) ರ್ದುಪೇೞಿಮಾಸೆನಿತು (ಕ,ಚ) (13) ಬೆಸಗೊಳೆ (ಖ,ಗ) (14) ಷ್ಯಮೆಂದೊಡೇತಱಿಂ ಸಾವಕ್ಕು (ಗ,ಘ) (15) ಡೆದು (ಕ) (16) ಡೆಲ್ಲಿಪುಟ್ಟುವೆ (ಕ,ಚ) (17) ನಿನ್ನ ಪಚ್ಚಲ ಕೞಿಯೊಳಗೆ (ಕ) ಮಜ್ಜ ನಂಬುಗುವಕುೞಿ (ಚ,ಜ) ನಿನ್ನ ಮಜ್ಜನದ ಪಂಚವಡದಕುೞಿ (ಖ,ಗ) (18) ಕರಿಯಪಿರಿಯ ತಲೆಯ (ಕ,ಜ) (19) ದೊಡೆಂತು ನಂಬಲಕ್ಕುಮನೆ ಭಟ್ಟಾರಕರಿಂತೆಂದರ್ (ಚ,ಜ)

ಕಂ|| [1]ಈಗಳೆ ಗೃಹಕ್ಕೆ ನೀಂ ಪೋ |
ಪಾಗಳ್ ಬೀಲ್ತ್ಪರ್ಕುರ್ [2]ಮುರುಗುರಂ ನಿನ್ನ ಶಿರೋ ||
ಭಾಗದೊಳದು ದಿಟಮಾದೊಡ |
ನಾಗತಮಂ ನಂಬು ಪಲವು ಮಾತಿನೊಳೇನೋ || ೨೯ ||

ವ|| ಎನೆ [3]ಕೇಳ್ದವರ ಮಾತೆಂತುಟಕ್ಕುಮೋ! ನೋಲ್ಪೆನೆಂದಲ್ಲಿಂದಮೆಲ್ದು ನಿಂದು ತನ್ನಾಳೆಲ್ಲಮಂ ಕರೆದು ತನ್ನರಮನೆಯ[4]ನೆಯ್ದುವ ಬೀದಿಯೊಳಾದ ಕಸವುಮೊದಲಾದಮೇಧ್ಯಮೆಲ್ಲಮನುಡುಗಿಸಿ ಕಳೆಯಿಸಿದಿಂ ಬಱಯಂ ತಾನಾನೆ[5]ಯನೇಱ ಮೇಲೆ ಸತ್ತಿಗೆವಿಡಿಯಿಸಿ ಪೋಪಾಗಳ್, ಒಂದೆಡೆಯೊಳ್ ಬೀದಿಯ ಕೆಲದ ಪಿರಿಯ ಮದಿಲ ಮಱಯೊಳಗಿರ್ದೊರ್ವಳ್ [6]ಕೂಸಿನುರುಗುರಮಂ ಸಗಣದಿಂ ಮುದುಡಿ ಪೊಱಗೀಡಾಡಿದೊಡದು ಮೇಗಣಿಂ ನೆಗೆದು ಬಂ[7]ದರಸನ ತಲೆಯ ಮೇಲೆ ಬಿ[8]ಲ್ದಿರೆ ಕಂಡು ಆಗಳಂತೆ ಪೋ[9]ಗಿ ಮಜ್ಜನದ ಮನೆಯಂ ಪೊಕ್ಕು ಮಜ್ಜನಂಬೊಕ್ಕು "ಸವಣೋ ಅಮೋಅ ವಯಣೋ" [10]ಎಂದು ನಿಶ್ಚೈಸಿ—

ಕಂ|| ಎಂಬುದು ಋಷಿ[11]ವಾಕ್ಯಮಿದಂ |
ನಂಬಿ[12]ರ್ದುದು ಲೋಕಮೆಲ್ಲ ಮದಱಂ[13]ದಾನುಂ ||
[14]ನಂಬುವೆನೆಂದಾಗಳೆ ಮಗ |
ನಂ ಬರಿಸಿ ಸಮಂತು ಮುಂದೆ ಕುಳ್ಳಿರಿಸಿ ನೃಪಂ || ೩೦ ||

ವ|| "ಮಗನೆ, ಕೇ[15]ಳಾನಿಂದಿಂಗೇೞನೆಯ ದೆವಸ[16]ದಂದಿಗೆ ಸಿಡಿಲ್ ಪೊಡೆ(ದು)ಯೆ ಸತ್ತೆನ್ನ [17]ಪಚ್ಚವಡದ ಕುೞಯೊಳ್ ಕರಿಯ(ಪಿರಿಯ) ನಿಡಿಯತಲೆಯ ಪುೞುವಾಗಿ ಪುಟ್ಟುವೆಂ ಗಡ! ಪುಟ್ಟಿದೊ[18]ಡೆನ್ನ ನಮೆಯಲೀಯದೆ ನೀಂ ಬೇಗಂ ಬಂ[19]ದೆಚ್ಚು ಕೊಲ್. ಎನಗಿನಿತು ಮೊಳ್ಪಕೆ[20]ಯ್ಯೆ"ಂದಾತನುಮನೊಡಂಬಡಿಸಿ ತನ್ನ ಸಾವಂ ನಂಬಿಯುಂ, ಶ್ರೀಯಂ[21]ಬಿಸುಡಲಾಱದೆಯುಂ ಮೋಹಿಸುತ್ತಿರ್ಪನ್ನೆಗಂ—

---

(1) ಈಗಳ್ನೀಂ (ಕ,ಚ) (2) ಮೂರಗೂಢಂ (ಕ,ಚ) ಕುರ್ಂ ಕಿಸುಕುಳಂ ನಿನ್ನ (ಖ,ಗ) (3) ಕೇಳ್ದರಸನವರ ಮಾತಿನಂದಮಂ (ಕ,ಚ) (4) ಮನೆಗೆಯ್ದೆ (ಕ,ಗ) (5) ಯಂತರಿಸಿ ಯೇಱ ಪೋಪಾಗಳ್ (ಕ,ಚ,ಜ) (6) ಕೂಸಿನಗೂಢಮನೀಡಾ (ಕ,ಚ) (7) ದಾತನ (ಕ,ಚ) (8) ಬಿಱ್ದೊಡದಂ ಕಂಡೇವದೊಳಂತೆ (ಖ,ಗ) (9) ಗಿಯುರಮನೆಯಂ ಪೊಕ್ಕುಮಜ್ಜನಂ ಮಾಡಿ (ಕ,ಚ,ಜ).(10) ಈ ವಾಕ್ಯ ಭಾಗವಿಲ್ಲ (ಕ,ಚ,ಜ) (11) ವಚನಹುದಂ (ಕ, ಚ) (12) ಬಿರ್ದಂದು ಲೋಕಮದಱನೆಂತುಂ ನಾ (ಖ) (13) ತಾನುಂ (ಗ) ನಾನುಂ (ಚ) (14) ನಂಬಿದೆ (ಕ,ಚ) (15) ೞಂದಿಂಗೇೞ (ಕ,ಚ) (16) ದಂದು (ಕ,ಚ,ಜ) (17) ಪಂಚವಳದ (ಖ) ಪಚ್ಚಲವಾಹದ (ಗ) ಪಂಚಳದ (ಕ, ಚ) (18) ಡಲ್ಲಿಯೆನ್ನಂಶಮೆ (ಕ) (19) ದೆನ್ನನೆಚ್ಚುಕೊಂದೆನಗಿಹಿತ (ಕ, ಗ) (20) ಯ್ಯೆಂದೆಂತಾನುಮಾತನ (ಕ,ಚ) (21) ಬಿಸುಟರಲಾಱದೆ ಮೋಹಿಸಿರ್ಪನ್ನೆಗಂ (ಕ,ಗ)

ಮ|| ಮಗನುಂ ಪೆರ್ಗಡೆಯುಂ ನರೇಂದ್ರನಱಿ[1]ವಂ ಕಾವೊಂದಭಿಪ್ರಾಯ[2]ದಿಂ |
ಬಗೆದಿರ್ದಾಗಳೆ ಮಂದಸಂ ಸಮಯಮೇೞ್ದಾ ಪೇೞ್ದ ಪೊೞ್ತೆಯ್ದು[3]ದ ||
ನ್ನೆಗಮಾ ಮಂದಸಿನಲ್ಲಿ ಭೂಮಿಪತಿಯಂ ತಂದಿಟ್ಟು [4]ಮತ್ತಂತೆ ನೀರ್ |
ಪುಗದಂತಾಗಿರೆ ಮಾಡಿ ಪೆರ್ಮಡುವಿನೊಳ್ ತಂದಿಕ್ಕಿದರ್ ಮಂದಸಂ || ೩೧ ||

ವ|| ಆಮಂದಸ[5]ಮಂತು ನೀರೊಳಿರ್ದಂದು ಪಿರಿಯದೊಂದು ಮೀನ ಬೆನ್ನಂ ತಾಗಿ ನಿಂದಿನಿಸಾನುಂ ಬೇಗದಿಂದಾ[6]ಪೊೞ್ತಱಿೞಳಾ ಮೀರ್ಣ ಪೊಳೆದೊಡೆ ಮೇಗೆ ನೆಗೆ[7]ದ ಮಂದಸಂ ಸಿಡಿಲ್ ಬಡಿಯೆ ಸುಭೌಮಂ ಸತ್ತು ತನ್ನ ಪಚ್ಚವಡದ ಕುೞಿಯೊಳ್ ಕರಿಯಪಿರಿಯನಿಡಿಯ ಪುೞುವಾಗಿ ಪುಟ್ಟಿದಂ. ಆಗಳಾತನ ಪುತ್ರಕಳತ್ರಾದಿಗಳ್ ಕಂಡು ದುಃಖಂಗೆಯ್ದು "ನಿಯತಿಃ ಕೇನ ಲಂಘ್ಯತೇ" ಯೆಂಬುದು ತಪ್ಪದೆಂದು ಲೌಕಿಕ ಕ್ರಿಯೆಗಳಂ ಮಾಡಿ ಬಂದು ಕೆಲವುದಿವಸದಿಂದಾತನ ಮಗಂ ಎಮ್ಮಯ್ಯ(ಮ್ಮ)ಂ ತನ್ನ ಪುಟ್ಟುವೆಡೆಯುಂ ಪೇೞ್ದನಾ ಯೆಡೆಯೊಳಂತೆ ಕಂಡೊಡೆಯುಂ ಪೇೞ್ದಂತೆ ನೆಗೞ್ವೆನೆಂದು ಕಿಱಿಯ ಬಿಲ್ಲಂ ಮೀಂಟೆಯುಮಂ ಕೊಂಡುಪೋಗಿ ಪಚ್ಚವಡದ ಕುೞಿಯಂ ನೋೞ್ಪನ್ನೆಗಂ ಕರಿಯ ಪಿರಿಯ ತಲೆಯನಿಡಿಯಪುೞು ನೆಗೆದು ತೋಱಿದೊಡೆ [8]ಮೀಂಟೆಯಂ ತೊಟ್ಟು ತೆಗೆದಿಸುವಾಗಳ್ ಆ ಪುೞು ಕೆಲದ ಮಱೆಯತ್ತ[9]ಲೋ(ಮೋ)ಡಿದೊಡೆ ಮತ್ತಮಂತಿರ್ದು ನೆಗೆದಾಗಳಿಸಲ್ಬಗೆದೊಡೆ ಬೇಗಂ ಪುೞುಂಗಿದುದಂ ಕಂ"ಡಿದರ್ಕಿಲ್ಲಿರ್ಪುದೇ [10]ಮಚ್ಚಿದುದು" ಎಂದಾತಂ ಮಗುೞ್ದು ಪೋದಂ. ಅಂತೆ ಜೀವನೆಲ್ಲಿ [11]ಪುಟ್ಟಿದೊಡಮಲ್ಲಿಯೇ [12]ಮಚ್ಚಾಗುಗುಂ. ಆ ಮಚ್ಚು ಕರ್ಮವಶದಿನಕ್ಕುಂ. ಅದ[13]ಱಿನದಂ ಮೀಱಿ [14]ನಿನ್ನಱಿವಿನ ವಶಂಮಾಡಿ ನೆಗೞ್ವುದು. ಮತ್ತಮೀ ಮೆಯ್ಯಶುಚಿತ್ವ[15]ಮಿಂತುಟಲ್ತೆ—

ರಗಳೆ— ಅಱಿವಿಂಗೆ ಬಿತ್ತಾಗಿ – ಪುೞುವಿಂಗೆ [16]ತುತ್ತಾಗಿ ||
ಕುತ್ತ ದಾಗರ ಮಾಗಿ – ನೆತ್ತರಾಶ್ರಯಮಾಗಿ || ೧ ||
ಪಲ[17]ವೆಲ್ವೆ ಬಲಮಾಗಿ – ಪೊಲಸೆ ತಾಂ ಮೆಯ್ಯಾಗಿ ||
ಉರು[18]ಗುರಂ ನಡುವಾಗಿ – ನರವುಗಳೆ ಸುತ್ತಾಗಿ || ೨ ||
ಪಾಪಕ್ಕೆ ಮನೆಯಾಗಿ – ಕೋಪಕ್ಕೆ ಗುಱಿಯಾಗಿ ||
ತಪ್ಪಿಂಗೆ [19]ಮೊದಲಾಗಿ – ಮುಪ್ಪಿಂಗೆ ನೆಲೆಯಾಗಿ || ೩ ||
ನೋವಿನಿರ್ಪೆಡೆಯಾಗಿ – [20]ಸಾವು ಬರ್ಪೆಡೆಯಾಗಿ ||
ಪೆಣಮೆಂಬ [21]ಪೆಸರಾಗಿ – ಅಣಮಿರಿಸದಂತಾಗಿ || ೪ ||
ಮೊಡೆನಾತ ಕೆಡೆಯಾಗಿ – ಪಡುಕೆಯೆಂಬುದುಮಾಗಿ ||
ಕಿಡಲಿರ್ಪುದಿದುವಿ(ವೆ)ಂತು – ಮೊಡಲಶುಚಿ ತಾ ನಿಂತು || ೫ || – ||೩೨||

(1) ಪೊಂತಾಪೊಂ (ಕ, ಗ) (2) ಯಮುಂ (ಚ, ಜ) (3) ಯ್ದುವನ್ನೆಗಮುಂ (ಖ) ಮತ್ತೆಯ್ದುದನ್ನೆ (ಗ) (4) ಬಯ್ತಿಟ್ಟು (ಕ) ಮುಚ್ಚಿಟ್ಟು (ಚ,ಜ) (5) ಮಂನೀರೊ (ಕ,ಗ) (6) ೞ್ತಾದಾಗಳ್ (ಕ) (7) ದಾಮಂದ (ಖ) (8) ಮಿಟ್ಟೆಯಂ (ಕ,ಚ) (9) ಪೋಡಿಪೊಕ್ಕೊಡಾತಂ ಮತ್ತಿನಿತುಬೇಗಂ (ಗ,ಖ) ಪಾರ್ದಿರ್ದು (ಕ) (10) ಮಚ್ಚಾದುದು (ಕ,ಚ,ಜ) ಮಚ್ಚಾದಂತಿರ್ಕುಮೆಂದಾತಂ (ಖ,ಗ) (11) ಪುಟ್ಟುಗುಮಲ್ಲಿಯೇ (ಕ) (12) ಮಚ್ಚಿರ್ಕುಂ (ಕ,ಚ) (13) ಱಿಂದಾಕರ್ಮಮಂಮೀಱಿ (ಕ,ಚ) (14) ನೀನಱಿ (ಖ,ಗ) ನಿನ್ನಱಿವಿನ ವಶದೊಳ್ ನೆಗೞ್ವುದು (ಕ,ಖ) (15) ಮಿಂತಲ್ತೆ (ಕ, ಚ) (16) ಪುತ್ತಾಗಿ (ಚ, ಜ) (17) ವೆಲುವೆ (ಕ, ಚ) (18) ಗುದಂ (ಕ) ಗೂಢ (ಚ,ಜ) (19) ಮನೆಯಾಗಿ (ಕ,ಜ) (20) ಸಾವಿನಿರ್ಪೆಡೆ (ಖ,ಗ) (21) ಮಾತಾಗಿ (ಕ)

*ಕಂ|| ಇಂತಪ್ಪುದು ಮೆಯ್ [1]ನಿನಗಿರ |
ಲೆಂತಪ್ಪುದು ಸುಖಮುಡುರ್ತು ನಿನ್ನಂ ಕಿಡಿಸಲ್ ||
ಮುಂತಪ್ಪುದು [2]ನೀನಱವೊ(ದೊ)ಡೆ |
[3]ಪಿಂತಪ್ಪುದು ಕೆಮ್ಮನೇಕೆ ಮೋಹಿಸುತಿರ್ಪಯ್ || ೩೩ ||

ವ || [4]ಊರಱವನಱದು ಬಿಣ್ಪುವೆರಸಿದೊ (ಪೊ) ೯ಕ್ಕಲುಂ, ಮೆಯ್ಯ[4]ಱವಱದು ಪಾಪಮಂ ಬೆರಸಿರ್ಪ ಜೀವನುಂ ಕಿಡದಿರ್ಕುಮೆ ?—

ಚಂ|| ಬಗೆ ಗಡ ಗರ್ಭಮೊಳ್ [5]ನವೆವುದಂ ಬಗೆ ಪುಟ್ಟುವ [6]ದುಃಖದಂದಮಂ |
ಬಗೆ ಬಳೆವಂದಿ[7]ನೇಱದಿಕೆಯಂ ಬಗೆ ಕುತ್ತದೊ[8]ಳಿರ್ಪವಸ್ಥೆಯಂ ||
ಬಗೆ ಕಡು[9]ಮುಪ್ಪವುಂಕಿದೆಡೆಯಂ ಬಗೆ ಸಾವಿನೊಳಪ್ಪ ಸೇದೆಯಂ |
ಬಗೆದೊ(ಯೊ)ಡಲೇವುದೆಂದು ನೆಗೞಲ್ಲದೊಡೆ[10]ಲ್ಲಿಯ ಮಾತೊ! ಜೀವನೇ || ೩೪ ||

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

ಅಶುಚಿತ್ವಾನುಪ್ರೇಕ್ಷಾ ನಿರೂಪಣಂ — ಸುಭೌಮ ಕಥಾನಿವರ್ಣನಂ

[11]ಸ ಪ್ತ ಮಾ ಧಿ ಕಾ ರ ಂ.



---

ಮುಕ್ತ್ಯಂಗನಾಯ್ಯೈರಚಿತಂ ವಿಶಾಲಂ – ರತ್ನತ್ರಯಂ ಶೇಖರತಾಯ ಯೇನ ||
ಯಃ (ತ್) ಕಂಠಮಾಸಾದ್ಯ ಬಭೂವ ಶಿ (ಸಿ) ಷ್ವಾ – ತಂ್ವಾಸುಪೂಜ್ಯಂ ಪ್ರಣಮಾಮಿ ನಿತ್ಯಂ ||

---

(1) ನನಗಿರ (ಕ) (2) ನೀಂ ಪೋದೊಡೆ (ಕ) ನೀನಱದೊಡೆ (ಖ, ಗ) (3) ಪಿಂತಿರ್ಪುದು (ಕ) (4) ಊರಱವ....ಮೆಯ್ಯಱವ (ಕ) (5) ಬಗೆವುದಂ (ಕ, ಚ) (6) ಮೃತ್ಯುಗೊಡ್ಡಮಂ (ಕ, ಚ) ಮುತ್ತುವೊಡ್ಡಮಂ (ಗ) (7) ನೇಳಿಕೆಯುಮಂ (ಖ, ಗ) (8) ಳಾದ (ಕ) ಳಪ್ಪ (ಚ, ಜ) (9) ಮುಪ್ಪುಮವುಂಕು (ಖ, ಗ) ಮವುಂಕಿದೆಡೆ (ಛ) (10) ಲ್ಲಿಯುಮೊಳ್ಳಿಕೆಯ್ದುಮೇ (ಕ, ಚ, ಜ) (11) ಷಷ್ಠಾಧಿಕಾರಂ (ಕ)

* ಈ ಕಂದವು (ಖ, ಗ, ಛ) ಪ್ರತಿಗಳಲ್ಲಿಲ್ಲ.

## ‖ ಅಷ್ಟಮಾಧಿಕಾರಂ ‖

## — ಆ ಸ್ರ ವಾ ನು ಪ್ರೇ ಕ್ಷೆ —

[ ದೀಪಾಯನಮುನಿ — ಬಾಹುಬಲಿ — ಪುಷ್ಪದಂತಾಕಂತಿ — ಪಟಹಸ್ತರ ಕಥೆಗಳು ]

ಕಂ‖ [1]ತನುಧನವನಿತಾ ಜನನೀ ।
ಜನಕ ವಿಮೋಹದೆ ಕಷಾಯ ಮೊದವು[2]ಗುಮದರಿಂ ‖
ಜನಿಯಿಸುಗುಮಯ್ದು [3]ಮಾಸ್ರವ ।
ಘನವಿಪುಳದ್ವಾರಮಲ್ಲಿ ಪುಗುಗುಂ ಪಾಪಂ ‖ ೧ ‖

ವ‖ ಅಯ್ದುಮಾಸ್ರವ[4]ದ್ವಾರಮಾವುವೆಂದೊಡೆ :—ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಮೆಂಬುವು, ಅಲ್ಲಿ

ಚಂ‖ ಕೊಲೆ ನವಭೇದದಿಂದ [5]ಮೊದವುತ್ತಿರೆ ಪಾಪರಜೋತ್ಕರಂ ಕರಂ ।
[6]ಪಲವತಿವೇಗದಿಂದೊಡನೆ ಪೊಕ್ಕನು[7]ಬಂಧದೆ ಸಂತಮೆಲ್ಲಿಯುಂ ‖
ನಿಲಲಣಮಿಾಯದುಗ್ರನರಕಂಗಳೊಳಿಕ್ಕಿದೊಡಲ್ಲಿ ವೇದನಾ ।
ಜ್ವಲನಶಿಖಾಳಿ ತಳ್ತಿಱಿರೆ [8]ಬೇವುವು ನೋವುವು ಜೀವರಾಶಿಗಳ್ ‖ ೨ ‖

---

ಈ ಸಂಸ್ಕೃತ ಶ್ಲೋಕ ಟೀಕಾ ತಾತ್ಪರ್ಯಗಳು (ಕ, ಚ, ಜ) ಪ್ರತಿಗಳಲ್ಲಿವೆ—

ಜ್ಞಾನೀ ವಿವೇಕೀ ಪರಮಸ್ವರೂಪೀ–ಧ್ಯಾನೀವ್ರತೀ ಪ್ರಾಣಿಹಿತೋಪದೇಶೀ ‖
ಮಿಥ್ಯಾತಿ(ತ್ವ)ಪಾ(ವಾ)ತೀ ಶಿವಸೌಖ್ಯಭೋಜೀ–ಬಭೂವ ಯಸ್ತಂ ವಿಮಲಂ
ನಮಾಮಿ ‖ ೧ ‖

ದೇಹೇ ಸ್ನೇಹಯುತೇ ಲಗ(ಗಲ)ತ್ಯವಿರತಂ ರೇಣೋರ್ಗಣೋಽಯಂ ಯಥಾ ।
ಮಿಥ್ಯಾವೃತ್ತ ಕಷಾಯಯೋಗ ಕಲುಷೇಽಜಸ್ರಂ ಸಜತ್ಯಂಗಿನಿ ‖
ತದ್ವತ್ಸ್ವೈಕಶರೀರಗಾಃ ಸುಮಿಳಿತಾನಂತಾಣವೋ ವರ್ಗಣಾ ।
ವಿಶ್ವಾತ್ಮಾವಯವೇಷ್ವನಂತ ಗು(ಗ)ಣನಾ ನೋಕರ್ಮಣಾಂ ಕರ್ಮಣಾಂ ‖ ೨ ‖

ಟೀ‖ ಸ್ನೇಹಯುತೇ–ಪಸೆಯಂ ಪೂಸಿದ(ೆ) ದೇಹೇ–ಶರೀರದೊಳು, ಅವಿರತಂ–ಎಡೆವಱಿಯದೆ ರೇಣೋಃ–ಸಣ್ಣದೂಳಿಯ(ಗಳ) ಗಣಃ–ಸಮೂಹಂ, ಅಯಂ–ಇದು, ಲಗತಿ (ಗಲತಿ?)–ಪತ್ತುಗುಂ, ಯಥಾ–ಎಂತು ? ತದ್ವತ್ (ತಥಾ)–ಅಂತೆ, ಮಿಥ್ಯಾವೃತ್ತಕಷಾಯ ಯೋಗಕಲುಷೇ–ಮಿಥ್ಯಾತ್ವಾಸಂಯಮ ಕಷಾಯಯೋಗಂಗಳಿಂ ಕದಡಿದ, ಅಂಗಿನಿ–ಪ್ರಾಣಿಯೊಳು, ಸ್ವೈಕ ಶರೀರಗಾಃ–ತನ್ನೊಂದು ಶರೀರಕ್ಕೆ ಸಂದ, ಸುಮಿಳಿತಾನಂತಾಣವಃ–ಒಂ(ವಂ)ದಾದ ಅನಂತಪರಮಾಣುಗಳನುಳ್ಳ, ನೋಕರ್ಮಣಾಂ–ನೋಕರ್ಮಂಗಳ, ಕರ್ಮಣಾಂ–ಕರ್ಮಗಳ, ವರ್ಗಣಾಃ–ವರ್ಗಣೆಗಳು ಅನಂತಗುಣನಾಃ–ಅನಂತಂಗಳು, ವಿಶ್ವಾತ್ಮಾವಯವೇಷು–ಆತ್ಮನೆಲ್ಲಾ ಪ್ರದೇಶಂಗಳೊಳು,

---

(1) ತನುವಿನ ಧನವಿನ ವನಿತಾಜನವಿನ ಮೋಹದೆ (ಕ, ಚ, ಜ) (2) ಗುವುದದಱಿಂ (ಖ,ಗ) ಗುವುಮದಱಿಂ (ಕ) (3) ಮಾಶ್ರವ (ಙ,ಜ) (4) ಶ್ರವಮೆಂಬುವು ಆವುವೆಂ (ಕ,ಚ,ಜ) (5) ಮೊದವುಟ್ಟಿರೆ (ಕ, ಛ) (6) ಫಲವತಿ (ಕ) ವಲಮತಿ (ಚ,ಜ) (7) ಬಂಧಿಸಿ ಸಂತತಮೆ (ಕ) (8) ಬೇವುದು ನೋವುದು ಜೀವಸಂಕುಳಂ (ಕ)

ವ|| ಅಶುಭಮಪ್ಪ ಮನಃಕೃತಂ, [1]ಮನಃಕಾರಿತಂ, ಮನಸಾನುಮೋ[2]ದಿತಂ, ವಚನ ಕೃತಂ, ವಚನಕಾರಿತಂ, ವಚನಾನುಮೋದಿತಂ, ಕಾಯಕೃತಂ, ಕಾಯಕಾರಿತಂ, ಕಾಯಾನು ಮೋ[3]ದಿತಂಗಳಪ್ಪ ಒಂಬತ್ತುಂ ತೆಱದಿಂ ಒಂದ ಪಾಪದಿಂ [4]ಮದಹಸ್ತಿ ತನ್ನಂ ತಾನೆ ಮೇಗಣಾತನ ವಶದಿಂ ಮಿಳಿಯಂ ಕೊಟ್ಟು ಕಟ್ಟಿಸಿಕೊಳ್ವಂತೆ ಜೀವನುಂ ಕರ್ಮವಶದಿಂ [5]ತನ್ನಂ ತನ್ನಿಂದಮೆ ಕಟ್ಟಿಸಿಕೊಂಡು ದುಃಖಮನುಣ್ಗುಂ—

ಕಂ|| [6]ಪೊಲೆ ಮಂತ್ರದೆ ಪೋಕುಮು[7]ನಂ |
ಗೊಲೆ ಧನದಿಂ ಪೋಕುಮುಡಸಿ ಕಡಿದಾಗಳೆ ಸಂ ||
ಕಲೆ ಪೋಕುಂ ಕೊಂದವರ್ಗಳ |
ಕೊಲೆ ಪೋಕುಮೆ ಭವಭವಂಗಳೊಳ್ ನೋಯಿಸುಗುಂ || ೩ ||

ವ|| ನಂಟರ್ ಸತ್ತು ಪತ್ತಿದ ಕೊಲೆ[8]ಯಲೆಗುಮೆಂದೊಡೆ ತಾಂ ತನಗೆ ಮಚ್ಚಿಮಾಡಿದ ಕೊಲೆಯಲೆಯದಿರ್ಕುಮೆ ? ಅದನಿಲ್ಲಿಯೆ ಕಾಣಲಾಗ—

ಉ|| [9]ಒಕ್ಕಱುವೆಲ್ಲಮಂ ಕಳೆದು ಭೂಷಣಮಂ ಪಣೆಗಟ್ಟು ಗಟ್ಟಿ ತೊ |
[10]ಟ್ಟಿಕ್ಕವಡಂಗಳಂ ಕರಿಯಕುಪ್ಪ [11]ಸದೊಟ್ಟೊಡಗೂಡಿ ಬೇಡರೊಳ್ ||
[12]ಪೊಕ್ಕರೊಳಂತೆ ಬಿಲ್ವಿಡಿದು ಮುಂದಣ ಪಾಪದ [13]ರೂಪೆ ಬಂದು ಕೆ |
[14]ಯ್ಮಿಕ್ಕದೆ ಕಾಡುವೊಕ್ಕಿ[15]ರವೆ ಪೇೞದೆ ಪೇೞ್ ಕೊಲೆಯೊಂದು ಪಾಪಮಂ ||೪||

---

ಅಜಸ್ರಂ – ಎಡೆಬಿಡದೆ – ಸಜಂತಿ–ಪತ್ತುವುವು–ಕರ್ಮಾಣುಗಳುಂ ಬದ್ಧಾತ್ಮನಂ ಪತ್ತುವುವೆಂಬ ಆಸ್ರವಾನುಪ್ರೇಕ್ಷೆ—

ಜೀವಪೋತೋಭವಾಂಭೋಧೌ ಮಿಥ್ಯಾತ್ವಾದಿಕ ರಂಧ್ರವಾ‌ಃ ||
ಆಸ್ರವಂತಿ ವಿನಾಶಾರ್ಥಂ ಕರ್ಮಾಂಭಾಂಸಿ ಚಿರಂ ಭ್ರಮಃ || ೩ ||

ತಃ|| ಸಂಸಾರಮೆಂಬ ಸಮುದ್ರದೊಳ್ ಅನಾದಿಕಾಲದಿಂ ಮಿಥ್ಯಾತ್ವ ಮೊದಲಾದ ಬಂಧ ಕಾರಣಂಗಳೆಂಬ ರಂಧ್ರಂಗಳೊಡಗೂಡಿ, ತಿರುಗುತ್ತಿರ್ಪ ಜೀವನೆಂಬ ಪಡಗಂ (ಕಿಡಸಲ್ವೇಡಿ) ಜ್ಞಾನಾವರಣೀಯಂ ಮೊದಲಾಗಿರ್ಪ ಕರ್ಮಂಗಳೆಂಬ ಜಲಂತೀವಿ ಮುೞುಂಗಿಸಲೆಂದಿರ್ಪುದು, ಆ ಜಲಂ ಪೊರ್ದದಂತೆ ನೆಗೞಲ್ವೇೞ್ಕುಮೆಂಬೀ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂ ಗೆಯ್ವೆನದೆಂತೆನೆ—

---

(1) ಮನಸಾಕಾರಿತಂ (ಜ) (2) ಮೋದನಂ (ಕ) ಮೋದಂ (ಖ, ಗ) (3) ಮೋದನಂಗಳೆಂಬ (ಕ) (4) ಕರಿ ಮೇಗಣಾತನವಶದಿಂ ತನ್ನಂ ತಾನೆ ಕಟ್ಟಿಸಿ (ಕ,ಜ) (5) ತನ್ನಂಕಟ್ಟಿಸಿ (ಕ,ಚ) (6) ಕೊಲೆ (ಕ) (7) ಮೆನಂ ಕೊಲೆ (ಕ,ಚ) (8) ಯಱುಗು (ಜ) (9) ಮಿಕ್ಕರಿಯುಳ್ಳರಂ (ಕ) ಮಿಕ್ಕಱುವುಳ್ಳರಂ (ಜ) ಮಿಕ್ಕರಿ ವುಳ್ಳರಂ (ಚ) (10) ಟ್ಟಿಕ್ಕಡಮಂಕರಿ (ಕ,ಜ,ಚ) (11) ಸ ಮಿರ್ಕೊಡ (ಗ,ಚ) (12) ಬೆಕ್ಕರೊಳಂತೆ (ಕ) ಬೆಚ್ಚರಮಂತೆ (ಜ,ಚ) (13) ರೂಪೆಂದು (ಕ) ರೂಪೆಯೊಂದು (ಚ) (14) ಯ್ಮಿಕ್ಕವೊಲಾಗೆ ಬೇಂಟೆಯೊಳೆ ಪೇೞವೆ (ಕ) (15) ಕ್ಕಿರವಪೇೞ್ ಕೊಲೆಯೊಂದು (ಚ,ಜ)

ವ|| [1]ಗೆಂಟೆಱಿಕೋಳಿರ್ದ ಪೊಗೆಯಂ ಕಂಡು ಕಿಚ್ಚುಂಟೆಂದಱಿವಂತೆ ಕುತ್ಸಿತಮಪ್ಪ ನೆಗಱ್ತೆಯಿಂ ಮುಂದಣ ದುಃಖಮಂ ಪೇೞ್ಗುಂ—

ಕಂ|| ಪುಸಿ ನಾಲ್ಕುಮಾೞ್ಕೆಯಾಗಿಯು |
ಮಸದೃಶ ಗುಣಕಲ್ಪವೃಕ್ಷ[2]ಮಂ ಬೇರಿಂದಂ ||
[3]ಕುಸಿಯಿಪುದು ಪುಸಿದೊಡೆಂ ತಾಂ |
ಕುಸಿ[4]ದಾೞ್ಗುಂ ನೆಟ್ಟನುಗ್ರ ನರಕಾರ್ಣವದೊಳ್ || ೫ ||

ವ|| ಆ ಪುಸಿಗಳಾವುವೆಂದೊಡೆ :—[5]ಉಳ್ಳುದನಿಲ್ಲೆಂಬುದುಂ, ಇಲ್ಲದುದನುಂಟೆಂಬುದುಂ, ವಿಚಾರಿಸದೆ ನುಡಿವುದುಂ, ಪಾಪಹೇತುವಪ್ಪ ನುಡಿಯುಂ ಎಂದಿಂತು ನಾಲ್ಕುಂ ತೆಱದ ಪುಸಿಯಿಂ ಪಾಪಂ ಪುಗುಗುಂ. ಅದ[6]ಱಿಂ ಪಣಮುಳ್ಳಂ ತನ್ನ ಮನೆಯಂ ಕಳ್ಳರ್ ಪುಗೆ ಬೆರ್ಚದೊಡಂ, ಗುಣಮುಳ್ಳಂ ತನ್ನ ಬಗೆಯಂ ಪಾಪಂ ಪುಗೆ ಬೆರ್ಚದೊಡ[7]ಮಾಯಿರ್ವರ ಕೇಡಿಂಗಮಳವಿಯುಂಟೆ?-

ಮ|| ಬಿಡದೆಲ್ಲಂದದಿ[8]ನುಕ್ಕೆವಿಪ್ಪ ಬಗೆಯಿಂ ಬಂಚಿಪ್ಪ ಸಾಮರ್ಥ್ಯದಿಂ |
ಕಡುನೋವಾಗಿರೆ ಮಾೞ್ಪ ನಿಗ್ರಹದಿನಿಂತನ್ಯಾಯದಿಂದರ್ಥಮಂ ||
ಪಡೆವಂದಂ ಕಳವೆಂಬುದಕ್ಕುಮದು ತಾನಾದಂದು ಪಾಪ[9]ದ್ವಿಪಂ |
ತಡೆದೇನಿರ್ಕುಮೆ ಬಂದು ಕಟ್ಟೆ [10]ಘನದುಃಖಾಂಭೋಧಿಯಲ್ಲಿಕ್ಕುಗುಂ || ೬ ||

ವ|| [11]ಅಂತು ತ್ರಿದೋ[12]ಷಂಗಳಳವಿವಿಡಿದು ಕುತ್ತಂ [13]ಮಿಗುಗುಂ. [14]ಕಳವುವಿಡಿದು ಪಾಪಂ ಪುಗುಗುಮೆಂಬುದಂ ಬಗೆವುದು—

ಕಂ|| ಆ(ಅ)ಬ್ರಹ್ಮಂ ದಶವಿಧದಿಂ |
ತೀಬ್ರಂ ನೆಲಸಿದೊಡೆ ಸೋಲ್ತು ಸೈರಿಸದೆ ಚತು ||
ರ್ಥಬ್ರತಮಂ ಪೊರ್ದಿದೊಡೆ |
ನ್ನೀ ಬ್ರಹ್ಮಂ ಕಿಡಿಸಲಘುಚಯಮಂ ಸೋರ್ತರ್ಕುಂ || ೭ ||

ವ|| [15]ಅಂತು ಪತ್ತುಂತೆಱದಬ್ರಹ್ಮದಿಂ ತುತ್ತತುದಿಯೊಳಾಪತ್ತುವಡಿಸುವ ಕರ್ಮಂಗಳ್ ಪತ್ತುಗುಂ, ಅದಱಿಂ ಜೀವಂ ದುಃಖಾಗ್ನಿಯೊಳ್ ಪೊತ್ತುಗುಮವು ಬಸನಮೆ. ಅಂತಪ್ಪಬ್ರಹ್ಮಂ ದಶವಿಧಮಾವುವೆಂದೊಡೆ — ಇಂದ್ರಿಯವರ್ಧನಮಪ್ಪಾಹಾರಮನುಣ್ಬುದುಂ, ತಂಬುಲಮಂ

---

(1) ಗೆಂಟೆನೋಳಿರ್ದ (ಛ, ಗ) (2) ಮುಂ (ಚ) (3) ಕುಸಿಗುಂ ಪುಸಿದೊಡವಂ ತಾಂ (ಕ) (4) ದಾಗಳುಂ (ಕ) (5) ಮುಳ್ಳುವ (ಕ) (6) ರಿಂದಂ (ಕ) (7) ಮಾತನೀತನ ಕೇಡಿಂ (ಕ,ಜ) (8) ನುರ್ಕೆವಿರ್ಪ (ಕ, ಜ) (9) ಪದ್ವಿಷಂ(ಕ,ಗ,ಖ) ತರ್ಪಗುಂ(ಚ,ಜ) (10) ಕೆಟ್ಟಬಹುದುಃ(ಕ,ಚ) (11) ಅಂತೆ(ಕ,ಚ) (12) ಷಂಗಳ್ವಿಡಿದು (ಖ,ಗ) (13) ಪುಟ್ಟುಗುಂ (ಕ,ಚ) (14) ಕಳವಿಡಿದು (ಗ,ಖ) (15) ಅಂತಪ್ಪಬ್ರಹ್ಮ(ಕ) ಅಂತಬ್ರಹ್ಮಂ ದಶವಿಧಮಾವುವೆಂದೊಡೆ....ಕರಂ ಪ್ರಯತ್ನದೊಳಿರ್ಪುದಿಂತು ತುದಿಯೊಳಾಪತ್ತುವಡಿಸುವ (ಚ,ಜ)

ತಿಂಬುದುಂ, ವಸ್ತ್ರಕಂ[1]ಬಳಂಗಳಂ ಪೊದೆವುದುಂ, ಮೃದುಶಯ್ಯೆಯೊಳೊಱಗುವುದುಂ, ತನ್ನ[2]ದಂತನಖತನುಮಲಾದಿಗಳಂ[3]ಪಿಂಗಿಸುವುದುಂ, ಆಗಳುಂ[4]ಸ್ತ್ರೀಪ್ರಸಂಗದೊಳಿರ್ಪುದುಂ, ಸುಗಂಧ ದ್ರವ್ಯಂಗಳಂ ಪೂಸುವುದುಂ, ಸುಗಂಧ[5]ಪುಷ್ಪಂಗಳಂ ವಾಸಿಸುವುದುಂ, ಗೀತವಾದ್ಯಂಗಳಂ ಕೇಳ್ವುದುಂ, ನೃತ್ಯನಾಟಂಕಗಳಂ ನೋೞ್ಪುದುಂ ಎಂದಿಂತುದಶವಿಧಮಕ್ಕುಂ. ಅಂತು ಬ್ರಹ್ಮಚರ್ಯಮೆಂಬುದು ದೇವವ್ರತಂ. [6]ಆವವ್ರತಕ್ಕಮುತ್ಕೃ[7]ಷ್ಟಂ. ಅಂತಾ ಮಹಾವ್ರತಮಂ ತಾಳ್ದಿದ ಸತ್ಪುರುಷರೀಪೇೞ್ದ ಪತ್ತುಂತೆಱದತೀಚಾರಂಗಳಂ ಪೊರ್ದದೆ ಕರಂ ಪ್ರಯತ್ನದೊಳಿ[8]ರ್ಪುದು.

ಮ|| ಬಸನಕ್ಕಲ್ತು ಗ[9]ರಲ್ಲಿರೆಂತೆನೆ ಮಹಾದುಃಖಂಗಳಂ ಮಾೞ್ಪುದು |
ವ್ಯಸನಂಗಳ್ಗೊಲಿದೇಕೆ ಪೇೞಿರ್ ಕಿಡಿಸುವೈ(ವಿರ್) [10]ಸ್ವರ್ಗಂಗಳೊಳ್ ಮೆಚ್ಚಿದೊ ||
ಳ್ಪೆಸನಂ[11]ಗಳ್ ಸಲೆ ಮಾೞ್ಪ ದಿವ್ಯಸುಖಮಂ ಕೂ[12]ಱಪ್ಪಿನಂ ನಿಂದು ಸೈ |
ರಿಸದುಣ್ಬಲ್ತಿಯಿನೊಕ್ಕ ಗಂಜಿಗುಡಿವಿರ್ ನಿಮ್ಮನ್ನರಾರ್ ಗಾವಿಲರ್ || ೮ ||

ವ|| ಪಸಿವಡಸಿದಾಗಳ್ ಕೂೞಪ್ಪಿನ[13]ಮಿರದೆ ಗಂಜಿಗುಡಿವೊಡಂ ಅಲ್ಪಸುಖಕ್ಕೆ ಅಂಜಿ ಗುಣಮಂ ಕೆಯ್ಕೊಂ[14]ಡು ದುರ್ವ್ಯಸನಕ್ಕೆಱಗುವೊಡಂ, ಆತಂಗುಣ್ಬರುಚಿಯುಂ ಮಾಡುವ ಪಸಿವು ಕಿಡುಗುಂ. ಈತಂಗೆ ದಿವ್ಯ ಸುಖಮಂ ಮಾಡುವ ಗುಣಂ ಕಿಡುಗುಂ. ಅದಱಿಂ ಪಲವುಕಾಲಂ (ದಿವ್ಯ)ಸುಖಮನನುಭವಿಸುವ ಬಸನಕ್ಕಲ್ತುಯುಳ್ಳೊಡೆ, ಕೆಲವು ದೆವಸಂ ಬ್ರತಕ್ಕೆ ಸೈರಿಸಿ [15]ಮೇಲೆಯನುಭವಿಸಲಾಗಾ !—

ಕಂ|| [16]ವ್ಯಸನೀ ಕೇಳ್ ನಿನ್ನ ಮಹಾ |
ವ್ಯಸನಂಗಳ್ ನಿನಗೆ ಸುಖಮನಾಗಿಪುವೆಂಬಾ ||
ಪುಸಿ ಕಿಂಪಾಕಫಲಂಗಳ |
[17]ರಸದಿಂಪದು [18]ತುದಿಯೊಳಱಿವನೆಂತುಂ ತರ್ಕುಂ || ೯ ||

ವ|| ಕಿಂಪಾಕಫಲಮೆಂಬ [19]ವಿಷವೃಕ್ಷದ ಪಣ್ಣ ಬಣ್ಣಮುಂ ಕಂಪುಮಿಂಪುಂ ಕಣ್ಣಂ, ಮೂಗಂ, ನಾಲಗೆಯುಮಂ [20]ಸೋಲಿಸೆ ತಿಂದು ಸಾಪಂತೆ ಬಸನಂ[21]ಗಳ ಸವಿಗೆ ಸೋಲಮಂ ಮಾಡಿ [22]ಸೋಲ್ತೊಡೆ ಮೇಗೆ ಕಿಡುವೆಯದಱಿಂ ಪರದಾರಗಮನಮೆಂ[23]ಬುದು ದುರ್ವ್ಯಸನಂ, ಅದಱತ್ತ ಸಾರದಿರ್—

---

(1) ಬಳಿಗಳಂ (ಕ,ಚ) (2) ದಂತತನು (ಕ) (3) ವಾಶಿಸುವುದುಂ (ಚ,ಜ) (4) ಸ್ತ್ರೀಭೋಗದೊಳಿ (ಕ,ಜ) (5) ಪುಜ್ಪಂ (ಖ,ಗ) (6) ಆವ್ರತ (ಕ) ವ್ರತಮೆಯುದು ಆ (7) ಷ್ಟಂಮತ್ತಾವ್ರ (ಕ,ಜ) (8) ರ್ಪುದು ತುದಿಯೊಳಾಪತ್ತು (ಖ,ಗ) (9) ರಲ್ಲದೆಂತೆನೆ (ಕ,ಗ) (10) ಸ್ವರ್ಗಾಪವರ್ಗಂಗಳೊಳ್ (ಕ,ಜ) (11) ತಾಂ ಸಲೆಬಾಳ್ವ (ಕ,ಚ) (12) ಳಿರ್ಪಿನಂ ಮಾಣ್ದುಂ (ಕ,ಜ) (13) ಮಿರ್ದು ಇರದೆ (ಕ,ಚ) (14) ಡಿರ್ದು (ಕ,ಚ) (15) ಮೇಗಣ ಸುಖಮನನುಭವಿಸಲಾಗಾ (ಕ,ಜ) (16) ಬೆಸನೀ (ಕ,ಗ) ಬಸನಿಯೆ (ಚ,ಜ) (17) ರಸವಿನ ಸವಿಯಂತೆ (ಕ,ಚ) ರಸವಿನತೆಜಿನಂ (ಖ,ಗ) (18) ತುದಿಯೊಳಳಿಪಂ ಪಡೆಗುಂ (ಕ,ಚ) ಳಳಿವಂ ಪಡೆಗುಂ (ಖ,ಗ) (19) ನಂಜಿನ ಮರದ ಬಣ್ಣಕ್ಕಂ ಕಂಪುಮಿಂಪಿಂಗಂ (20) ಸೋಲೆ (ಕ, ಚ) (21) ಗಳಬ (ವ) ಸಮಾಗಿ (ಕ,ಜ) (22) ಸೋಲ್ತುನೆಗೞ್ದೊಡೆ (ಕ,ಜ) (23) ಮೆಂಬದುರ್ವ್ಯಸನದತ್ತ ದೆಸೆಯ (ಕ,ಚ)

ಮ|| ನೆರೆವೆಂ ಪೆಂಡಿರೊಳೆಂಬ ಕಾರಣದೊ[1]ಳಂ [2]ಮತ್ತಿನ್ನದೇಗೆಯ್ವುಮಾಂ |
ಪೊರೆವೆಂ ಮಕ್ಕಳನೆಂಬ [3]ಬೇವಸದೊಳಂ ಮೆಯ್ಗಿಂಬಮೆಲ್ಲಂದದಿಂ ||
ದೊರೆಕೊಳ್ವಂತಿರೆ ಮಾಳ್ಪೆ[4]ನೆಂಬುದಱೊಳಂ ಸಂಮೋಹಮುಂಮಾಡಿಕೊಂ |
ಡೆರಡುಂ ಮಾಳ್ಕೆಯ ದುಷ್ಪರಿಗ್ರಹದಿನೆಲ್ತಂದಿರ್ದಘಂ ಕಟ್ಟುಗುಂ || ೧೦ ||

ವ|| [5]ತೆರಳಿಯ ಪುೞುವುಂ ತನಗೆ ಮನೆಮಾಳ್ಪೆನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಱಮಡಲಱಿಯದೆ ಸಾವಂತೆ, ಜೀವನುಂ ತನ್ನ ಪೆಂಡಿರ, ಮಕ್ಕಳ, [6]ಮೆಯ್ಯ, ಧನಧಾನ್ಯಾದಿಗಳ, ಪೆರ್ಚು ಕಾರಣಮಾಗಿ ಬಾಹ್ಯಾಭ್ಯಂತರಮೆಂಬೆರಡುಂ ತೆಱದ ಪರಿಗ್ರಹಮಂ ಮಾಡಿ ಸಂಕ್ಲೇಶ ಪರಿಣಾಮದೊಳ್ ಕೂಡಿ ಪಾಪಮಂ ಬರಿಸಿ ತನ್ನಂ ದುರ್ಗತಿಯೊಳಿರಿಸಿ ನವೆಯುತ್ತಿರ್ಕುಂ. ಇಂತಯ್ದುಂತೆಱದ ಪಾಪಾಸ್ರಮವನಾಗಲೀಯದಿರೆಂತುವಿಂದ್ರಿಯಂಗಳ ಮಚ್ಚಂ [7]ಮಚ್ಚದಿರು.

ಕಂ|| ವಿಷ[8]ಯಿಗಳ ವಿಷಯಮೆಲ್ಲಂ |
ವಿಷಮಂಗಳ್ ವಿಷಸಮಂಗಳಪ್ಪುದಱಿಂದಂ ||
ವಿಷಯಾ[9]ಸಕ್ತಿಯೆ ಪೊಲ್ಲದು |
ಕಷಾಯಮಮಂ ಮಾಳ್ಕುಮಾ ಕಷಾಯದಿ ನಱ[10]ವರ್ || ೧೧ ||

ವ|| ವಿರುದ್ಧಾಹಾರಮನುಂಡಂಗೆ [11]ಕುತ್ತಂ ಪುಟ್ಟುಗುಂ. ವಿಷ[12]ಯಂಗಳೊಳಪ್ಪ ಮಚ್ಚಂ ಕೆಯ್ಕೊಂಡಂಗಾ ಮಚ್ಚು ಕಷಾಯ[13]ಮಂ ಪುಟ್ಟಿಸುಗುಂ. ಆಕುತ್ತಕ್ಕೆ [14]ತಕ್ಕ ಕಷಾಯಮುಮ ನೀಬಸನಿ[15]ಗಾದ ಕಷಾಯಮುಮಂ ತವೆ ಮಱುಗಿಸಿದೊಡಲ್ಲದೆ ಗುಣಂಗೆಯ್ಗುಮೆ? ಮತ್ತಮಿಂತು–

ಶಾ|| ಸ್ನೇಹಾಭ್ಯಂಗ[16]ಮನುಳ್ಳ ಮೆಯ್ಯನೆ ರಜಂ ತಿಣ್ಣಂ ತಗುಳ್ವಂತೆ ಸಂ |
ದೇಹಂ [17]ಕೆಯ್ಕೊಳೆ ಮೂಢನಾಗಿ ಮನದೊಳ್ ಮಿಥ್ಯಾತ್ವಮೆಂಬೊಂದು [18]ದು ||
ಸ್ನೇಹಂ ಪೊರ್ದಿದ ಜೀವನಂ ಮಲರಜಂ ಸಾರ್ಗುಂ ಮಲಂ ಸಾರೆ [19]ನೀಂ |
ದೇಹೀ ದುಃಖದೊಳಾಳ್ವೆಯೆಂದಱಿಪೆಯುಂ [20]ಕೆಯ್ಕೊಳ್ ನಯಜ್ಞಾನಮಂ || ೧೨ ||

ವ|| [21]ಅಂತು ಮಿಥ್ಯಾದೃಷ್ಟಿಯಪ್ಪ ಜೀವನಂ ಪಾಪಂ ಪತ್ತಿದೊಡಂ ತೊಱೆಯ ನಡುವಿರ್ದವಂ ನಿಲಲಱಿಯದೆ ಶಿಲೆಯಂಪೊತ್ತೊಡಂ ಆವಂ ತಲೆಕೆಳಗಾಗಿ ನರಕದೊಳ್ ಬೀಳ್ಗುಂ. ಇವಂ [22]ತೊಱೆಯೊಳಾ[23]ಳ್ಗುಂ. ಎನೆಯುಂಬಗೆಯಿಂ, ನಿಮ್ಮ ಬೆಸನಮೊಳ್ವಂ ಬಗೆಯಲೀಯ[24]ದಕ್ಕುಂ.

---

(1) ಳೀ (ಕ) (2) ಮತ್ತಂತುಮೇಗೆಯ್ದು (ಕ, ಚ) (3) ಬೆಸದೊಳಂ (ಕ) (4) ನೆಂಬಬಗೆಯಿಂದು ಮೋಹ (ಕ, ಚ) (5) ತೋರಣೆಯ (ಕ) ತೆರಣೆಯ (ಚ) (6) ಮೆಯ್ಯುಂಬಿವರಿಂದಭ್ಯಂತರ (ಕ, ಗ) (7) ನಿಚ್ಚೈಸದಿರು (ಖ, ಗ) (8) ಯಗಳ (ಕ) (9) ಸಕ್ತತೆ (ಕ) ಸಕ್ತಿಗೆ (ಚ) (10) ದಿರ್ (ಕ, ಚ) (11) ತ್ತಮಕ್ಕುಂ (12) ಯಂಗಳಮಚ್ಚಂ ನಿಚ್ಚೈಸುವಂಗೆ (ಕ, ಚ) (13) ಯಂಪುಟ್ಟುಗುಂ (ಕ, ಚ) (14) ತಂದ (ಕ) (15) ನಿಗೊದಗಿಬಂದ (ಕ, ಚ) (16) ನದಿರ್ದ (ಕ) ನದಿಂದ (ಚ) (17) ಕೆಯ್ಗೆ (ಕ) (18) ಸಸ್ನೇಹಂ (ಕ) (19) ಕೇಳ್ದೇಹೀ (ಕ, ಚ) (20) ಗೆಂಟಾಗೆಯಜ್ಞಾನವಿಂ (ಕ) (21) ಅಂತಜ್ಞಾನಿಯಪ್ಪಾತನಂ (ಕ, ಚ) (22) ತೊಱೆಯಪಾಯ್ವಾತಂ ಶಿಲೆಯುಂ ಪೊತ್ತೊಡಂ (ಕ, ಚ) ಪಾಯ್ವಾತಂ ಈಸಲಱಿಯದೊಡವಂ (ಚ) (23) ಳ್ಗುಮೆಂದು ಪೇಳ್ದೊಡಂ ಬಗೆಯಿರ್ನಿಮ್ಮ ಬೇವಸ (ಕ, ಚ) (24) ಯದವಾಗದೆ (ಕ)

ಕಂ|| ಕುರುಡಂ ಕಣ್ಣಿಂದಱಿಯಂ |
ಕರಮಱಿಪಿದ ಬೆಸನಿ ಯಾವತೆಱದೊ[1] ಳಮಱಿಯಂ ||
ಕುರುಡಂ ಕುರುಡನೆ ? ಬೆಸನಿಯೆ |
ಕುರುಡಂ ಗತಿಯಪ್ಪ ದೆಸೆಯನಱಿಯ[2]ದೆ ಕೆಟ್ಟಂ || ೧೩ ||

ವ|| [3] ಎಲೆ ಪಱಿದೊಡೆ (ಡಂ) ಮರಂ[4] ಸಾಗುಮೆ ? ಬೇರ್ ಪಱಿದೊಡೆ ಮರಂ ಸಾಗುಂ. ಕಣ್ ಕೆಟ್ಟೊಡೆ ಗತಿ ಕಿಡುಗುಮೆ ? ಅಱಿವು ಕೆಟ್ಟೊಡೆ ಗತಿ ಕಿಡು[5]ಗುಂ. ಅದಱಿಂದಂ ಬಸನಿ ಸಾಮಾನ್ಯದ ಕುರುಡ[6] ನಲ್ಲನೆಂದಿಂತು ಬಸನದ ಪೊಲ್ಲಮೆಯನಱಿದು ಜಿನದೀಕ್ಷೆಯಂ[7] ಕೆಯ್ಕೊಂಡು ಯೆಲೆ [8] ಋಷಿಯೇ, ಕೇಳಿಂ ಬಸನಕ್ಕಱಿಪಿದಂದು ಅಣಮೊಳ್ಳಿತಲ್ತು.

ಚಂ|| ಬಸನಿಗಳಪ್ಪ ಲೌಕಿಕ[9]ರ ದುರ್ವ್ಯಸನಂಗಳನಿಲ್ಲಿ ಕಂಡು ನೀ |
ನೊಸೆದಱ(ಳಿ)ಗೆಯ್ತುದಿಂ ಮುನಿಪ ಸೋಲ್ತೊಡೆ ನಿನ್ನಳಿಪಿಂಗೆ [10] ಬರ್ಪವಳ್ ||
ಕಸಗಳೆವಾಕೆ ಮೇಣ್ ಕುರುಡಿ ಮೇಣ್ ವಿಕಟಾಂಗದ [11] ಱಂಡೆ ಮೇಣದೇಂ |
ಬಸನ[12]ವೊ ಪೊಲ್ಲದುಂಡಱವ ರೋಗಿಯ[13] ಪೋಲ್ ಕಿಡಿಪ್ಪೆ ತಪಂಗಳಂ || ೧೪ ||

ವ|| ಗೃಹಸ್ಥರ ಬಸನಂ [14]ಮೇಗೆ ಪೊಲ್ಲದೊಡಮಾಗಳೆಕ್ಕಾನುಮೊರ್ವಂಗೆ ಇನಿಸುಲೇಸು ದೊರೆಕೊಳ್ಗುಂ. [15] ತುಡುಗುಣಿಯುಣ್ಬಾಗಳಿನ ಉಣಿಸಿನಿಸು ಲೇಸಾದೊಡಂ ಬಱಿಕ್ಕೆ ಲೋಗರಱಿದದಂ ಕಂಡಾಗಳೊಳ್ಳಿತಲ್ತೆಂತೆಲೆ ತಪಸ್ವಿ, ನಿನ್ನಳಿವು[16] ವೆಡೆಯುಂ ಪೊಲ್ಲದಱಿಂ ನೀಂ ಕೆಯ್ಕೊಂಡ ಮಹಾವ್ರತಂಗಳನೇಕಱವೈ ? ಅದನಱಿದೊಡೆ [17] ನಿನ್ನ ನೀನಱವೈ ?—

---

(1) ಳಮರಿವಂ (ಕ, ಚ) (2) ದ ತೆಱದಿಂ (ಕ, ಖ, ಗ) (3) ಎಲೆಯಂಪಱಿ (ಕ) (4) ಸಾಯ್ಗುಮೆ (ಕ) (5) ಗುಂಬಸನಿ (ಕ) (6) ನಲ್ಲೆಂದಿಂತು (ಕ) (7) ಕೊಂಡು (ಚ, ಜ) (8) ಋಷಿಯರ್ಕಳಿರಾ ಕೇಳಿಂ (ಕ) (9) ರತಿ ವೇಸನಂಗಳಲ್ಲಿ (ಕ) (10) ವರ್ಪವಳ್ (ಜ) (11) ಱಂದೆ (ಟ) (12) ಮೆ (ಕ) (13) ಪೋಲಳಿಯಲ್ ತಪಂ (ಕ) ಪೋಲ್ತಳಿಯಲ್ ತಪಂ (ಖ, ಗ) ಪೋಲಳಿಪಲ್ ತಪಂ (ಚ, ಜ) (14) ಲೇಸಲ್ಲದೊಡಮಾಗಳ್ಕೆ ಲೇಸು ದೊರೆ (ಕ) ಮೇಗೆ ಪೋದೊಡಮೊರ್ಬಂಗಿನಿಸು (ಚ, ಜ) ತುಡುಗುಣ್ಬಾತನುಣ್ಬಾಗಳಿನುಣಿಸಿನಿಸುಲೇಸಾದೊಡಂ ಬಳಿಕ್ಕರಿಡಾಗಳೊಳ್ಳಿ (ಕ) ಮೋಗಣ್ಗೆ ಪೊಲ್ಲದೊಡಮಾಗಣ್ಗೆ ಲೇಸು (ಜ) (15) ಗೃಹಸ್ಥನುಂಬಡೆ ನಿಶ್ಚಿಂತದಿಂ ಪುಂಡುಪಸಿ (ಶಿ) ವಂ ಕಳೆ....ತುಡುಗುಣ್ಬಾತ– (ಖ, ಗ) ಆರುಮಂ ಕಾಣಲೀಯದೆ ತುಡುಕುವ ಸಮಯಕ್ಕೆ ಲೋಗರಕಂಡಲ್ಲಿಯಭಿಮಾನಿ ಪೋಗಿ (ಜ) (16) ವೆಡೆಗಳುಂಯಾಗಳುಂ ಪೊಲ್ಲದುಗೆಯ್ಗುಂ ಪೊಲ್ಲದರ್ಕೆನೀಂ ಕೆಯ್ಕೊಂಡ (ಕ) (17) ನಿನಗೆ ಯೆರಡುಂ ಜನ್ಮದೊಳ್ ಸುಖಮಾಗದು (ಖ, ಗ)

ಕಂ|| ಜಗದೊಳ್ ಚೋದ್ಯಂ ಪಲವುಂ |
ನೆಗೞ್ದೊಡ[1] ಮೇನಮರ್ದನುಂಡು ಕಾಱುವುದುಂ ಮ ||
ಲ್ಗೊಗೆದ [2] ತಪಸ್ಸಿನ ಕೇಡಂ |
ಬಗೆವಾಗಳ್ ಕರಮ ಚೋದ್ಯಮಿಂತೀ ಯೆರಡುಂ || ೧೫ ||

ವ|| ಎನಿತಾನುಂ ಕಾಲ[3]ದೊಳೆನಿತಾನುಮಮೃತಮಂ ಪಡೆದುಮುದ[4]ನುಂಡು ಮತ್ತೆ ಕಾಱುವರೆಂಬುದೇಂ ? ಅನಂತ[5]ಭವಂಗಳೊಳೆಲ್ಲಿ[6]ಯುಂ ದೊರೆಕೊಳ್ಳದಂತಪ್ಪ ತಪಂ ದೊರೆಕೊಂಡೊಡೆ ಮಗುೞ್ದುೞಿಪುವರೆಂಬು[7]ದೇಕೆ ? ಈ ಚೋದ್ಯಂಗಳ್ ಸಾಮಾನ್ಯಂಗಳೇ ?—

ಮ|| ಬಿಸು[8]ಟುಂ ತಾಯೆನಗೆಂದು ಮತ್ತ(ತ್ತೆ)[9]ಮೆಱ(ಱೆ)ಗಿಂ ತಾಯೆಂಬುದೇ ಪೆಂಡಿರಂ |
ಬಸನಂ ಚಿಃ ! ನಿನಗೇವುದಯ್ಯ ತಪಸೀ ನಾಣ್ಚಾ ! ತಪಃ[10]ಪಾವಕಂ ||
ಪ್ರಸರಂಗೊಂಡರೆ[11]ವೆಂದದೊಂದು ಪೆಣನಂತಾಗಿರ್ದು ನೀಂ ಪೋಗಿ ಬೆ |
ರ್ಚಿಸದಿರ್ ಪೆಂಡಿರ[12]ನುಂತೆ [13]ಬೆರ್ಚುವವರ್ಗಳ್ ನಿನ್ನಿಂ ಕರಂ ಬೆರ್ಚರೇ ? || ೧೬ ||

ವ|| ತಪಸ್ಸಂತಾಪದೊಳರೆವೆಂದ ಪೆಣನಂತಪ್ಪ ಮೆಯ್ಯಂ ಪೆಂಡಿ[14]ರತ್ತ ತರ್ಪಾಗಳ್ ಅವರ್ [15]ಓಡುವ ಮೃಗದ ಮೇಲೆ [16]ಪಱಿ(ವ)ಣೆಯನಿಕ್ಕಿದಂತೆ ಮಿಗೆ ಬೆರ್ಚುವರ್. ನಿಷ್ಕಾರಣಮೇಕೆ ಗುಣಂಗಳಂ ಕಿಡಿಸುವೈ ?—

ಕಂ|| ಕಂಪುಳ್ಳುದಱಿಂ ಸುರ[17]ವರ |
ರುಂ ಪೂವಂ ತಲೆಯೊ[18]ಳಿಡುವರಾ ಪೂವನೆ ದಲ್ ||
ಕಂಪುಗಿಡೆ ಕಾಲೊಳೊದೆಯಲ್ |
ಕಂಪಿಸುವು[19]ದದೇನು ಮಾಗದೇ ಗುಣದಱಿವಿಂ || ೧೭ ||

ವ|| [20]ತಲೆಯೊಳಿರ್ದು ಕಂಪುಗಿಡೆ ಬಾಡಿದೊಡೀಡಾಡಿದ ಪೂಮುಮಂ, ತಪಕ್ಕೆ ವಂದು [21]ಗುಣಂಗೆಟ್ಟ ಋಷಿಯುಮನಾರ್ ಮುಟ್ಟುವರ್ ? ಆರ್ ಮನ್ನಿಸುವರ್ ? ಬೇರ್ ಪಱಿದ ಮರನುಂ, ಮೂಲಗುಣಂಗಳ್ ಕೆಟ್ಟ ತಪಮುಂ ಫಲಮಾಗದೆಂಬುದನ[22]ಱಿದಿರಿಮೆಂತು ಮುಳಿಪದಿರಿಂ—

---

(1) ಮೇಂ ಮರ್ದನುಂಡು (ಖ,ಗ) ಮೇನಮುರ್ದುಂಡು (ಚ) (2) ತಪಸ್ವಿಯಕೆಡುಗಂ (ಕ) ಕೆಡುಗುಂ (ಚ) (3) ದಿನೆಂತಾನುಂ (ಕ,ಜ) (4) ನುಂಡು ಕಾರುವೆನೆಂ (ಕ) (5) ಭವದೊಳೆಲ್ಲಿಯುಂ (ಕ) (6) ಯುಂ ದೊರೆಕೊಂಡೊಡೆ (ಜ) (7) ದೇನೀ ಚೋದ್ಯಂಗಳ್ ಸಾಮಾನ್ಯದ ಚೋದ್ಯಂಗಳೇ (ಕ) ದೇನಿದಂ ಬಗೆವಾಗಳ್ ಕರಮ ಚೋದ್ಯಮಿಂದೇಯೆರಡುಂ (ಜ) (8) ಟ್ಟೈ (ಕ) (9)ಮದರಿಂ ತಾಯೆಂಬುದೆ ಪೆಂಡಿರಂ(ಕ)ಮತ್ತೆನುಱಿದಿಂ ತಾಯ್ತೆಂಬುದೇಂ (ಜ) (10) ಪಾತಕಂ (ಜ) (11) ವೆಂದುದೊಂ (ಕ) (12) ನಂತೆ (ಕ) (13) ಮಚ್ಚುವವ (ಖ,ಗ) (14) ರತ್ತೊಯ್ವಾಗಳ್ (ಕ) (15) ಓಡುವುದಱಮೇಲೆ (ಜ) (16) ಪಱಣೆಯ (ಜ) (17) ನರರುಂ (ಕ) ರುಂ ಯಿಂಬಿನೊಳಾಪೂವತಂದು ತಲೆಯೊಳಗಿಟ್ಟಾಕಂಪು (ಖ,ಗ) (18) ಳಿಟ್ಟಮಂ ಪೂ (ಖ) (19) ಓಡುವುದಱಮೇಲೆ (ಜ) (20) ತಲೆಗೆವಂದು ಕಂಪೋಡಿಬಾಡಿದ ಪೂವುಮಂ (ಕ) (21) ಗುಣಮೋಡೆ ಕೆಟ್ಟ (ಕ) (22) ರಿದಿಂತಳಿಪದಿರಿಂ (ಕ)

ಚಂ|| ಬಿಡಿಸಿ ಪರಿಗ್ರಹ[1]ದ್ವಿತಯಮಂ ತಱಸಂದು ತಪೋನಿಯೋಗದೊಳ್ |
ನಡೆವ ಮುನೀಂ[2]ದ್ರನುನ್ನತಿಯುಮಂ ಮಿಗೆ ಪತ್ತು[3]ವುದೆಂದುಮೆಂದೊಡೋ ||
ಗಡಿಸದನೇಕಭೇದದ ವಿಮೋಹಮಹಾದ್ಭುತಪಾಪಬಂಧದೊಳ್ |
ತೊಡರ್ದ ಗೃಹಸ್ಥರಂ ಮುಸುಱ [4]ಮುತ್ತದೆ ಮಾಣ್ಗುಮೆ [5]ಪಾಪದಾಸ್ರವಂ || ೧೮ ||

ವ|| [6]ಬೇವ ಮನೆಯಿಂ ಪೊಱಮಟ್ಟೋಡು[7]ವರಂ ಪಾಱ ಬಂದ ಕಿಡಿ[8]ಯಿಂದಂ ಸುಡುವ ಕಿರ್ಚು ತನ್ನೊಳಗಿರ್ದ[9]ವರನೆಂತುಮುಱಯಲೀಗುಮೆ ? [10]ಮತ್ತಂ ಗೃಹಸ್ಥಾ, ನೀಂ ಕೇಳ—

ಕಂ|| ನಾಲ್ಕುಂ ಕಷಾಯ[11]ದಿಂದೀ |
ನಾಲ್ಕುಂ ಕರ್ಮಂಗಳೊದವೆ [12]ಸಂಸೃತಿಯಂ ನೀ ||
ಗಲ್ಕಂ ಸಲೆ ಮುಕ್ತಿಗೆ ಪೋ |
ಗಲ್ಕಂ ದೊರೆಕೊಳ್ಳದೆಂಬ ಕಥೆಗಳ[13]ನಱಯಾ || ೧೯ ||

ವ|| ಪುಲ್ಮನೆಯೊಳಿರ್ದವಂ ಕಿರ್ಚಿನ[14]ಪೆರ್ಚನಿಚ್ಚೈಸಿದೊಡಂ ಸಂಸಾರದೊಳಗಿರ್ದಾತಂ ಕಷಾಯಂಗಳ ಪೆರ್ಚ[15]ನಿಚ್ಚೈಸುವೊಡಂ ಆಯಿರ್ವರುಂ ಬೇವುದುಂ ನೋವು[16]ದುಂಏಂ ಪಿರಿದೇ ? ಕ್ರೋಧಮಾನಮಾಯಾಲೋಭಂಗಳೆಂಬ ನಾಲ್ಕುಂಕಷಾಯಂಗಳಿಂ [17]ಕೆಟ್ಟವರ ಕಥೆಗಳ [18]ನಿನ್ನಪ್ಪೊಡಂ ಕೇಳ ಜೀವಾ ?—



(1) ದ್ವಯಮುಮಂ (ಚ, ಜ) (2) ದ್ರರಂ ತಗುಳಲೆಂದೆಡೆವಾರುತುಮಿರ್ಪ ಪಾಪಮೋ। (ಕ) (3) ವುದೆಂದುಮೋ (ಕ,ಖ) (4) ಪತ್ತದೆ (ಕ) (5) ಪಾಪಸಂಕುಳಂ(ಖ,ಗ) (6) ಜೀವಮನೆಯಂ(ಕ) (7) ವರಂ ಕಿಡಿಯಿಂದಂ ಸುಡುವಕಿರ್ಚೊಳಗಿರ್ದರಂ (ಕ) ಮಟ್ಟರುಂ ಪಾಱ (ಖ,ಗ) (8) ಯಿಂದಂಬೆಂದ ರೆಂದೊಡೆ ಕಿರ್ಚಿನೊಳ (ಚ,ಜ) (9) ವರನೆನ್ತುಱಯಲೀಗುಮೆ (ಚ, ಜ) (10) ಮತ್ತಮೊಂದುಮಾತಂ ಗೃಹಸ್ಥ (ಕ,ಜ) (11) ದಿಂದಂ (ಕ) (12) ಸಂಶ್ರುತಿಯನಿದಂನಿಃ (ಕ) (13) ಕೇಳಾ (ಚ,ಜ) (14) ಪೆರ್ಚಂ ನಿಶ್ಚೈಸಿದೊಡಂ....ದೊಳಿರ್ದ ಕಷಾ (ಕ,ಜ,ಚ) (15) ನಿಶ್ಚೈಸದೊಡವರ್ಬೇವರ್ ಯಿವರ್ನೋವರ್ (ಕ) (16) ದೇವಿರಿದು (ಕ,ಚ,ಜ) (17) ಕೆಟ್ಟರಕಥೆಗಳಂ ಕೇಳಿಮವೆಂತೆನೆ (ಕ) (18) ನಿಂತಪ್ಪೊಡಂ (ಕ,ಖ)

## [ ನಿದರ್ಶನ ಕಥೆಗಳು ]

### ( ೧. ರೋಷ ಕಷಾಯದ ಕಥೆ — ದೀಪಾಯನನ ಕಥೆ )

* ಚಂ|| ಮನದೊಳಗೊಪ್ಪಿ ಕಾಮನಿರೆ [1]ಬೆಬ್ಬಳನಾಗಿ ಮಹೇಶ್ವರಂ ಗಡಂ |
ಮನಸಿಜನೀತನೆಂ[2]ದುಱದೆಪೇೞ್ ಮುನಿದೋವದೆ ಸುಟ್ಟು [3]ಕೊಂದನೆಂ ||
[4]ದನಿಯತಚಿತ್ತ ನಿರ್ದೊಡೆ ಮನೋಜ[5]ನೞಲ್ದವನರ್ಧನಾರಿಯ |
ಪ್ಪನಿತು ಪರಾಭವಕ್ಕೆ ಗುಱಿಮಾಡಿದನಾರ್ ಕಿಡರಯ್ಯ ಕೋಪದಿಂ || ೨೦ ||

ವ|| ವಿಪರೀತಚಿತ್ತದಿಂ ಕಾಮದೇವಂಗೆ ಮುಳಿದ ಮಹೇಶ್ವರನುಮರ್ಧನಾರಿಯಪ್ಪ[6]ನಿತು ಪರಾಭವಮೆಯ್ದಿದನೆಂದೊಡೆ ಮುಳಿಸಿಂ[7]ದಾರುಂ ಕಿಡರೆ—

ಕಂ|| ಮುನಿ[8]ಸೊಗೆಯೆ ಬರ್ಪ ಪಾಪಮ |
ನನಿತಿನಿತೆಂದಱಿವರಾರೊ ದೀಪಾಯನನೆಂ ||
ಬನುಪಮಮುನಿ ಮುನಿದಾಗಳೆ |
ತನಗೆ[9]ಯ್ದಿದ ಸುಗತಿಯೞಿ[10]ದಧೋಗತಿಗಿೞಿದಂ || ೨೧ ||

ವ|| ದೇವನಿರ್ಮಿತಮಪ್ಪ ದ್ವಾರಾವತಿಯೆಂಬ ಪೊೞಲುಂ ಪನ್ನೆರಡುವರ್ಷದಂದಿಂಗೆ ದೀಪಾಯನಮುನಿಯಿಂದೆ [11]ಕಳ್ಳಿಂದೞಿಗುಮೆಂಬಾದೇಶಂ ಕಾರಣಮಾಗಿ ಯಾದೇಶಮಂ [12]ಬಿಸುಟು ದೀಪಾಯನಂ ತಪಂಬಟ್ಟು ಪೋದಂ. [13]ಬೞಿಕ್ಕಂ ಪೊೞಲೊಳಗುಳ್ಳ ಕಳ್ಳೆಲ್ಲಮ ನೊಯ್ದು ಅಡವಿಯೊಳಂ ಬೆಟ್ಟ[14]ದ ಡೊಣೆಯೊಳಂ ಪೊಯ್ದರ್. ಆ ದೀಪಾಯನಮುನಿಯು ಮೊಳ್ಳಿತ್ತಾಗಿ ತಪಂಗೆಯ್ದು ವಿಹಾರಿಸುತ್ತುಂ ಪನ್ನೆರಡುವರುಷದವಧಿ ನೆಱೆದುದೆಂದಧಿಕಮಾಸದ [15]ಪೆರ್ಚ್ಚನವಧಾರಿಸದೆ ದ್ವಾರಾವತಿಗೆ ಬಂದು ಪೊಱವೊೞಲೊಳ್ [16]ಕಲ್ನೆಲೆನಿಂದಿರ್ದೊಡಾ ಪೊೞಲ ಪೊಲೆ[17]ಯನೊರ್ವಂ ಬೇಂಟೆವೋಗಿ ನೀರಡಿಸಿ ಬೞಲ್ದು ಬಂದು ಬೆಟ್ಟದ ಡೊಣೆ[18]ಗಳೊಳ್ ಮುನ್ನಮೊಕ್ಕಿರ್ದ ಕಳ್ಳುಂ ಬಳೆದು ತಿಳಿದಿರ್ದೊಡದಂ ಕುಡಿದು ಸೊರ್ಕಿ ವಂದಾ ಕಲ್ನೆಲೆಯೊಳ್ ನಿಂದಿರ್ದ ಮಹರ್ಷಿ[19]ಯಂ ಱೋಡಾಡಿ ಕಾಡಿ ಪೆಗಲನೇಱಿರ್ದು ತಲೆಯಂ [20]ಱುಂಜೆಯುರ್ದುತ್ತುಂ ಬಾಜಿಸಿದೊಡಾ ಮುನಿ ಮುನಿಸಿನಿಂ ಸತ್ತೂರ್ಧ್ವಗತಿಗೆ [21]ಕಟ್ಟಿರ್ದಾ ಯುಷ್ಯಂ ಕುಂದೆ ಬಂದಗ್ನಿಕುಮಾರನಾಗಿ ಪುಟ್ಟಿ ಬಂದಾ ಪೊೞಲಂ ಸುಟ್ಟು ಕಿಡಿಸಿ ಮತ್ತೆಯುಂ ಪಾಪಮುಂ ನೆರೆಪಿ ನರಕಕ್ಕಿೞಿದನದಱಿಂ ಕ್ರೋಧಕಷಾಯಂ ಸಾಮಾನ್ಯಮೇಂ? [22]ಅಲ್ಲದೆ ಮಾನಕಷಾಯ[23]ದಳವುಮೇಂ ಕಿಱಿದೇ ?—

---

(1) ವಿಹ್ವಳನಾಗಿ (ಜ, ಚ) (2) ದುಪೆಱನಂ ಮುಳಿ (ಜ, ಚ) (3) ಕೊಂದನೆಂ (ಜ, ಚ, ಗ) (4) ದನಿಮಿತ (ಕ, ಜ) (5) ನಗೆಲ್ದವನರ್ಧ (ಕ, ಚ) (6) ನೀತನೆಯ್ದಿದ (ಕ) (7) ದಾವೊಂಕಿಡದಂ (ಖ, ಗ, ಚ) ದಾವಾವಂಕಿಡಂ (ಕ, ಜ) (8) ಸೊಸಗೆ (ಜ, ಚ) (9) ಯ್ದುವಗತಿಯನಳಿದ (ಜ, ಚ) (10) ದುರ್ದುಗತಿ (ಖ, ಗ) (11) ಕಳ್ಳಿಂದಂ ಕಿಡುಗು (ಕ) (12) ಬಿಟ್ಟು (ಕ, ಚ) (13) ಇತ್ತ (ಖ, ಗ) (14) ದೊಳಂ (ಕ, ಚ) (15) ಪೆರ್ಚಂ ಬಗೆಯದೆ (ಕ, ಚ) (16) ಕಲ್ಮೇಲೆ (ಕ, ಖ) (17) ಯರಂದಿನದೆವಸ (ಸ) ಮನಂತಂತೆ ಪೋಗಿ ನೀರಡಸಿ (ಖ, ಗ) (18) ಗಳೊಳ್ತೀವಿರ್ದ ಕಳ್ಳುಬಳೆದು ತಿಳಿದಿರೆಯದಂ ನೀರೆಂದು ಕುಡಿದು (ಕ) (19) ಯರಂ ನೀಡುಂಪಾಡಿ (ಖ, ಗ) (20) ಗುಂಜಿಗುರ್ದಿ ತಲೆಯುಪಱಿಯೆಂದು ಬಾಜಿಸುವಾಗಳಾಮುನಿ (21) ಪೋಪತಪಂವ್ಯರ್ಥಮಾಗೆ ಕೆಟ್ಟಗ್ನಿಕುಮಾರನಾಗಿ (ಚ, ಜ) (22) ಈ ವಾಕ್ಯ ಖ, ಗ, ಛ ಪ್ರತಿಗಳಲ್ಲಿಲ್ಲ (23) ಯವಳಲು (ಕ, ಖ)

* ಈ ಪದ್ಯವು (ಜ, ಗ) ಪ್ರತಿಗಳಲ್ಲಿಲ್ಲ.

(೨. ಮಾನಕಷಾಯದ ಕಥೆ — ಬಾಹುಬಲಿಯ ಕಥೆ)

ಚಂ|| ಬೆಸ[1]ಸಿರದೆನ್ನನೆಂದು ಬಲವಂದು ಮನಂಗೊಳೆ ನಿ[2]ಂದ ಚಕ್ರಮಂ |
ಬಿಸುಟು ಮಹೋಗ್ರಮಪ್ಪ ತಪದೊಳ್ ನಿಲೆ ಮಾನಕಷಾಯದಿಂ ಮಳ ||
ಪ್ರಸರದ ಕೇಡು ಬಾಹುಬಲಿಗಂ ತಡೆದಿ[3]ರ್ಪನಿ ತಾಯ್ತು [4]ಮತ್ತಿನೀ |
ಪಸುಗೆ ಸಮಾನರಂ ಗುಣವಿಹೀ[5]ನರನೇಕದು ಕಾಡದಿರ್ಕುಮೇ || ೨೨ ||

ವ|| ಅಂತು ಬಾಹುಬ[6]ಲಿಗೆ ಭುವನತ್ರಯಸ್ವಾಮಿಯಪ್ಪಾದಿಭಟ್ಟಾರಕಂ ತಂದೆ. ಸಕಲ ಚಕ್ರವರ್ತಿಯಪ್ಪ ಭರತೇಶ್ವರಂ ಒಡವುಟ್ಟಿದಂ. ತಾನುಮಚಿಂತ್ಯಬಳಪರಾಕ್ರ[7]ಮಂ, ಅಂತಪ್ಪಾತನ ಬಲಗರ್ವಕ್ಕೆ ಕಾಯ್ದು ಭರತೇಶ್ವರನೆನಿತಾನುಂತೆಱದ ಯುದ್ಧಂಗಳಂ ಪೊಣರ್ಚಿಯೆಂತುಂ ಗೆಲಲಾರದೆ ಚಕ್ರ[8]ದಿನಿಟ್ಟೊಡಾ ಚಕ್ರಂ ಬಂದು ಬಾಹುಬಲಿಯಂ ಬಲಂಗೊಂಡು ಬಲದ [9]ಮುಯ್ವಿನ ಕೆಲದೊ[10]ಳಿರ್ದು "ಬೆಸಸು ಬೆಸ[11]ಸೆಂ"ದೊಡೆ ಅದಂ ಕೊಂಡು ಮುಳಿದಿಟ್ಟೀತನಂ ಕೊಂದೀ ರಾಜ್ಯಮಂ[12]ನಾಂ ಕೊಳ್ವೆನೇ ? ಚಿಃ ! ಪೊಲ್ಲದಿದೇವುದು' ಎಂದು ಚಕ್ರ[13]ಮಂ ಬಿಸುಟ್ಟು ಅಂತೆ ಪೋಗಿ ಸರ್ವಸಂಗಪರಿತ್ಯಾಗಂಗೆಯ್ದು ತಪಮಂ ಕೆಯ್ಕೊಂಡಿರ್ದು 'ಆತನ ನೆಲನಂ ಮೆಟ್ಟಿರ್ಪೆಸಿತಾಯ್ತು' ಎಂಬ ಮಾನಕಷಾಯಂ ಪುಟ್ಟಿದೊಡೆ ಕರ್ಮಕ್ಷಯಕಾರ್ಯಸಿದ್ಧಿ ತನಗಿನಿಸಾನುಂ[14]ಗೆಂಟಱಾದುದು. ಅಂತಪ್ಪ ಬಾಹುಬಲಿಯುಂ [15]ಇಂತಾದನೆಂದೊಡೆ ಪೇೞಿ ವಿಾಗಳ[16]ನೇೞಿದರಪ್ಪ ಮನುಷ್ಯ(ರನೇಗೆಯ್ಯ ದಿವ್ವ)ರಂ ಮಾನಗರ್ವಮೇಗೆಯ್ಯ(ಯ್ದು)ದೋ ?—

ಕಂ|| ಗುಣದೊಳ್ [17]ಸಿರಿಯೊಳ್ ಕೀರ್ತಿಯೊ |
ಳೆಣೆಯಿಲ್ಲೆಂ[18]ಬುದ್ಧತರ್ಕಳೇ(ಂ)ಮುನ್ನಿನವರ್ ||
ಗುಣಹೀನ[19]ರೂನರೀಗಳ |
[20]ನಣುಮಾತ್ರಕ್ಷಿತಿಪರುದ್ಧತಿಕ್ಕೆಯೆ ಚೋದ್ಯಂ || ೨೩ ||

ವ|| ಗುಣದ ಪೆರ್ಚಿಂ ಸರ್ವಜ್ಞನೆನಿಸಿದೊಡಂ, ಶ್ರೀಯಪೆರ್ಚಿನೊಳ್ ಸಕಳಚಕ್ರವರ್ತಿಯೆನಿಸಿದೊಡಂ, ಮುನ್ನಿನ ಮಹಾಪುರುಷರಾರುಮುದ್ಧತರಾದರಿಲ್ಲ. ಈಗಳಿನವರ ಗುಣಮುಂ ಮುನ್ನಿ[21]ನ ಕ್ಷೂಣರ ಗುಣದನಿತುಮಿಲ್ಲ. ಸಿರಿಯುಪ್ಪೊಡವರ ಪಱಿ[3]ಯ ಪೊಲೆಯರ ಷಡ್ಭಾಗದನಿತಪ್ಪೊಡ ವಿಾಗಳಿನರಸುಗಳಿಗಿಲ್ಲ. ಮಾನಕಷಾಯಮೆಂಬುದು [22]ತಮ್ಮಿಂದಗ್ಗಳಮಿಲ್ಲೆಂದು ಬೆಬ್ಬರ ಬೆಸೆದಿರ್ಪ(ರ್ಪ)ರಿ[23]ದೇನಾಶ್ಚರ್ಯಮೋ—

(1) ಸುವುದೆನ್ನ (ಕ) (2) ಬಂದ (ಕ,ಚ,ಜ) (3) ರ್ಪನಿತಾಯ್ತು (ಕ, ಚ, ಜ) (4) ಮತ್ತಿನೀಮಸಕಸಮಾನ (ಕ,ಚ,ಜ) (5) ನರಂ ನೆನೆದು (ಕ) ನರನೇನದು (ಚ,ಜ) ನರನೇಂನೆರದು (ಖ,ಗ) (6) ಲಿಗಂತ್ರಿಭುವನ (ಕ,ಜ) (7) ಕ್ರಮನಪ್ಪನಾತನ (ಕ) (8) ದೊಳಿಟ್ಟೊ (ಕ,ಚ) (9) ಭುಜದಕೆಲ (ಕ,ಖ) (10) ಳಿರ್ದು ನೆಲಸಿ (ಕ) ಳ್ನೆಲಸಿ (ಚ) (11) ಸಸಿಮೆಂದೊಡೆ (ಚ) ಮೆನೆ ಕಂಡಿವಂ (ಕ) ಸಸೆಂದುನಿಂದೊಡದಂ ಕೊಂಡು (ಖ,ಗ) (12) ಜ್ಯಮನಾಳ್ವೆನೆ ಪೊಲ್ಲದೇವುದೆಂದಾ (ಕ,ಚ) (13) ಮನೊಲ್ಲದೆ ಬಿಸು (ಕ) (14) ತಡೆದಿರ್ದೊಡಂತಪ್ಪ (ಕ,ಚ,ಜ) ತಡೆದಿರೆಯಂತ (ಖ,ಗ) (15) ಚಿಂತಾಕ್ರಾಂತನಾಗಿರ್ದನೆಂದೊಡೆ (ಕ,ಖ) (16) ನೇಳಿದರನೇಗೆಯ್ಯುದಿವರಮಾನ ಗರ್ವಮಾವುದೋ (ಕ,ಚ) (17) ಶ್ರೀಯೊಳ್ (ಚ,ಜ) (18) ಬುದು ತವರ್ಕೆಣೆ (ಖ,ಗ) (19) ರು ಮಾನವರೀ (ಖ,ಗ) ಹೀನಮಾನರೀ (ಚ) (20) ನಣುಗುಣದೀಕ್ಷಿಪತಿರುದ್ಧ (ಕ) (21) ನವರ ಕ್ಷುಲ್ಲಕಗುಣ (ಕ) (22) ತಮ್ಮಿಂದಗ್ಗಳಮುಪ್ಪುದು (ಖ,ಗ) (23) ದಿರ್ಪಿರವದೇ (ಚ)

ಚಂ|| [1]ನರವರರುರ್ವಿಯೊಳ್ ಧರೆ ಜಗತ್ತ್ರಯದೊಳ್ ಜಗಮಂ ತ್ರಿವಾಯುಗಳ್ |
ಧರಿಯಿಸಿ ನಿಂದುವಂತವು ಮಹಾಂಬರದೊಳ್ ನೆಲಸಿರ್ದುವಾ ಮಹಾಂ ||
ಬರಮರುಹಂತದೇವರ ಸುಬೋಧದ ಕೋಣೆಯೊಳಿ[2]ರ್ದುದಂತುಮಾ |
ಪರಮನೊಳುದ್ಧತಿಕ್ಕೆ ಪುಗದಲ್ಪರ ಗರ್ವಮದೇತಱಿಂ ಗಳಾ || ೨೪ ||

ವ|| ಮುನ್ನಿನ ಸಾರ್ವಭೌಮರ್ಪ್ಪ ಸಕಳಚಕ್ರವರ್ತಿಗಳಳವು ಭರತಕ್ಷೇ[3]ತ್ರದನಿತಱೊಳಿರ್ದುದಾ ಕ್ಷೇತ್ರಂಗಳೆರಡುವರೆ ದ್ವೀಪಂಗಳೊಳಗಾ ದ್ವೀಪಂಗ[4]ಳುಮಂ ಸಪ್ತಸಮುದ್ರಂಗಳುಮಂ, ಮೂಱುಂಲೋಕಮುಂ, ತ್ರಿವಾಯುಗಳುಮಾಕಾಶಮುಮರುಹಂತದೇವರ ಕೇವಲಜ್ಞಾನದೊಂದು ಕೋಣೆಯೊ[5]ಳಡಂಗಿದುವು. ಅಂತುಮವರುಮುದ್ಧತರಾದರಿಲ್ಲ. ಈಗಳಿನೇ[6]ಱದರಪ್ಪರೇಕುದ್ಧತರಪ್ಪರ್. ಆ ಮಾನಕಷಾಯಂ ಪೊಲ್ಲಪದಂ ಪುಟ್ಟಲೀಯದಿರಿಂ. ಇಂ ಮಾಯಕಷಾಯದ ಪೊಲ್ಲಮೆಯುಮೇಂ ಕಿಱಿದೇ ?

( ೩. ಮಾಯಕಷಾಯದ ಕಥೆ!— ಪುಷ್ಪದಂನ್ತಾ ಕಂತಿಯರ ಕಥೆ )

ಕಂ|| ಮಱಿಯೊಳ್ ಗುಣಮುಱದೊಡೆ[7] ಜನ |
ಮಱಯದುದೇ ರಾಹು ಚಂದ್ರನಂ [8]ಮೆಯ್ಯಿಲ್ಲಾ ||
ರಱ[9]ದಪ್ಪರೆಂದು ನುಂಗಿದೊ |
ಡಱದುದು ಜಗಮೆಲ್ಲ ಮುಕ್ಕೆವಂ ಪೊಲ್ಲದಱಿಂ || ೨೫ ||

ವ|| ಎನಗೆ [10]ಮೆಯ್ಯಿಲ್ಲಾರಱಪಪರ್ ? ಎಂದು ರಾಹು ಚಂದ್ರನಂ ಇರುಳ್ ನುಂಗಿದೊಡಾಗಳೆ [11]ಲೋಕಮೆಲ್ಲಮಱದತ್ತು. ತಾನುಂ ನಿಷ್ಕರುಣನುಂ ದುಷ್ಟನುಂ ನಿಕೃಷ್ಟನುಂ ಕಷ್ಟನುಮಾದನೆಂದೊಡೆ ಮನುಷ್ಯರಾ[12]ಮಾಯಮಿಲ್ಲಿಯೆ ಮಾಯಂ ಮಾಡುಗುಂ, ಮಱುಭವ[13]ದೊಳೇಗೆಯ್ಯದೋ !—

ಕಂ|| ಭೋಗಪುರಮೆಂಬ ಪುರದೊಳ್ |
ಸಾಗರದತ್ತಾಭಿಧಾನ[14]ವೈಶ್ಯಂ ಧರ್ಮೋ ||
ದ್ಯೋಗದಿ [15]ನತಿಶಯಿಸಿರ್ಪಂ |
ದಾ ಗೃಹದೇಹಾರದಲ್ಲಿ ಕಂತಿಯ[16]ರೊರ್ವರ್ || ೨೬ ||

---

(1) ನರರವರು (ಕ) (2) ರ್ದುವಂತು (ಕ, ಚ) (3) ತ್ರದೊಳಿರ್ದುದು (ಕ) (4) ಳು....ಳುಂ ದೇವಗತಿಗಳುಂ ಮೂಱುಂ ಲೋಕಂಗಳುಂ ತ್ರಿವಾಯುಗಳುಂ ಮಹಾಕಾಶಮುಮರ್ಹಂತದೇವರ ಕೇವಲ (ಕ, ಚ) (5) ಳಿರ್ದುವು (ಕ, ಚ) (6) ನೇಳಿಥರೇಕೆ(ಜ) (7) ಜಗ(ಚ, ಜ) (8) ಮೆಯಲ್ಲಾ(ಕ, ಜ) ಮೆಯಿಯಿಲ್ಲಾ (ಕ, ಖ) (9) ದಪ್ಪುದೆಂದು (ಕ) ಲ್ಲೇಕರಿದಪ್ಪುದೆಂದು (ಖ, ಗ) (10) ಮೆಯ್ಯಿಲ್ಲಂ ಕರಿದಪ್ಪುದು ಯಿದನಾರರಿಯದಪ್ಪರೆಂದು (ಕ) ಮೆಯಿಯಿಲ್ಲೆನ್ನನಾರ (ಚ, ಜ) (11) ಲೋಕಕ್ಕಪಕಾರಕನುಂ ದುಷ್ಟನುಂ ಕನಿಷ್ಠನುಮಾ (ಖ, ಗ) (12) ಮಾಯೆಯಿಲ್ಲಿ (ಚ) (13) ದೊಳಮೇಗೆಯ್ಯುದು (ಜ, ಚ) (14) ವೈಶ್ಯನ (ಕ, ಚ) (15) ನೆಸದತಿಶಯತರಮಾಗುವ (ಕ, ಖ) ನೆಗಟ್ಟತಿಶಯತರ (ಚ, ಜ) (16) ರಿರ್ದರ್ (ಕ) ರಿಬ್ಬ(ಪ್ಪ)ರ್ರ್ (ಚ)

ವ|| ಪುಷ್ಪ[1]ದಂತೆಯೆಂಬ ಕಂತಿಯರಿರ್ದು ದೇವರನರ್ಚಿಸಲೆಂದು [2]ಬೇಡಿ ತಂದಕ್ಕಿಯುಂ ಮಱೆ[3]ಯೊ[3]ಳಡಿಸಿಯುಂಡರ್ಚಿಸಿದ ಪಣ್ಪಲಂಗಳಂ [4]ಬಯ್ತಿಟ್ಟು ಮಱೆ[3]ಯೊಳ್ ಮೆದ್ದು ಗಂಧೋದಕಮಂ ಮಾಡಲೆಂದು ತಂದ ಸಿರಿಖಂಡವು(ದಿ)ಂ ತನ್ನ ಮೆಯ್ಯುಂ ಪೂಸಿಕೊಂಡುನುಱಿಯ[5]ಲೀಯುದಿರುಳುಂಡುಂ ತಿಂದುಂ ಮಾಸೋಪವಾಸಮಂ ನೋಂತೆನೆಂದಿರ್ಕುಂ. ಇಂತಿರೆಯಾರಾನುಂ ಕಂಡವರ್ ಇಂತೆಂಬರ್. ಇವ[6]ರೆನಿತು ನೋಂತೊಡಂ ಬಡವಾಗರೆಂದೊಡಿದು ತಪಸ್ಸಾಮರ್ಥ್ಯಮೆಂ[7]ಬರ್. ಕಮ್ಮನೇಂ ನಾರ್ಪರ್ ಎಂದೊಡೆ [8]ತಪದ ಫಲಾತಿಶಯಮೆಂಬರ್. ಇಂತು [9]ಮಾಯೆಯಿಂ ತಪಂಗೆಯ್ವೆನೆಂದಿರ್ದಾ ಕಂತಿಯರ್ ಮುಡಿಪಿ ಸಾಗರ[10]ದತ್ತನ ಮನೆಯೊಳ್ ಪೂತಿಗಂಧಿ[11]ಯುಂ, ಕಿಸುಗುಳಮುಂ ನಾರ್ಪ ಕೂಂಟಣಿ[12]ದೊಟ್ಟಾದಳ್. ಎಂಬೀ ಕಥೆಯನವ[13]ಧಾರಿಸಿ ಮಾಯೆಯನುೞಿಯಿಂ—

ಉ|| ನೆಲಸಿರ್ದುಕ್ಕೆವ[14]ಮೆಂಬ [ನಾರ್ಪ] ಕುೞಿಯೊಳ್ ಮಿಥ್ಯಾತ್ವಮೆಂಬೊಂದು ಕ |
ಲ್ತಲೆ ತೀವಿರ್ಪುದಱೊಳ್ ವಿಮೋಹ[15]ಮೆನಿಪತ್ಯುಗ್ರಾಹಿ ಕೇಳ್ಮರ್ಚಿ ನುಂ ||
ಗಲೆ ಪಾರ್ದಿರ್ಪುದಱೊಳ್ ಭಯಂಕರ[16]ದೊಳೇಂ ಪೊಕ್ಕಿರ್ಪುದ[17]ಕ್ಕಂಜೆ ಯೇಂ |
ಕಲಿಯೋ ಪೇೞ್ ನರಕಂಬುಗಲ್ಕೆ ತಡೆಯ್ಗೆ ಮಾಯಾವಿಯಪ್ಪಾತ್ಮನೇ || ೨೭ ||

ವ|| ಒಂದೆ ಭವದ ಸಾವಿಗಂಜದರಂ ಕಲಿಗಳೆಂಬರಪ್ಪೊಡೆ ಅನಂತಭವದ ಸಾವಿಂಗಂ, ಕೇಡಿಂಗಮಂಜದ ಮಾಯಾವಿ[18]ಯಂ ಅಗ್ಗಳಂ ಕಲಿಯೆನ್ನದೆ ಪೆಱತೇನೆಂಬುದೋ ! ಲೋಭ ಕಷಾಯದಳುರ್ಕೆ ಸಾಮಾನ್ಯಮೇ ? ಅದನಿನಿಸಾನುಂ ಕೇಳಾ !

( ೪. ಲೋಭಕಷಾಯದ ಕಥೆ — ಪಟಹಸ್ತನ ಕಥೆ )

ಕಂ|| ಬಗೆಯೆಂಬುದೊಂದು ಕೊಳ[19]ನೊಳ |
ಗಗಲದೆ ಕಡುಲೋಭಮೆಂಬ ನೆಗಳುರೆ ಗುಣದೊಳ್ ||
[20]ನೆಗಱ[3] ನೆಗಱ[3]ೊಡ ಮೆಂತುಂ |
ನೆಗಳುರೆ ಗುಣಗಣಮನದುವೆ ನುಂಗು[21]ತ್ತಿರದೇ || ೨೮ ||

ವ|| ನೆಗಳುಳ್ಳಕೊಳನಂ [22]ಪೊಕ್ಕನುಂ ಲೋಭಮುಳ್ಳ [23]ಜೀವನಂತರಂಗದೊಳಿರ್ದ ಗುಣಮುಂ ಬರ್ದುಂಕುಗುಮೆ ?—

---

(1) ದಂತೆಯರೆಂಬ (ಕ,ಗ) (2) ಬೇಡಿಕೊಂಡು ತಂದ (ಚ,ಜ) (3) ಳಡಸಿರ್ದಿರುಳುಂಡ (ಕ,ಜ) (4) ಳಂ ಮರೆಯೊಳ್ತಂದು ತಂದ ಶ್ರೀಗಂಧ (5) ಲೀಯದಂತುಂಡುಂತಿಂದುಂ ಪೂಸಿಕೊಂಡುಂ ನೋಂತೆನೆಂದಿರುಮಿರೆ (ಕ) (6) ರಿನಿತು (ಕ,ಜ) (7) ಬರ್ಕಂ ಮೆನೇನಾರ್ಪರೆಂದೊಡೆ (ಕ) (8) ತಪಂ ಫಲಮಾದುದೆಂಬರ್ (ಕ) (9) ಮಾಯದಾ ತಪಂಗೆಯ್ದು ತಪಂಗೆಯ್ವೆನೆಂದಿರ್ದಾ ಕಂತಿ (ಕ) (10) ದತ್ತನೆಂಬ ಸೆಟ್ಟಿಯುಮನೆ (ಕ,ಗ) (11) ಯೆಂಬಕಿಸು (ಕ) (12) ದೊಳ್ತಾಗಿಪುಟ್ಟಿದ (ಕ) (13) ಧಾರಿಸುವುದು ಮಾಯಮನುಳಿವುದು (ಕ) (14) ಮೆಂಬುದೊಂದು (ಕ,ಖ) (15) ವಿಪುಳಾತ್ಯುಗ್ರಾಹಿ (ಕ) (16) ದೊಳ್ಪೊಕ್ಕಿರ್ಪು (ಕ,ಚ) (17) ಕಂಜಿನೀಂ ಕಲಿಯೇ (ಕ,ಖ) (18) ಯಾಂಕಲಿ (ಕ) (19) ದೊಳ (ಕ) (20) ನೆಗಱ್ದೊಡಮೆಂತುಲೋಭದ (ಕ,ಚ) ನೆಗಳಿಕೆ ನೆಗಳದೊಡೆಂತುಂ (ಕ,ಜ) (21) ತ್ತಿರ್ಕುಂ(ಕ) (22) ಪೊಕ್ಕೊಡಂ(ಕ) (23) ಜೀವನೊಳಿರ್ದ(ಕ,ಚ)

ಉ|| ಬೇಡರಿನೋಡು[1] ತಿರ್ಪ ಚಮ[2]ರಂ ನಿಡುವಾಲದೊಳೊಂದು ರೋಮ[3]ಮಾ |
ಕಾಡೊ[4]ಳಗಾದ ಮುಳ್ ತೊಡರೆ [5]ಸಿಲ್ಕಿದುದಂ ಪಱಿದೇಕೆ ಪೋಪೆ[6]ನೆಂ ||
ದೋಡದೆ ಸತ್ತುದಂತೆ ಕಿಱದರ್ಕತಿ[7]ಲೋಭಿಗಳಾದೊಡೆಲ್ಲ [8]ಮ |
ಟ್ಟ್ಯಾಡಿ ತೊಡಂಕುವರ್ ಬಗೆಯೆ ಲೋಭದ ಪೊಲ್ಲಮೆ ಕೊಂದು ಕೂಗದೇ || ೨೯ ||

ವ|| ಬೇಡರ್ [9]ಕೊಲಲೆಂದೆಟ್ಟಿಟ್ಟುವುದಂ ಕಂಡು ತನ್ನಂ ಕಾವರಿಲ್ಲದುದುಮಂ ತನ್ನೋಡುವ ಭಯಮುಮಂ ಬಗೆಯದೆ ತನ್ನ ಬಾಲದೊಳೊಂದು ರೋಮದ ಕೇಡಿಂ[10]ಗಾಱದಿರ್ದು ಚಮರೀಮೃಗಂ ಸಾವಂತೆ, [11]ಕೀಲ್ಗೆ[12]ದೇಗುಲಮನೞವಂತೆ, [13]ನೂಲ್ಗೆ ಮಣಿಯ [14]ನೊಡೆವಂ[15]ತರ್ಥಕ್ಕಳಿಪಿ ಗತಿಯನೞವರೆಲ್ಲಂ ಲೋಭಕಷಾ[16]ಯಕ್ಕೊಳಗಕ್ಕುಂ ಪೆಱತಕ್ಕುಗುಮೆ? ಅದೆಂತೆನೆ—

( ಪಟಹಸ್ತನ ಕತೆ )

ಕಂ|| ಧರಣಿಜಯಮೆಂಬ ಪುರದೊಳ್ |
ಪರದಂ ಕಡು[17]ಲೋಭಿಯೊಂದೆ [18]ಪುಟ್ಟೆಗೆಯುಟ್ಟೆ ||
ರ್ದಿರುಳುಂ ಪಗಲುಂ ತನ್ನಯ |
ಕರ[19]ಮನೆ ಪೊದೆದಿರ್ಪನೈಕಿಲೊಳ್ [20]ಕಡುವಿಸಿಲೊಳ್ || ೩೦ ||

ವ|| ಆತಂಗದಱಿಂದೆ ಪಟಹಸ್ತನೆಂಬ ಪೆಸರಾಗೆ ಪಲಕಾಲಮೊಣಕೂೞ[21]ನುಂಡುಂಡಾಗಳೊಂದೆಲೆಯನಪ್ಪೊಡಂ ಮೆಲ್ಲದೆ ಆರ್ಗಂ ಮೇಗೆಯ್ಯುಂ ಬಿದಿರದೆ ಅಂ ಪಡೆದರ್ಥಮೆಲ್ಲ[22]ಮಂ ಪೊನ್ನೆಟ್ಟಂಮಾಡಿ ಬಯ್ತಿಡು[23]ವೆ ನಲ್ಲದಾಗಳ್ ಬಿಯಕ್ಕೆ ಕಾರಣಮಾಗಿರ್ಕುಂ. ಎಟ್ಟಿನ ರೂಪನಱಿಯಲಾಱದಿರ್ಕುಮೆಂದು ಪಿರಿದಪ್ಪ ಪೊನ್ನೆಟ್ಟಂ ಮಾಡಿ ನೆಲಮಾಳಿಗೆಯೊಳ್ ಬಯ್ತಿಟ್ಟು ಮತ್ತಮೊಂದನೆಟ್ಟಂ ಮಾಡುವ [24]ಮೋಹದಿಂಮೊರ್ವನೆ ಪೋಗಿ ಬಂದ ಪಿರಿಯತೊಱೆಯೊಳ್ ತೆಪ್ಪಮಂ [25]ಕಟ್ಟಿಯೇಱಿರ್ದು ಪಗಲುಮಿರುಳುಂ ನೀರೊಳ್ ಬರ್ಪ ಪುಳ್ಳಿಗಳಂ ಪಿಡಿದು ಪೊಱಗೊಟ್ಟಿ ಬಯ್ತುಮಾಱಿ ಪೊನ್ನಂ ನೆಱಪಲೆಂದು [26]ಸೇದೆಗಿಡುತಿರ್ಪಿನಮೊಂದು ದೆವಸಂ—

---

(1) ತಿರ್ದ (ಚ,ಜ) (2) ರೀಜದ ಬಾಲದೊ (ಕ,ಚ) (3) ಮಮುಂ (ಕ,ಖ) (4) ಳಗೊಂದು (ಕ,ಜ) (5) ಸಿರ್ಕಿದುದಂ (ಕ,ಜ) (6) ನೆರಿ (ಕ) (7) ಲೋಭಮದಾದೊಡೆ (ಕ,ಜ,ಚ) (8) ಮರ್ಕಾಡಿ (ಕ,ಜ) ಮುಟ್ಟ್ಯಾಡಿದೊಡಂದವರ್ (ಖ,ಗ) (9) ಕೊಲಲ್ ತಗುಳ್ದುದುಮಂ ತನ್ನಂ ಕಾವರಿಲ್ಲ (ಕ,ಚ) (10) ಉಾರದೆ (ಕ,ಚ) (11) ಕೀಳಿಂಗೆ (ಕ) ಕೀಲಿಂಗೆ (ಚ,ಜ) (12) ದೇವಾಲ್ಯ (ಕ,ಖ) (13) ನೂಲಿಂಗೆ (ಕ,ಖ) (14) ನಳಿವಂತೆ (ಚ,ಜ) (15) ತರ್ಥಕ್ಕೆ ಗತಿಯ (ಕ, ಖ) (16) ಯಕಕ್ಕುಮ (ಜ,ಚ) (17) ಲೋಭಮೊಂದೆ (18) ಪುಟ್ಟೆಗೆಯಂತಿರ್ದ (ಕ,ಖ) (ಉ)ಯುಟ್ಟೆಗೆಯುಟ್ಟಿರ್ದ(ಚ,ಜ) (19) ರಮಂ(ಚ,ಜ) (20) ಬಿಸಿಲೆಡೆಯೊಳ್(ಕ,ಚ) (21) ನೆಯುಂಡೊಂದೆಲೆಯಂ ತಿನ್ನದಾರ್ಗಮಿದಿರ್ಗಯ್ಯ (ಕ) (22) ಮೊಂದು ಪಿರಿದಪ್ಪ ಪೊನ್ನೆಟ್ಟಂಮಾಡಿ ನೆಲವಾಳಿಗೆಯೊಳ್ (ಮನೆಯೊಳ್) ಬಯ್ತಿಟ್ಟು ಮತ್ತ (ಖ,ಗ) (23) ವೆನೆತ್ತಿನ ರೂಪಾಗಿರ್ದಂ ದಱಿಯಲಾಱದಿರ್ಪುದಲ್ಲದಂದು ಬಿಯಕ್ಕೆ (ಖ, ಗ) ವಮೋಹದಿಂ ಬೈತಿಡು (ಚ, ಜ) (24) ಬಗೆದುಂ (ಕ) (25) ಟ್ಟಿರ್ದಿರುಳುಂಪಗಲುಂಪುಳ್ಳಿ(ಕ) (26) ಸೇದೆವಡು (ಕ)

ಕಂ|| ಇರುಳೊಟ್ಟಿಕೊಂಡು ಪಣ್ಣಂ |
ಸಿರದೊಳ್ [1]ಪೊತ್ತಿಸಿದ ಸೊಡರಿನಾ ತೊಱೆಯೊಳ್ ಮಾ ||
ಣ್ದಿರದೇಱಿ ತೆಪ್ಪಮಂ [2]ಬೆ |
ಚ್ಚರದಿಂದಂ ಪುಳ್ಳಿ[3]ವಿಡಿಯುತಿರ್ಪಿನಮಾಗಳ್ || ೩೧ ||

ವ|| ಆ ಪೊಲಲನಾ[4]ಳ್ವರಸಂ ಮಾಡದೊಳಗಣಿಂ ಪೊಱಮಟ್ಟು ಮೆಯ್ಯ ಬೆಮರನಾಱಿಸು[5]ತಿರ್ದು ಸುತ್ತುಂ ನೋಡುತ್ತಾಗಳ್ ಇಂತು ತಡಿಗೆ(ಗಂ)ನಡುವಣ್ಣೆ(ಣ್ಣಮೆ)ಡೆಯಾಡುವ ತೊಱೆಯೊಳಗಣಸೊಡರಂ ಕಂಡು "ಇದೇನಾರಯ್ಯಿಂ"[6] ಎಂದಟ್ಟಿದೊಡ[7]ವರ್ ಬೇಗಂ ಬಂದು ಕಂಡು ಪೋಗಿ 'ಒರ್ವಂ ಬಡವಂ ತೊಱೆಯೊಳ್ ಬರ್ಪ ಪುಳ್ಳಿಗಳಂ ಪಿಡಿದು ತಂದು ತಡಿಯೊಳಿಕ್ಕಿ ಮಾಱುತ್ತಿರ್ಪ'ನೆಂದೊಡರಸಂ "ಇಂತಪ್ಪ ಬಡವನೆನ್ನ ಪೊಲಲೊಳೊಳನೆ? ಅಂತಾದೊಡಾತನಂ ಬಯ್ಗಿರುಳೊಳೊಡಗೊಂಡು ಬನ್ನಿ" ಮೆಂದೊಡೆ "ಅಂತೆಗೆಯ್ವೆ" ಮೆಂದೊಡಗೊಂಡುಯ್ದರಸಂಗೆ ತೋಱಿದೊಡೆ "ಇಂತೇಕಾಪತ್ತುವಟ್ಟೆ"ಯೆನೆ "ಎನಗೊಂದೆತ್ತುಂಟು, ಅದ[8]ರ್ಕೆಣೆಯಂ ಮಾಡಿಸುವೆನೆಂದು ಆಪತ್ತುವಟ್ಟಪೆಂ" ಎಂದೊಡರಸಂ ಕರುಣಿಸಿ. "[9]ಎಮ್ಮೆತ್ತಿನ ಪಿಂಡಿನೊಳಗೆ ನಿನಗೆ ಮೆಚ್ಚಿದ ಎತ್ತನಾಯ್ದುಕೊಳ್" ಎಂದೊಡೆ "ಎನ್ನೆತ್ತಿನಂತಪ್ಪೆತ್ತು ನಿತ್ತೊಡೆ ಕೊಳ್ವೆಂ" ಎಂಬುದುಂ "ನಿನ್ನೆತ್ತನೆಮ್ಮವರ್ಗೆ ತೋಱಿಸೆಂದೊಡಂತೆ[10]ಗೆಯ್ವೆಂ" ಎಂಬುದುಂ, ನೆಲ[11]ಮನೆಯೊಳಿರ್ದ ಪೊನ್ನೆತ್ತಂ ತೋಱಿದೊಡವರ್ ಬೆಕ್ಕ[12]ಸಮಾಗಿರ್ದಿಂತೆಂದರ್—

ಕಂ|| ಇನಿತು ಕಸವರ(ಮಿ)ಮುದೆಮ್ಮರ |
[13]ಮನೆಯೊಳಮಣಮಿಲ್ಲ ಪಡೆಯ[14]ಲಾಗೀ ಭವದೊಳ್ ||
ನಿನಗೆಲ್ಲಿ[15]ತಪ್ಪುದೆಂಬುದ |
ನೆನುತುಂ ಮಗು[16]ಳ್ದಂತು ಬಂದು ಭೂಪತಿಗೆಂದರ್ || ೩೨ ||

ವ|| "ದೇವಾ ಬಿನ್ನಪಂ, ಈತಂಗೆ ನಮ್ಮೆತ್ತು[17]ಗಳಿಂ ಪಿರಿಯುದೊಂದು ಪೊನ್ನೆತ್ತುಂಟು; ಅದರನಿತುಪೊನ್ನುಮಂ[18]ನಿಮ್ಮಜ್ಜಪಜ್ಜರುಂ ಪಡೆಯಲಾಱ"ರೆಂದೊಡೆ[19] ಅಂತೆ ಇವಂ ಲೋಭಾಭಿಭೂತಂ, ವಿಮೋಹಿತಂ, ಇವನನರ್ಥಮೆಲ್ಲಮಂ ಕಪರ್ತೆಗೊಳ್ವಮೆಂದೆಣಿಸಿ(ಳಸಿ)ಮಾಯೆತ್ತುಂ ತರಿಸಿಕೊಂಡೊಡವನೆರ್ದೆಯೊಡೆದು ಸತ್ತು ತನ್ನ ಮನೆಯೊಳೆ ಪಾವಾಗಿ ಪುಟ್ಟಿ ತನ್ನ ಮಗನನೆ ಕೊಂದು

(1) ಪೊತ್ತಿಕ್ಕಿಸೊಡರ (ಚ,ಜ) (2) ತಾಂ ಭರದಿಂ (ಕ,ಜ) (3) ವಿಡಿದು ತೆಗೆವನನಾಗಳ್ (ಕ,ಚ) ತಿರ್ಪನನಾಗಳ್ (ಖ,ಗ) (4) ಳ್ವರಸುಮಾಡದ ಮೇಗೆಮೆಯ್ಯ (ಕ,ಖ) (5) ತಿರ್ದನತ್ತಿತ್ತಂ ನೋಳ್ಪಂ ತೊರೆಯೊಳಗಣ (ಕ,ಚ) (6) ಎಂದು ಪರಿಚಾರಕನನಟ್ಟು (ಘ) (7) ವಂಬೇಗಂ ಪೋಗಿನೋಡಿ ಬಂದೊರ್ವಂ (ಕ,ಜ) ಬಡವರೆನ್ನಪೊಳಲೊಳಗಾರೆಂದು ಮೊಡಗೊಂಡು ಪುಳ್ಳಿವಿಡಿದಪ್ಪನೆಂದೊಡಂತಪ್ಪ (8) ರ್ಕೆತೋಡಂ (ಘ) ತೊಡವಿಂ(ಖ) (9) ಎಮ್ಮಕೊಟ್ಟಗೆಯೆತ್ತುನೊಳಗೊಂದ (ಚ) ಎಮ್ಮೆತ್ತುಗಳೊಳಗೆ (ಕ) (10) ಗೆಯ್ವೆನೆಂದಾತಂ (ಅವರನೊಡಗೊಂಡುಪೋಗಿ ತನ್ನ ನೆಲವಾಳಿಗೆ) (ಘ) (11) ಮನೆಯೊಳಿ (ಚ) (12) ಸಂಬಟ್ಟಿಂತೆಂದರ್ (ಕ) ಸಮುತ್ತಿತೆಂದರ್ (ಘ) (13) ಸನಮನೆಯೊಳಗಿಲ್ಲ (ಕ,ಚ) (14) ಲಾರೇಧನಮಂ(ಘ) (15) ತಪ್ಪುಮೆಂಬು (ಕ,ಖ,ಗ) (16) ಳ್ದಂತೆ ವಂದು (ಚ,ಜ) (17) ಗಳಂತಪ್ಪೆತ್ತೆಲ್ಲ ಪಿರಿದೊಂದು (ಕ,ಚ) (18) ನಿಮ್ಮೊಳ್ ಮುತ್ತರು (ಖ,ಗ,ಘ) (19) ದರಸಂಬಗೆದುನೋಡಿಯುಂ (ಘ) ಡೊದರಸನೆಂದನೀತನಂತಪ್ಪತಿಮೋಹಿತನೀತಂ (ನಿವಂ) ಬರ್ದೇವನಿರ್ದೇವನಿವನ ಪಡೆದರ್ಥಮುನುಂ ತರಿಸಿಕೊಳ್ಳಿಮುಂದೆತ್ತುಂತರಿಸಿ ಕೊಂಡೊಡವಂ ಮಹಾಮೋಹದಿನೆರ್ದೆಯೊಡೆದು (ಕ,ಚ)

ನರಕಂ ಬೊಕ್ಕನೆಂಬ [1]ಕಥೆಯಂ ನೀವಾಲಿಸಿ ಕೇಳ್ದು ಕಡುಲೋಭಮಂ [2]ಬಿಸುಡಿಂ. ಇಂತಪ್ಪ ಶುಭಪರಿಣಾಮವಶದಿಂ ಜೀವಂಗಳ್ [3]ಪುಗುವ ನರ[4]ಕದೊಳದಱಂದಮಂ ಕೇಳಿಂ—

ರಗಳೆ— ಇಱಿ ಇಱಿ [5]ಮೃಗಮಂ ತವೆ ಕೊಂದವನಂ |
[6]ತಱಿತಱಿಯವಱಡಗಂ ತಿಂಬವನಂ ||೧||
[7]ಪಸಿ ನಾಲಗೆಯಿ(ಯ)ಂ ಪುಸಿನುಡಿದವನಂ |
ದಸಿಯಿಂದಿಱಿಯಿಱಿ ಮಿಗೆ ಲಾವುಕನಂ ||೨||
ಕಡಿಕಡಿ ಪರ[8]ಧನಮಂ ಕಳ್ದವನಂ |
ಸುಡುಸುಡು ಪೆಱರೊಡಮೆಯ[9]ನೀೞ್ದವನಂ ||೩||
ಕೊಲ್‌ಕೊಲ್ [10]ಪರವಧುಗಳಿಪಿದನಂ |
ಮೆಲ್‌ಮೆಲ್ ಪರವಧುವಂ ಕಿಡಿಸಿದನಂ ||೪||
[11]ಬಡಿಬಡಿ ಧನದೊಳ್ ತಣಿವಿಲ್ಲದನಂ |
ಪಿಡಿಪಿಡಿ ಕಷ್ಟವಗುಣವಿಂಗೆಱಗುವನಂ ||೫||
[12]ಎಱಿ ಕಳ್ಗುಡಿಹಿಗೆ ಲೋಹದ್ರವಮಂ |
[13]ಅಱಿಯಿಱಿವಂಗೆಯ್ದಿಸುಪದ್ರವಮಂ ||೬||
ಅರಿ ಕರಕಸದಿಂದಾ ಪಾತಕನಂ |
ಅರೆ ಸಣ್ಣಗೆಯೊಳ್ ಖುಷಿ ಘಾತುಕನಂ ||೭||
ಕಣ್ಣಂ ಕಳೆ ಸೂಣ್ದೆರ[14]ದತ್ತ(ಟ್ಟ)ವನಂ |
ಪುಣ್ಣೊಳ್ ಗಿಡಿ ಕಾ(ಖಾ)ರವ[15]ನುಟ್ಟಿವನಂ ||೮||
ಒತ್ತೀತನ ಗಂಟಲನೊಡೆವಿನೆಗಂ |
ಕುತ್ತಾತನನಲ್ಲಿಯೆ ಕೆಡೆವಿನೆಗಂ ||೯||
ಪೋೞ್ದಿಕ್ಕವನಂ [16]ಪಲವುಂ ದೆಸೆಯೊಳ್ |
ಸೀೞ್ದಿಕ್ಕಿವನಂ ನಾಲ್ಕುಂ ದೆಸೆಯೊಳ್ ||೧೦||
ಸೆರಗಿಲ್ಲದೆ ಹಿಮಪೊಳಗಿಕ್ಕವನಂ |
ಉರಿಯೊಳ್ [17]ಪಿಡಿದಿಕ್ಕಿಂ ಬಱಿಕವನಂ ||೧೧||
ಕಿಱಿಗಿಱಿಯವೆ ಖಂಡಂಮಾಡವನಂ |
ಕೊಱೆಕೊಱೆದೀಡಾ[18]ಡಿನ್ನಿರದಿವನಂ ||೧೨|| – ||೩೩||

---

(1) ಕತೆಯಂ ಕೇಳ್ದಲೆಜೀವಂಗಳಿರಾ (ಕ, ಚ) (2) ಬಿಸುಟ್ಟುದಿಂ (ಕ,ಚ) (3) ಪುಗುಗುಂ (ಗ,ಘ) (4) ಕಂಗಳೊಳಪ್ಪಂದಮಂ (ಖ, ಗ) ಕಂಗಳೊಂದಂದಮಂ (ಘ) (5) ಗಡ ಮೃಗಮಂಕೊಂದ (ಚ) (6) ತಱಿತಱಿ ಕೈರಂದಿಱಿಯದಱಿಂದವನಂ (ಘ) (7) ಕಿಱಿಕಿಱಿನಾಲಗೆಯಂ ಪುಸಿದವನಂ। ಎಱಿಎಱಿ ತಕ್ಕರ್ ಕಿಡೆ ಸೂಚಿಪನಂ (ಘ) (8) ಧನವಿಂಗಳಿ (ಖ) ಪಿದನಂ (ಛ) (9) ನಾಳ್ದವನಂ (ಖ,ಗ) ಕೊಳ್ವವನಂ (ಛ) (10) ಮೆಲ್‌ಮೆಲ್‌ಕುಲಹೀನರೆ (ಛ) ಧನವಿಂಗಳಿಪಿದ (ಚ,ಜ) (11) ಬಡತನದೊಳ್‌ತಣಿಯದೆಮರುಗುವನಂ– ಅಡಿ (12) ಎಱಿಎಱಿ ಕುಡಿಹಿಗೆ (ಕ,ಚ) (13) ಮಱಿಯಿಱಿವಂಗೆ (ಛ) (14) ದಂತವನಂ (ಕ) (15) ನಂತವನಂ (ಛ) ನಿಂತಿವನಂ (ಚ) (16) ನಾಲ್ಕುಂದೆಸೆ (ಕ,ಚ) (17) ಬಡಿದಿ (ಕ,ಚ) (18) ಡಿಂತಿವನಂ (ಕ,ಖ)

ಕಂ|| ಎಂದಿಂತು ನಾರಕರ್ ಬಿಡ |
ದಂದೊರ್ವರನುಗ್ರಕೋಪದಿಂ ದಂಡಿಸುತಿ ||
ರ್ಪಂದಮನೆ ಬಗೆದು ಬೆರ್ಚುವು |
ದೆಂದಱಿಪಿಯು [1]ಮೇಕೆ ಪೊಲ್ಲದಂ ಚಿಂತಿಸುವಿರ್ || ೩೪ ||

ವ|| ಬನ್ನದಲಿಲಂ ಮಾಲ್ಪುಪೆಂಡಿತಿಯುಮಂ, ದುರ್ಗತಿಯಂ ಮಾಲ್ಪ ಪೊಲ್ಲಮೆಯುಮಂ ಗೆಂಟುಮಾಲ್ಪವನೆ ಚದುರಂ—

ಮ|| [2]ಪೆಱದೇಂ ದುಷ್ಪರಿಣಾಮದಿಂದೆ ದುರಿತಂ ಸಾರ್ತರ್ಕುಮಾ ಕ[3]ರ್ಮಮೇ |
ತೆಱದಿಂದಂ ಕಡುಪೊಲ್ಲದಪ್ಪ [4]ಗತಿಯೊಳ್ ತಂದಿಕ್ಕೆ ದುಃಖಂಗಳ ||
ಳ್ಪಿಱಯುತ್ತುಂ ಬರೆ ಬೆಂದು ನೊಂದು [5]ಮಱುಗುತ್ತಿರ್ಪಂತುಟೇ ಕಜ್ಜ[6]ಮೇ |
ತೆಱದಿಂ ಪೊಲ್ಲಮೆಯತ್ತ ಚಿಂತಿಸದಿರಿಂ ಕೆಯ್ಕೊಳ್ಳಿಮೊಳ್ಪಿಲ್ಲಮಂ || ೩೫ ||*

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

**ಬಂಧುವರ್ಮ ನಿರ್ಮಿತಮಪ್ಪ**

## ಜೀವಸಂಬೋಧನಾ ಗ್ರಂಥಾವತಾರದೊಳ್

ಆಸ್ರವಾನುಪ್ರೇಕ್ಷಾ ನಿರೂಪಣಂ

ದೀಪಾಯನ ಬಾಹುಬಲಿ ಪುಷ್ಪದನ್ತಾರ್ಜಿಕಾ ಪಟಹಸ್ತ ಕಥಾಚತುಷ್ಟಯವರ್ಣನಂ

[7]ಅ ಷ್ಟ ಮಾ ಧಿ ಕಾ ರ ಂ.



* ಈ ಸಂಸ್ಕೃತ ಶ್ಲೋಕವು (ಕ,ಚ) ಪ್ರತಿಗಳಲ್ಲಿ ಮಾತ್ರ ಇದೆ

[1]ಅಭ್ಯಂತರಂ ಬಾಹ್ಯಮನೇಕಧಾ[2]ಯಃ – ಪರಿಗ್ರಹಂ ಸರ್ವಮಪಾಚಕಾರ ||
ಯೋಮಾಸು[3]ದಿಶ್ಯಂತಿ ? ಹಿತಂ ಜ[4]ನಾನಾಂ ಬ್ರುವೇಽಪ್ಯನಂತಂ ಪ್ರಣಮಾಮಿ ನಿತ್ಯಂ ||

(1) ಪೇಱ್ (ಕ,ಚ) (2) ಮಱೆದುಂತತ್ವರಿಣಾಸು (ಚ,ಜ) (3) ರ್ಮದಾ (ಘ) (4) ಗತಿಗಳ್ (ಕ,ಜ) (5) ತಿರುಗುತ್ತಿ (ಕ,ಜ) ನಮೆಯುತ್ತಿ (ಘ) (6) ಮಿಂತೊಱೆದುಂ (ಕ,ಚ) (7) ಸಪ್ತಮಾಶ್ವಾಸಂ (ಚ)

(1) ಅಭ್ಯ (ಕ) ಭವ್ಯಂತರಂ (ಚ) (2) ಯೋಃ (ಕ) (3) ರಿಶ್ಯಂತಿ (ಕ) (4) ಜಿನಾನಾಂ

## || ನವಮಾಧಿಕಾರಂ ||

### — ಸಂ ವ ರಾ ನು ಪ್ರೇ ಕ್ಷೆ —*

ಕಂ|| ಪರಿಣಾಮದ ಪೊಲ್ಲಮೆಗಳ್ |
ಧೊರೆಕೊಳೆ ಬಿಡದೊದವಿ ಬರ್ಪ ಪಾಪಾಸ್ರವಮಂ ||
ಬರಲೀಯದೆ(ದ)ಪದಿಮೂಱುಂ |
[1] ಚರಿತ್ರದಿಂ ನೆಗಳ್ವ ಮಾಟಿಕ್ಕೆ ಸಂವರೆಯಕ್ಕುಂ || ೧ ||

ವ|| ಅಂತು ಪಾಪಾಸ್ರವಕ್ಕೆ ಸಂವರೆಯಾಗಿರ್ದ ಪಂಚಮಹಾವ್ರತ, ಪಂಚಸಮಿತಿ, ತ್ರಿಗುಪ್ತಿಗಳೆಂಬೀ ತ್ರಯೋದಶವಿಧಮಪ್ಪ ಚಾರಿತ್ರಂಗಳನುಂಟು ಮಾಡು[2]ವುದೆಂತೆನೆ—

---

*ಈ ಸಂಸ್ಕೃತ ಪದ್ಯ ಟೀಕೆಗಳು (ಕ, ಚ, ಜ) ಪ್ರತಿಗಳಲ್ಲಿವೆ—

ಸಾರ್ಥಂ ಪ[3]ದಾರ್ಥಾ ನವ ಸಪ್ತತ್ತ್ವತೈಃ–ಪಂಚಾಸ್ತಿಕಾಯಾಶ್ಚ ನಕಾಲಕಾಯಃ? ||
ಷಡ್ದ್ರವ್ಯ ನಿರ್ನೀತಿಕಲೋ ಕ[4]ಯುಕ್ತೈಃ–ಯೇನೋದಿತಂ ತಂ ಪ್ರಣಮಾಮಿ ಧರ್ಮಂ || ೧ ||

ದಷ್ಟೇ ದುಷ್ಟವಿಷಾಹಿನಾಂಗಿನಿ ಯಥಾ ನಷ್ಟಪ್ರಚೇಷ್ಟೇ ವಿಷಂ ।
ಪುಷ್ಯಜ್ಜಾಂಗಲಿಕೇನ ಮಂತ್ರಬಲಿನಾ ಸಂಸ್ತಂಭಿತಂ ತಿಷ್ಠತಿ ||
ಸಮ್ಯಕ್ತ್ವ ವ್ರತ ನಿಷ್ಕಷಾಯ ಪರಿಣಾಮಾಯೋಗತಾಭಿಸ್ತಥಾ |
ಮಿಥ್ಯಾತ್ವಾದಿಚತುಃಸ್ವಹೇತು ವಿಗಮಾನ್ನೂತ್ನೈನಸಾಂ ನಾಗಮಃ || ೨ ||

ಟೀಕು|| ದುಷ್ಟವಿಷಾಹಿನಾ–ದುಷ್ಟಮಪ್ಪ ವಿಷಮನುಳ್ಳ ಪಾವಿನಿಂ, ದಷ್ಟೇ–ಕಚ್ಚಲ್ಪಟ್ಟ, ನಷ್ಟಪ್ರಚೇಷ್ಟೇ–ಮಂತ್ರಿಸುವುದು ಮೊದಲಾದುದುಮಿಲ್ಲದ, ಅಂಗಿನಿ–ಜೀವನೊಳ್, (ಪುಷ್ಯತ್–) ಪೆರ್ಚುತಿರ್ದ, ವಿಷಂ–ವಿಷವು, ಮಂತ್ರಬಲಿನಾ–ಮಂತ್ರಶಕ್ತಿಯನುಳ್ಳ, ಜಾಂಗಲಿಕೇನ–ವಿಷವೈದ್ಯನಿಂದ, ಸಂಸ್ತಂಭಿತಂ – ಸ್ತಂಭಿಸಲ್ಪಟ್ಟುದಾಗಿ, ತಿಷ್ಠತಿ – ಪೆರ್ಚದೆನಿಲ್ಗುಂ, ಯಥಾ–ಎಂತು. ತಥಾ – ಅಂತೆ, ಸಮ್ಯಕ್ತ್ವವ್ರತ ನಿಷ್ಕಷಾಯ ಪರಿಣಾಮಾಯೋಗತಾಭಿಃ – ಸಮ್ಯಕ್ತ್ವಮುಂ, ವ್ರತಮುಂ, ಕಷಾಯ ಪರಿಣಾಮ(ಮುಂ) ಯೋಗದಿಲ್ಲಮೆಯುಂ, ಎಂಬಿವಱಿಂ, ಮಿಥ್ಯಾತ್ವಾದಿ ಚತುಃಸ್ವಹೇತುವಿಗಮಾತ್–(ತನಗೆಕಾರಣಮಾದ) ಮಿಥ್ಯಾತ್ವಂ ಮೊದಲಾದ ನಾಲ್ಕುಆಸ್ರವಂಗಳ (ಕಾರಣಂಗಳ) ಗಲ್ಕೆಯತ್ತಣಿಂ, ನೂತ್ನೈನಸಾಂ–ಪೊಸ(ಪಾಪ)ಕರ್ಮಾಣುಗಳ, ಆಗಮಃ– ಬರವು ನ– ಇಲ್ಲ– ಪೊಸಕರ್ಮಂಗಳಂ ಬರಲೀಯದಿರ್ಪುದೆಂಬ ಸಂವರಾನುಪ್ರೇಕ್ಷೆ—

[ ಈ ಅರ್ಥ (ಕ) ಪ್ರತಿಯಲ್ಲಿಲ್ಲ ]

ಶ್ಲೋ|| ಕರ್ಮಾಸ್ರವನಿರೋಧೋऽತ್ರ ಸಂವರೋ ಭವತಿ ಧ್ರುವಂ-
ಸಾಕ್ಷಾದೇತದನುಷ್ಠಾನಂ ಮನೋವಾಕ್ಕಾಯಸಂವೃತಿಃ || ೩ ||

ತಾ|| ಎಲೈ ಜೀವನೇ, ಮನೋವಾಕ್ಕಾಯಗುಪ್ತಿಗಳೆಂಬೀ ಗುಪ್ತಿತ್ರಯಂಗಳೊಡಗೂಡಿದಾಗಾಮಿಗಳಪ್ಪ ಕರ್ಮಂಗಳ್ ಬಾರದಂತೆ ನಡೆವ ನೆಗಳ್ತಿಯುಂ ಸಂವರಮೆಂಬುದಕ್ಕುಮಾಸಂವರೆಯುಂ ಮೋಕ್ಷಾರ್ಥಮಾಗೆ ನೀನಿಂ ನೆಗಟಲ್ವೇಟ್ಕುಮೆಂಬೀ ಸೂತ್ರಾನುಸಾರಮಾದ ದೃಷ್ಟಾಂತ ಕಥಾ ನಿರೂಪಣಂಗೆಯ್ವೆನದೆಂತೆನೆ—

---

(1) ಚರಿತದೊಳಂ (ಚ) ಚರಿತ್ರದಿಂದೆಸೆವ (ಜ) ತೆಗೆವಮಾಱ್ಕೆ (ಕ) (2) ವುದದೆಂತೆನೆ (ಕ) (3) ದಾರ್ಥಘ್ನವಮುಪ್ರತತ್ಯೆ (ಚ) (4) ಯುಕ್ತೆ (ಚ)

ಉ|| [1]ಕೊಲ್ಲದಸತ್ಯಮಂ [2]ನುಡಿಯದೀಯದ ವಸ್ತುವನೀೞ್ದುಕೊಳ್ಳದಾ |
ಮೆಲ್ಲನೆ ಪೋಗದನ್ಯವನಿತಾಜನದಲ್ಲಿಗೆ ದುಷ್ಪರಿಗ್ರಹ ||
[3]ಕ್ಕೊಲ್ಲದೆ ತನ್ನೊಳಿಂತೆಸೆವ ಪಂಚಮಹಾವ್ರತದಿಂದಮೊಪ್ಪಿ ತ |
ಳ್ವಿಲ್ಲದೆ ಶುದ್ಧವೃತ್ತಿ ದೊರೆಕೊಂಡಿರೆ [4]ಸಾರದು ಪಾಪಸಂಕುಳಂ || ೨ ||

ವ|| ಕಡಿತಲೆವಿಡಿದೊಂಗೆ ಪಲಗೆಯಿಲ್ಲದೊಡಂ, [5]ಗುಣಂಬಿಡಿದೊಂಗೆ ವ್ರತಮಿಲ್ಲದೊಡಂ, ಆತಂಗಿದಿರ್ಚಿದ ಪಗೆಯನಾನಲುಂ, ಈತಂಗೆ ಪಾಪದ ಬರವಂ [6]ತೆಗೆಯಲುಮೆಂತು ತೀರ್ಗುಂ ?– ಎಂಬುದಂ ಬಗೆದು ಸಂವರೆಯೆಂಬ ಬಲ್ಗಾ[7]ಪನಿಡುವುದು—

ಕಂ|| ನಡೆವ ನುಡಿವುಣ್ಬ ಕೊಳ್ವಿಡು |
ವೆಡೆಯೊಳ [8]ಮುತ್ಸರ್ಗದೆಡೆಯೊಳಂ ಪ್ರಾಣಿಗಳಂ ||
ತೊಡರ್ದೞಿಯದ ಸಮಿತಿಗಳ |
ಯ್ದೊಡಗೂಡಿರೆ ಪುಗುವ ಪಾಪರಜಮಂ ತೆಗೆಗುಂ || ೩ ||

ವ|| ಪಡಿಯ[9]ಱರುಳ್ಳ ಮನೆಯಂ [10]ಪೊಲ್ಲಮಾನಸರ್ ಪುಗದಂತೆ ಪಂಚಸಮಿತಿಗಳುಳ್ಳ ಬಗೆಯಂ ಪಾಪಂ [11]ಪುಗುವುದಲ್ತು— ಮತ್ತಂ—

ಮ|| ಮನದೊಳ್ [12]ಭಾಷೆಯೊಳಂಗದೊಳ್ ಪುಗುವ ದು[13]ಷ್ಕರ್ಮಂಗಳಂ ಭಾ[14]ವಿಸ |
ಲ್ಕೆನಸುಂ [15]ಕೂಡದ ಸಂಯಮುಪ್ರಬಳನಪ್ಪಾತಂಗೆ ಮತ್ತೀತಱಿಂ ||
ನಿನಗಿನ್ನೊಂದನೆ [16]ಪೇೞ್ವೆನಾತ್ಮನೆ ಮನೋವಾಕ್ಕಾಯಗುಪ್ತಿತ್ರಯಂ |
ಘನಮಾಗಿರ್ದೊಡೆ ಬಾರ[17]ವಲ್ಲದೊಡವಂ ತಾಂಗಲ್ ಸಮರ್ಥರ್ಕಳಾರ್ || ೪ ||

ವ|| [18]ದಾರವಂದದನುಂ, ಪಡಿಯುಂ, ಕೀಲುಮಿಂತಿವುಂಟಾದೊಡಂ ಬಾಗಿಲಂ [19]ಕಿಱಿದಿರುಳ್ ಮಱೆದೊಱಗಿದೊಡೆ ಕಳ್ಳರ್ ಪುಗದಿರ್ಕುಮೇ ? ಮೂಱುಂಗುಪ್ತಿಗಳಿಲ್ಲದೊಡೆ ಪಾಪಂ ಪುಗದಿರ್ಕುಮೇ ? ಸಂವರೆಗೆ ಗುಪ್ತಿತ್ರಯಂಗಳೆ ಪ್ರಧಾನಮೆಂಬುದಂ ಬಗೆಯಿಂ, [20]ಅವು ಋಷಿಗಲ್ಲದೊಡಂಬಡವೆಂದು ಬೆರ್ಚಲ್ ಬೇಡಾ ! ಎಲೆ ಗೃಹಸ್ಥಾ, ನಿನಗಮಣುವ್ರತಂಗಳ್ ಪೇೞ್ದುವಲ್ಲವೆ ! ನೀನುಂ ಯಥಾಶಕ್ತಿಯಿಂ—

---

(1) ಕೊಲ್ಲದೆ (ಘ) (2) ನುಡಿವುದಿಲ್ಲವೆ ಕಳ್ಳದೆ ಸೋಲ್ತು ಚಿತ್ತದಿಂ। ಸಲ್ಲದೆ ನೆಟ್ಟನನ್ಯ (ಕ,ಚ,ಜ) (3) ಕ್ಕಲ್ಲದೆ (ಕ) (4) ಬಾರವು (ಕ,ಚ) ಸಾರವು (ಜ) (5) ಒಳ್ಪುವಿಡಿದೊಂಗೊಳ್ವ್ರತ (ಕ,ಚ) (6) ತಡೆಯಲು (ಕ,ಚ) (7) ಪಂಮಾಳ್ಪುದು (ಕ,ಚ) (8) ಮುಚ್ಛರ್ಗ (ಛ) (9) ರಮುಳ್ಳ (ಛ) (10) ಪೊಱಗಣ (ಕ,ಚ) (11) ಪುಗವು(ಕ,ಚ) (12) ಳ್ವಾಚೆಯೊ (ಕ,ಚ) ಳ್ವಾಕ್ಯದೊ (ಖ,ಗ) ದುರ್ಭಾಷೆ (ಘ) (13) ದುಃಖಪಾಪಂಗಳಂ (ಕ,ಚ) (14) ಬಾರಿಸ್ವಲ್ಕಿನಿಸುಂ (ಚ,ಜ) (15) ಕೂಡಿದ (ಕ,ಚ,ಗ) (16) ಪೇಳುವಾ (ಕ,ಖ) (17) ರದಲ್ಲ (ಕ) (18) ದ್ವಾರಬಂಧ (ಕ,ಚ) (19) ತೆಱೆ (ಘ) (20) ಇದು ಋಷಿಯರ್ಗಲ್ಲ (ಚ,ಜ)

ಕಂ|| ಪೞಯಂ ಬರಿಸದೆ ಪೆಱರಂ |
ಪೞಯದೆ ತನ್ನಳವಿ[1]ಯಿಂದಮೆಂತುಂ ಧರ್ಮ ||
[2]ಕ್ಕಲಲದೆ ವಿಶುದ್ಧವೃತ್ತಿಗೆ |
ಬಲಲದೆ ನೆಗಲ್ವನನಘಂಗಳೇಂ ಪೊರ್ದುಗುಮೇ || ೫ ||

ವ|| ಉ[3]ಳ್ಳವಂ ತನ್ನ ಶಕ್ತಿಯ[4]ಳವಿಯಂ ಮಱಸದೆ [5]ಧರ್ಮಂಗೆಯ್ವೊಡಮದಲ್ಲದೆ ಶರೀರ ಶಕ್ತಿಯುಳ್ಳವಂ ಕ(ತ)ಳಿಪದೆ ವ್ರತದೊಳ್ ನೆಗೞ್ದೊಡಂ ಪಾಪಮೆಂತು [6]ಸಾರ್ತರ್ಕುಂ ?—

ಮ|| ಕ್ಷಮೆಯಿಂ ಕ್ರೋಧಮನೊತ್ತಿ ತಾಂಗು [7]ವಿನಯಪ್ರಾಗ್ಭಾರದಿಂ ಮಾನಗ |
ರ್ವಮನೊಟ್ಟಯ್ಸು (ತಗುಳ್ವ) ಮಾಯೆ[8]ವಗೆಯಂ ತೆಳ್ಪಿಂದೆ [9]ಗೆಲ್ದಿಕ್ಕು ಲೋ ||
ಭಮುಮಂ ಸಂತಸದಿಂದಡಂಗಿಸು ಕರಂ ಮಿಥ್ಯಾತ್ವಮಂ ನೆಟ್ಟನು |
ತ್ತಮಸಮ್ಯಕ್ತ್ವ[10]ಶಿತಾಸಿಯಿಂದ[11]ಮಿಱ ನೀಂ ಮಾಣ್ಬಂಜದಿರ್ ಜೀವನೇ || ೬ ||

ವ|| ಈ ಮರ್ದಿಂದೀ ಕುತ್ತಂ ಕಿಡುಗುಮೆಂ[12]ದೊಡದಂ ಮಾಡದೊಡಮಾ[13]ಗುಣ ದಿನೀ ದೋಷಂ [14]ಕಿಡುಗುಮೇಂದೊಡದಂ ನೆಗೞದೊಡಮಾತನ ಕುತ್ತಮೊತ್ತದೆಯುಮಾತನ ಪಾಪಂ ಪತ್ತದೆ[15]ಯುಮೇಂ ಮಾಣ್ಗುಮೆ ?—

ಕಂ|| ಮಿಕ್ಕಭಿಮಾನ[16]ದೊಳಳಿಪಿನ |
ತಕ್ಕಂ ಮಿಗೆ ಜಡಿದು ತಾಂ[17]ಗು ಶೌಚದ್ವಿಪದಿ(ಮ)ಂ ||
ಮಿಕ್ಕು ಪುಗಲೀಯದಿದಿರಂ |
[18]ಪೊಕ್ಕಡ್ಡಂನಿಲಿಸ ಶೌಚಗು[19]ಣಮಂ ಜೀವಾ || ೭ ||

ವ|| ಕತ್ತಲೆಯಂ ತೊಲಗಿಸುವ ಸೊಡರ್ ತನ್ನಿಂದಪ್ಪೊಡ[20]ದಂ ಬೆಳಗದೊಡಂ, ಪಾಪಮಂ ಬರಲೀಯದಿರ್ಪ ಒಳ್ಗುಣಂಗಳ್ ತನ್ನಿಂದಪ್ಪೊಡವಂ[21]ಕೆಯ್ಕೊಳ್ಳದೆಯು ಮಿರ್ದೊಡಾತನ ಕಣ್ಣಂ, ಈತನಱವು[22]ಮನೇಗೆಯ್ವುದು? ಇಂತು ಮತ್ತಂ—

(1) ಯಂದಮೆಂತುಂ (ಕ, ಚ) ಯನಿತನಿತ್ತಂ ? (2) ಕ್ಕಲಸದೆ(ಘ) ಕ್ಕಳಲದೆ(ಕ, ಚ) (3) ಉಳ್ಳ(ಳ್ವೊ)ಂ ದ್ರವ್ಯಶಕ್ತಿ (ಕ, ಚ) (4) ಯಳವಂ (ಕ, ಚ) (5) ವ್ರತಂ (ಘ) (6) ಬರ್ಕುಂ (ಚ, ಜ) (7) ವಿಷಯವ್ಯಾವೃತ್ತಿಯಿಂ (ಕ, ಚ) ವಿಷಯಪ್ರಾಗ್ಭಾರದಿಂ (ಜ) (8) ಮಾಯಾರಿಪು (ಕ) ಮಾಯರಿಪು (ಚ) ಮಾಯೆಯರಿ (ಘ) ಮೋಹರಿಪು (ಕ, ಖ) (9) ಗೆಲ್ ಮಿಕ್ಕ (ಕ, ಜ) (10) ಘನಾಸೆಯಂ (ಘ) (11) ಮರಿನೀನಿಂಮಾಣದಿರ್ (ಕ) ಮಱು ನೀಂ ಕೇಳ್ (ಚ, ಜ) (12) ಮೆಂದಾಮರ್ದಂ (ಕ) (13) ಗುಣಂಗಳಿಂದಮಾ (ಕ, ಚ) (14) ಪಿಂಗುಗು (ಕ, ಚ) (15) ಯುಂಮಾಣ್ಗುಮೆ (ಕ, ಚ) (16) ನದಿನಳಿಪನ ತಕ್ಕರ್ (ಕ, ಚ) (17) ತಾಂಗಶಲುಚದ್ವಿಪಮಂ (ಘ) (18) ಪೊಕ್ಕೊಡದಂನಿಲಿಸು (ಕ, ಚ) ನಿಱಸು (ಕ, ಖ) (19) ಗುಣದಿಂ (ಚ) (20) ಪ್ಪೊಡಂ ಬೆಳಗದೆಯುಂ (ಕ) (21) ಕೆಯ್ಕೊಂಡು ನೆಗಳದೊಡ (ಕ, ಚ) (22) ವು ಮದೇಗೆಯ್ವುದೋ ಮತ್ತಂ (ಕ, ಚ)

ರಗಳೆ– ಜಯ ವಿಬುಧಪತಿವಂದ್ಯ – ಜಯ ವಿಳಸದಭಿ[1] ನಂದ್ಯ || ೧ ||
ಜಯ ಕರ್ಮ ನಿರ್ನಾಶ – [2] ಜಯ ಮುಕ್ತಿ[3] ಪದವೀಶ || ೨ ||
ಜಯ ದುಷ್ಟ ಮಳ[4] ವಿಳಯ – ಜಯ [5] ವಿಪುಳಸುಖ ನಿಳಯ || ೩ ||
[6] ಜಯ ಶಿಷ್ಯ ಗುಣನೂತ – ಜಯ ಭವ್ಯ ಜನಪೂತ || ೪ ||
ಜಯ ಪರಮಪದರಾಜ – ಜಯಲೋಕ ವಿಭ್ರಾಜ || ೫ ||
ಜಯ ಗುಣಗಣಾಭರಣ – ಜಯದುರಿತ[7] ಗಣ ಹರಣ || ೬ ||
ಜಯ ಸರ್ವಗುಣಮೂರ್ತಿ – ಜಯಧವಳತರ ಕೀರ್ತಿ || ೭ ||
ಜಯದೋಷ ಭಯರಹಿತ – ಜಯಪರಮ[8] ಪದ ಸಹಿತ || ೮ ||
ಜಯ ಭುವನನುತಶೌರ್ಯ – ಜಯ ವಿಗತಮಳಕಾರ್ಯ || ೯ ||
ಜಯ ವಿಶ್ವವರ ಬೋಧ – ಜಯ [9] ವಿದಿತ ನಿಷ್ಕ್ರೋಧ || ೧೦ ||
ಜಯ ಶುಭದ ಪದಕಮಳ – ಜಯಸಕಳ ಜಗದಮಳ || ೧೧ ||
ಜಯ ಸತತ ಸಂಶುದ್ಧ – ಜಯಜೀವಹಿತ [10] ಸಿದ್ಧ || ೧೨ || – ||೪೬||

ಕಂ|| ಸುರರೀ ತೆಱದಿಂ ಸ್ತುತಿಯಿಸು |
ತಿರೆ ವಿನಯದೆ ಬಂದು ಮಾಣಿಭದ್ರಂ [11] ಬೇಗಂ ||
ಕರಯುಗಮಂ ಮುಗಿದಾಗಳ್ |
ಪರಮೇಶ್ವರನಡಿಗೆ ಬಾಗಿ ಪೊಡೆವಡುತಿರ್ದಂ || ೪೭ ||

ವ || [12] ಅಂತು ಸುವರ್ಣಭದ್ರಸ್ವಾಮಿ ತನಗೆ ತಾನೇ ದೀಕ್ಷೆಗೆಯ್ದೊಂದೆದೆವಸದೊಳು ಪಸರ್ಗಂ[13] ಗಳುಮಂ ಸೈರಿಸಿದುರ್ ಗೆಲ್ದು [14] ಶುಭಧ್ಯಾನದಿಂ ಕರ್ಮಕಳಂಕಮಂ ನಿರ್ಜರಿಸಿ ಕೇವಳಿಯಾಗಿ ಕೆಲವುದೆವಸದಿಂ ಮುಕ್ತಿಯನೆಯ್ದಿದನೆಂಬ[15] ಕಥೆಯನಪ್ಪೊಡಂ ನೀಂ ಕೇಳ್ದಱ್ತವಡಲಾಗದೆ !—

---

(1) ವಂದ್ಯ (ಕ, ಚ) (2) ಈ ಪಾದ ಚ ಪ್ರತಿಯಲ್ಲಿಲ್ಲ (3) ಪದಕೀಶ (ಖ, ಗ) (4) ವಿಜಯ (ಕ, ಚ) (5) ವಿಮಳ(ಖ, ಗ) (6) ಜಯದಿವ್ಯಗಣನಾಥ ಜಯಪರಮ ಪದನಾಥ (ಖ, ಘ, ಜ) ಜಯದಿವ್ಯಗುಣನೂತ (ಗ) ಜಯಭವ್ಯಗಣನಾಥ (ಛ) (7) ಕುಲ (ಕ, ಚ) (8) ಬಲ (ಖ, ಘ) (9) ವಿಜಿತ (ಕ, ಚ) (10) ಶುದ್ಧ (ಗ) (11) ದೇವಂ (ಖ, ಘ) (12) ಅಂತಾಸು (ಖ) (13) ಗಳಂ (ಕ) (14) ಶುಕ್ಲಧ್ಯಾನ (ಕ, ಚ) (15) ನೆಂಬೀ ಕತೆಯಂ ಕೇಳ್ದಪ್ಪೊಡಮತ್ಥಿವಡಲಾಗದೆ (ಕ) ಕೇಳ್ದಱವಟ್ಟುನೆಗಱಲಾಗದೆ (ಜ)

ಮ|| ಮಳವಿಧ್ವಂಸನಕಾರ್ಯಮಂ [1] ನೆಗಲ್ದಿಂ ನಿಮ್ಮಿರ್ಪ ಪಾಂಗೇನೊ [2] ನಿ |
ರ್ಮಳನಾಗಿರ್ದೊಡಮೆಂತು ಭೇದಿಸುಗು[3] ಪೊಂದಿರ್ಪುದೇ ಬೇಡದಂ ||
ಕಳೆಯಿಂ ಮೋಹಮನಿಕ್ಕು ಮಿಕ್ಕು ತಪಸಂ ಕೈಯ್ಕೊಂಡು ಸುಜ್ಞಾನದಿಂ |
ತಿಳಿದಿರ್ದಾಱಿದ ಚಿತ್ತಮೊಂದೆ ದುರಿತ[4] ಪ್ರಧ್ವಂಸನಮಂ ಮಾಡದೇ || ೪೮ ||

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

ಬಂಧುವರ್ಮ ನಿರ್ಮಿತಮಪ್ಪ

## ಜೀವಸಂಬೋಧನಾ ಗ್ರಂಥಾವತಾರದೊಳ್

ನಿರ್ಜರಾಭಿಧಾನಂ

[5] ನ ವ ಮಾ ಧಿ ಕಾ ರ ಂ.



(ಕ, ಜ, ಚ ಗಳಲ್ಲಿದೆ)

ನ ಸಂಸ್ತುತೋ ನ ಪ್ರಣತಃ ಸಭಾಯಾಃ – ಯಸ್ಸೇವಿತೋಂತರ್ಗಣಪೂರಿತಾಯಾಃ ||
ಪದಚ್ಯುತೇ ಕೇವಲಿಭಿಃ ಜಿನಸ್ಯ – ದೇವಾಧಿದೇವಂ ಪ್ರಣಮಾಮ್ಯರಂ ತಂ ||

(1) ನೆಗೞ್ದು ನೀಂ (ಖ, ಗ) ನಗಱುತುಂ ನೀಮಿರ್ಪ (ಘ) (2) ದುರ್ಪಳರಾಗಿರ್ದಪನೆಂತು (ಖ, ಗ) (3) ಪೊಂದಂಜಿರ್ಪಿರೇ (ಛ, ಜ) (4) ಪ್ರಧ್ವಂಸನಂ (ಕ, ಚ) (5) ದಶಮಾಶ್ವಾಸಂ (ಖ, ಘ)

## || ಏಕಾದಶಾಧಿಕಾರಂ ||

### — ಬೋಧಿ ದುರ್ಲಭಾ [ ತ್ವಾ ] ನುಪ್ರೇಕ್ಷೆ —

ಕಂ|| ಮಾಸಿತಗುಣ[1] ತತ್ವಪಂ |
ಜ್ಞಾನಮೆ ತಾಂ ಬೋಧಿತತ್ವಮೆಂಬುದು ಮಳಪಂ ||
ತಾನಕ್ಷಯಸುಕರಮಪ್ಪುದು |
ತಾನಾಪ್ತಾಗಮ ಪದಾರ್ಥನಿರ್ಣಯ ರೂಪಂ || ೧ ||

ವ|| ಆಪ್ತನೆಂತಪ್ಪನೆಂದೊಡೆ :—

ಶ್ಲೋಕಂ|| "ಕ್ಷುಧಾ ತೃಷಾ ಭಯಂ ದ್ವೇಷೋ ರಾಗೋ ಮೋಹಶ್ಚ ಚಿಂತನಂ ||
ಜರಾ ರುಜಾ ಚ ಮೃತ್ಯುಶ್ಚ ಸ್ವೇದಃ ಖೇದೋ ಮದೋ ರತಿಃ ||
ವಿಸ್ಮಯಂ ಜನನಂ ನಿದ್ರಾ ವಿಷಾ[2]ದೋಽಷ್ಟಾದಶ ಸ್ಮೃತಾಃ || "

ವ|| [3]ಎಂದಿಂತಷ್ಟಾದಶದೋಷವರ್ಜಿತನಪ್ಪನಾತ್ಮಂ. ಆತನವಚನಮಾಗಮಂ. ಅಂತಪ್ಪಾಗಮದಿಷ್ಟದಿಂ ನೆಗಲ್ತ ಪದಾರ್ಥಮುಕ್ಕುಮಲ್ಲಿ—

---

ಈ ಸಂಸ್ಕೃತ ಪದ್ಯ ಟೀಕೆಗಳು (ಕ, ಜ, ಚ) ಪ್ರತಿಗಳಲ್ಲಿ ಮಾತ್ರ ಇವೆ—

ವಿದ್ಯಾವತೇ ತೀರ್ಥಕರಾಯ ತಸ್ಮಾ— ಆಹಾರದಾನಂ ದದತೋ ವಿಶೇಷಾತ್ ||
ಗೃಹೇ ಜಿನಸ್ಯಾಽಜನಿ ರತ್ನವೃಷ್ಟಿಃ — ತಂ ಶ್ರೀನಮಿನಾಥಂ ಶರಣಂ ವ್ರಜಾಮಿ || ೧ ||

ನೈಕಾಕ್ಷೈಃ ವಿಕಲಾಕ್ಷಪಂಚಕರಣಾಸಂಜ್ಞಿವ್ರಜೈರ್ಜಾತು ಯಾ |
ಲಬ್ಧಾ ಬೋಧಿರಗಣ್ಯಪುಣ್ಯವಶತಃ ಸಂಪೂರ್ಣಪರ್ಯಾಪ್ತಿಭಿಃ ||
ಭವ್ಯೈಸ್ಸಂಜ್ಞಿಭಿರಾಪ್ತಲಬ್ಧಿವಿಧಿಭಿಃ ಕೈಶ್ಚಿತ್ಕದಾಚಿತ್ ಕ್ವಚಿತ್ |
ಪ್ರಾಪ್ಯಾ ಸಾ ರಮತಾಂ ಮದೀಯಹೃದಯೇ ಸ್ವರ್ಗಾಪವರ್ಗಪ್ರದಾ || ೨ ||

ಟೀ|| ಏಕಾಕ್ಷೈಃ—ಏಕೇಂದ್ರಿಯಂಗಳಿಂ, ವಿಕಲಾಕ್ಷ ಪಂಚಕರಣಾ ಸಂಜ್ಞಿವ್ರಜೈಃ—ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಸಂಜ್ಞಿಪಂಚೇಂದ್ರಿಯಗಳಿಂ, ಜಾತು—ಎಂತಪ್ಪೊಡಂ, ಯಾ—ಯಾವುದಾನೊಂದು ಬೋಧಿಃ, ನ ಲಬ್ಧಾ—ಪಡೆಯಲ್ಪಟ್ಟುದಿಲ್ಲ. ಅಗಣ್ಯ ಪುಣ್ಯವಶತಃ—ಪಿರಿದಪ್ಪ ಪುಣ್ಯವಶದಿಂ, ಸಂಪೂರ್ಣಪರ್ಯಾಪ್ತಿಭಿಃ — ನೆರೆದ ಪರ್ಯಾಪ್ತಿಗಳನುಳ್ಳ ಭವ್ಯೈಃ — ಭವ್ಯರಿಂ, ಸಂಜ್ಞಿಭಿಃ—ಸಂಜ್ಞಿಗಳಿಂ, ಆಪ್ತಲಬ್ಧವಿಧಿಭಿಃ—ಪಡೆದಯ್ದುಲಬ್ಧಿಗಳನುಳ್ಳುದಱಿಂ, ಕೈಶ್ಚಿತ್—ಕೆಲಬರಿಂ, ಕದಾಚಿತ್—ಎತ್ತಾನುಂ, ಕ್ವಚಿತ್—ಎಲ್ಲಿಯಾನುಂ, ಪ್ರಾಪ್ಯಾ—ಪಡೆಯಲ್ಪಡುವುದು, ಸಾ—ಅದು, ಮದೀಯಹೃದಯೇ—ಎನ್ನಮನದೊಳ್, ರಮತಾಂ—ಕ್ರೀಡಿಸುತಿರ್ಕೆ, ಸ್ವರ್ಗಾಪವರ್ಗಪ್ರದಾ — ಸ್ವರ್ಗಮೋಕ್ಷಂಗಳಂ ಕುಡುವುದು, — ಬೋಧಿ ಪಡೆಯಲ್ಬಾರದುದಂ ಪೇಳ್ವ ಬೋಧ್ಯತಿದುರ್ಲಭತ್ವಾನುಪ್ರೇಕ್ಷೆ (ಕ ದಲ್ಲಿ ಈ ಟೀಕೆಯಿಲ್ಲ)

---

(1) ಗುಣರತ್ನ (ಕ) ರತ್ನ (ಚ) (2) ಷಾದೋ ದೋಷವರ್ಜಿತಃ (ಕ, ಚ) (3) ಇಂತಪ್ಪಾತ್ಮನ ವಚನಮಾಗಮದಿಷ್ಟನೆಗಳ್ತೆ ಪದಾರ್ಥಮಪ್ಪುದಲ್ಲಿ (ಚ) ಇಂತಪ್ಪನೆಗಳ್ತೆಗೊಪ್ಪುತಿರ್ಪನಾತ್ಮನಾತನ ವಚನ (ಛ, ಗ) ಇಂತಪ್ಪನಾತ್ಮನಾಪ್ತನ ವಚನ (ಖ, ಝ)

ಶಾ|| ಅಱುಂದ್ರವ್ಯದ ಭೇದಮುಂ ನವ[1] ವಿಕಲ್ಪೋದ್ಯತ್ಪದಾರ್ಥಂಗಳಂ |
ಮೂಱುಂಲೋಕವಿಭಾಗದಾಕೃತಿಗಳಂ ಪಂಚಾಸ್ತಿ ಕಾಯಂಗಳಂ ||
ಬೇಱಾ[2]ಗಿರ್ದ ಚತುರ್ಗತಿ ಸ್ಥಿತಿಗಳಂ [3]ಷಡ್ಜೀವ ಕಾಯಂಗಳಂ |
ಮಿಾಱುತ್ತಿರ್ಪ ದುರಷ್ಟಕರ್ಮದಳವಂ ಮೋಕ್ಷಕ್ರಿಯೋಪಾಯಮುಮಂ || ೨ ||

ವ|| [3]ಪೆಱವುಮವುಮೊದಲಾಗೊಡೆಯ ವಸ್ತುಸ್ಥಿತಿಗಳ ತೆಱನನಱಿದು ನಂಬಿ [4]ಮೆಚ್ಚುತಿರ್ಪುದು ಬೋಧಿಲಕ್ಷಣಂ – ಮತ್ತಂ—

ಕಂ|| [5]ಜ್ಞಾನಾದಿತ್ರಿಕ ರತ್ನ ವಿ |
ಧಾನಂಗಳ [6]ನಱಿದು ನೆಱೆಯೆ ಕೆಯ್ಕೊಂಡು ಗುಣ ||
ಸ್ಥಾನಂಗಳ ತುದಿಗೆಯ್ದುವೆ |
ನಾನೆಂಬುದ್ಯೋಗಮಲ್ತೆ ಬೋಧಿಗೆ ಸಾರಂ || ೩ ||

ವ|| ಅಂತು ಬೋಧಿಗೆ ಸಾರಮಪ್ಪ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳ ಸಂಪೂರ್ಣತೆಯೊಳ್ ಮೋಕ್ಷಮಕ್ಕುಂ—

ಉ|| ಈ ತೆಱದಿಂದಮಿಾತೆಱದ ಜೀವಮನೋವುವುದೀ ನಿರೋಧದಿಂ |
ದೀ ತೆಱದಿಂದ್ರಿಯಂಗಳನಡಂಗಿಪುದೀ ಪರಿಣಾಮಶುದ್ಧಿ ಯಿಂ ||
ದೀ ತೆರ[7] ದುದ್ಧತಾಘಸಕರಂ ಕಿಡುಗುಂ ದಲಮೋಘಮೆಂಬಭಿ |
[8]ಪ್ರೇತದಳುರ್ಕೆಯುಂ ರುಚಿಯುಮಿಲ್ಲದೊಡೇವುವೊ ಪೇೞ್ ವ್ರತಾದಿಗಳ್ || ೪ ||

ವ|| ಬಿನ್ನಣಮುಂ, ಕೆಯ್ದುವುಂ ಮನಮುಮಿಲ್ಲದೊಂಗೆನಿತು[9] ಮೆಯ್ಯಾದೊಡಂ ಪಗೆಯಂ ಗೆಲಲಾಗದಂತೆ ಅಱಿವು[10] ಮಾರ್ಪು ಮುೞ್ತಿಯು ಮಿಲ್ಲದನೆನಿತು ತಪಂಗೆಯ್ದೊಡಂ ಕರ್ಮಂಗಳಂ ಗೆಲಲಾಱಂ—

---

ರತ್ನತ್ರಯಮತಿಪ್ರಾಪ್ತಿಃ ಬೋಧಿಸ್ಸಾತೀವ ದುರ್ಲಭಾ ||
ಲಬಾ(ಬ್ಧಂ ?)ಕಥಂಕಥಂಚಿತ್ ಚೇತ್ ಕಾರ್ಯೋಯತ್ನೋ ಮಹಾನಿಹ || ೩ ||

ತಾ|| ಎಲೆ ಜೀವನೇ ಸಮ್ಯಗ್ದರ್ಶನ ಜ್ಞಾನ ಚಾರಿತ್ರ ವಿಷಯಮಪ್ಪಱಿವತಿದುರ್ಲಭಮಾಗಿರ್ಪುದು. ಅದೆಂತೋ ಪೂರ್ವಾರ್ಜಿತಮಪ್ಪ ಮಹಾಸುಕೃತವಿಶೇಷದಿಂ ಪ್ರಾಪ್ತಮಾದುದಾ ಸಮಯದೊಳೆ ಮೋಕ್ಷವಿಷಯಮಪ್ಪ ಮಹಾಪ್ರಯತ್ನಂ ನಿನ್ನಿಂದಿಲ್ಲಿ ನೆಗೞಲ್ವೇೞ್ಕುಮೆಂಬೀ ಸೂತ್ರಾನುಸಾರಮಾದ ದೃಷ್ಟಾಂತಕಥಾನಿರೂಪಣಂಗೆಯ್ವೆನದೆಂತೆನೆ—

---

(1) ವಿದೋದ್ಯತ್ಪ (ಕ, ಚ) ವಿಧಾನೋದ್ಯ (ಖ, ಘ) (2) ತತ್ಪಪ್ರತತ್ವಂಗಳಂ (ಕ, ಚ) (3) ಇವು ಮೊದಲಾಗಿ ಪೆಱವುವಸ್ತುಸ್ಥಿತಿ (ಕ,ಚ) (4) ಮೆಚ್ಚಿನೆಗೞುತ್ತಿರ್ಪುದು (ಕ,ಚ) (5) ಜ್ಞಾನಂತ್ರಿಕರಣ ರತ್ನ (ಚ,ಜ,ಕ) (6) ಕಿಱಿದು ನೆಗೞೆ (ಖ,ಗ) (7) ದಿಂದಘಪ್ರಕರಮುಂ (ಖ,ಘ) ದಿಂದಘೌಘನಿಕರಂ (ಘ) (8) ಪ್ರಾಯದಳು (ಪ್ರಾಸ ಕಿಡುವುದು) (9) ಕುಳಿನೊಡಂ (ಛ,ಘ) (10) ಮೊಳ್ಪು (ಕ,ಚ)

ಕಂ|| [1]ಅಱಿವಿಂ ತ್ರಿಭುವನಮೆಲ್ಲಮ |
ನಱಿವಂತಕ್ಕಂ ಮಹಾನುಭಾವದಿನೆಂದಿಂ ||
ತಱಿಪೆಯುಮಱಿವಂ ಕೆಯ್ಕೊಳ |
ಲಱಿಯ(ಯಿ)ರಿ ಬಱಿಯಂ ವಿಮೋಹವಶದಿಂ ಕಿಱಿಯರ್ || ೫ ||

ವ|| ಬಾವಿಯ ಕಪ್ಪೆ ಸಮು[2]ದ್ರಮಂ ಮಚ್ಚದಂತೆಲೆ [3]ಮೂಢಾ, ನಿನ್ನಳವಿಗೆ ಕೇವಲ ಜ್ಞಾನದಳವನುದಾಸೀನಂ[4]ಗೆಯ್ದು ನೀಂ ಮರುಳಾಗದಿರಿಂತಪ್ಪ ವಸ್ತುಗಳನಱಿದೊಡಂ ಬಲ್ಲಿದನಾಗಿ ಪಗೆವನೊಳ್ ಪೊಣರ್ದೊಡಲ್ಲದೆರಡೆಡೆಯೊಳಂ ಗೆಲ್ಲಮಕ್ಕುಮೆ ?

ಉ|| ನೆಟ್ಟನೆ ಜೀವ[5]ಮಂತದು ಮಳಚ್ಛದವಾಮಳ[6]ಮಾಸ್ರವೋದ್ಭವಂ |
ತೊಟ್ಟನದುಂ ಪ್ರಮಾದದೆ ಮಳವಜ್ರದಿಂ ವಿಪರೀತದಿಂದೊಡಂ ||
ಬಟ್ಟೆಹ ಕರ್ಮ[7]ದಿಂದಮುದಱೊಳ್ ಸಮ[8]ವಾಯದೆ ಕಾಲಲಬ್ಧಿಗಳ್ |
ಪುಟ್ಟುಗುಮಲ್ಲಿ ತತ್ವರುಚಿಯಾಗಿರೆ ದೇಹಿಗೆ ಮುಕ್ತಿ ಕೂಡುಗುಂ || ೬ ||

ವ|| ಮಹಾವ್ಯಾಧಿಯುಳ್ಳಾತಂಗೆ ರುಚಿ ಪುಟ್ಟೆ ಕುತ್ತಂ [9]ಕಿಡಲ್ ಬಗೆದುದೆಂದಱಿವುದು. ಸಂಸಾರಿಜೀವಕ್ಕೆ ತತ್ವರುಚಿ ಪುಟ್ಟೆ ಕರ್ಮಂ ಕಿಡಲ್ ಬಗೆದುದೆಂದಱಿವುದು. ಮತ್ತಮೆಂ [10]ತಪ್ಪುದಱಿಂ ನಿವೃತ್ತಿಯೊಳ್ ಮುಕ್ತಿ ಕೂಡುಗುಮೆಂದೊಡೆ—

ಕಂ|| [11]ಆವೆಡೆಯೊಳಾವ ತೆಱದಿಂ |
ಜೀವಂ ದುರ್ಗತಿಯೊಳಾಱ್ದುಮದನಾ[12]ತೆಱದಿಂ ||
ಭಾವಿಸಿ ಬಗೆದಱಿ[13]ದಾಗಳು |
ಮೋವದೆ ತಾಂ ತೊಱೆದು ನೆಗೞ್ದ [14]ನಿರ್ವೃತಿಯಕ್ಕಂ || ೭ ||

ವ|| ರಾಜಾನುಮತದಿಂ ಸೆಱೆಯೊಳಿರ್ದನ ಸಂಕಲೆ ಪಱಿದೊಡಂ, ಗುರುಮತದಿಂ ಬಂಧ ಹೇತುಗಳ್ ಪಱಿದೊಡಂ ಆ ನಿಗಡಬಂಧಕ್ಕಮೀ ಕರ್ಮಬಂಧಕ್ಕಂ ಮೋಕ್ಷಮ[15]ಕ್ಕುಂ. (ಇದನಱಿದು) ನೀನಾಲಸ್ಯನಾಗದಿರು.

---

(1) ಅಜೀವಂ (ಛ) (2) ದ್ರದಪೆಂಪಂ ಮಚ್ಚ (ಕ,ಚ) ಪೆರ್ಚಂಮಚ್ಚ (ಛ,ಜ) (3) ಮೂಢಜೀವಾ (ಕ,ಜ) ಮೂಢನಾಗಿರ್ದಜೀವಾ (ಘ,ಖ,ಗ) (4) ಗೆಯ್ವೆಯೇಕೆ ನೀಂಮರು (ಕ,ಚ) ಗೆಯ್ವುದೇಕೆ (ಖ,ಗ) (5) ಮೆಂತದು (ಖ,ಘ) (6) ಮಾಶ್ರ (ಖ,ಗ) (7) ಮಂತದಱೊಳಂ (ಕ,ಚ) ಮೆಂದಿವಱೊಳಂ (ಛ,ಜ) (8) ನಾಗದೆ (ಘ) (9) ಕಿಡುಗುಂ (ಘ,ಜ) (10) ತಪ್ಪವರನೀನಿವೃತ್ತಿ (ಛ,ಜ,ಖ)ನಿರ್ವೃತಿ (ಘ) (11) ಆವುದ ಱಿನಾವ (ಕ,ಚ) (12) ನೇತೆಱ (ಕ,ಚ) ನೀತೆಱ (ಛ,ಜ,ಗ) (13) ವಾಗಳ್ (ಕ,ಚ) (14) ನಿವೃತ್ತಿ(ಘ) (15) ಕ್ಕುಮಾಲಸ್ಯನಾಗದಿರ್ (ಕ,ಚ)

ಮ|| ಮತಿ ಬೇರ್ ನೈಗಮಮಾದಿಯಾ[1] ಗಮನಯಂ ಕೊಂಬಸ್ತಿನಾಸ್ತಿ ಪ್ರವಾ |
ಕ್ರತಿಗಳ್ ಶಾಮೆಲೆಗಳ್ ವಿಸೂತ ಲಲಿತಾನೇಕಾನ್ತಮಪ್ಪರ್ಥಸಂ||
ತತಿಗಳ್ ಪುಷ್ಪಫಲಂಗಳಾಗೆ ಸೊಗಯಿ[2] ಪ್ಪುತ್ತುಂಗಪುಣ್ಯಾಂಕುರ |
ಶ್ರುತವೃಕ್ಷಾಗ್ರದೊಳಿರ್ದು ನೀಂ ನಲಿಯವೇಕಿರ್ಪಯ್ [3] ಮನಃಕೋಕಿಲಾ || ೮ ||

ವ|| ಸೊಗಯಿ[4]ಪ ಪಣ್ತ (ಕೊನರ್ತ?) ಮರನನೇಱಿ [5] ಕೋಕಿಲಂ ನಲಿವಂತೆ ಭವ್ಯಮನ ವೆಂಬ [6] ಕೋಕಿಲಂ ಪುಣ್ಯಕ್ಕಾಗರಮಪ್ಪ ಶ್ರುತವೃಕ್ಷದೊಳ್ ನಲಿಯದೇಕಿರ್ಪುದೋ — ಶ್ರುತ ದಿಂದ ಮಱುವಿನ ಸಾಮರ್ಥ್ಯಮೇಂ ಕಿಱಿದೇ ?—

ಕಂ|| ಒಡಲ ಪರಿಗ್ರಹ[7] ದಿರವಂ |
ಕಿಡೆ ನೆಗಲ್ದುಂ ತಿಣ್ಣಮಱಿ[8] ವ ನಂತಪ್ಪಾತಂ ||
ತೊಡರ್ಗುಮೆ ಪಾಪದ ಬಲೆಯೊಳ್ |
ತೊಡರಂ ತೊಡರ್ಗುಂ ವಿನೂತಮುಕ್ತ್ಯಂಗನೆಯೊಳ್ || ೯ ||

ವ|| [9] ಮಣ್ಣೊಳ್ ಮೆತ್ತಿದ ತುಂಬೀಫಲಂ ನೀರೊಳಿಕ್ಕಿದಾಗಳಲ್ದು ಅಡಿಯೊಳಿರ್ದು ಮಣ್ ಕರಗೆ ಮೇಗಲ್ಲದೆ ಕೆಳಗೆನಿಲ್ಲದಂತೆ ಕರ್ಮಬಂಧಸ್ಥನಪ್ಪ ಜೀವಂ ಬಂಧಕಾರಣಂಗಳ್ ಪೋಗೆ ಮೋಕ್ಷದೊಳಲ್ಲದಿರದು ಕರ್ಮಪ್ರಚ್ಛಾದನದಿಂದಱಿಯ[10] ದುದರಿದೆ ?—

ಮ|| [11] ಅಱಿಗುಂ ಕಾಣ್ಗುಮಮೂರ್ತನಾದಿರಹಿತಂ ಸೌಖ್ಯಾಕರಂ ಕರ್ಮಮಂ |
ಪಱಿದಂದೂರ್ಧ್ವಗತಿಸ್ವಭಾವಸಹಿತಂ ದೇಹಪ್ರಮಾಣಂ ದಲೆಂ ||
ದಱಿ ನೀಂ ನಿನ್ನಳವಂ ತಗುಳ್ದು ಮುಳಮಂ [12] ನೀಗೆಂತುಮಿಂ ಮಾಣದಿರ್ |
ತಱಿಸಂದೊಪ್ಪುವ ಚಿತ್ತದಿಂ ಗುಣಗಣಪ್ರಖ್ಯಾತಸದ್ವೃತ್ತದಿಂ || ೧೦ ||

ವ|| [13] ಇಂತು ನಿನ್ನಂದವಂ ನೀಂ ಬಗೆದು ನೋಡಿ ಲೋಹದೊಳ್ ಬೆರೆಸಿದ ಪೊನ್ನಂ [14] ಶೋಧಿಸಿಕೊಳ್ವಂತೆ ಕರ್ಮದೊಳ್ ಬೆರಸಿದ ನಿನ್ನಂ ಶು[15] ದ್ಧಂಮಾಡಿಕೊಳ್ಳದೇಕಿರ್ಪಯ್—

---

(1) ಯಾಗುವ (ಕ,ಚ) (2) ಪ್ಪತ್ಯಂತ (ಘ,ಖ) (3) ಮನೋಮರ್ಕಟಾ (ಖ,ಭ) (4) ಯಪ್ಪಮರನ (ಕ,ಚ) (5) ಕೋಡಗಂ (ಖ,ಘ) (6) ಮರ್ಕಟಂ (ಖ,ಘ) (7) ಭರಮಂ (ಖ,ಗ) (8) ವುತನಗುಳ್ಳಾತಂ (ಕ,ಚ) (9) ವ.ಣ್ಣತ್ತಿದ (ಕ,ಚ) (10) ಯದುಂತಱಿಯದೊ (ಘ,ಖ) (11) ಅಜೀವಂ (ಘ,ಗ) (12) ನೀನೆಂತುಮಿ (ಘ,ಖ,ಗ) (13) ಇಂತಪ್ಪ(ಕ,ಚ) (14) ಸೋದಿಸಿ (ಕ,ಚ) (15) ಶುದ್ಧನೆಂಮಾಡಿ (ಘ)

ಕಂ|| ನಾನಾಪ್ರಕಾರಮ[1] ಪ್ಪೆನಿ |
ತಾನುಂ ಘಾತುಗಳೊಳೇನೊ [2] ಬಿಸುಟಾ ತೊಡರ್ಪಂ ||
ಜ್ಞಾನಮನೆ ಭಾವಿಸುತ್ತಿರೆ |
ನೀನೆಂತುಂ ಪಡೆವಯಲ್ತೆ ಮುಕ್ತಿಸ್ತ್ರಿ(ಶ್ರೀ)ೕಯಂ || ೧೧ ||

ವ|| ಬೇಸಗೆಯೊಳೊಣಗಿದ ಪುಲ್ಲಂ ಕಿರ್ಚು ತಗು[3]ಳ್ದೊಡೊಂದುಗಳಿಗೆಯೊಳಾ ಪುಲ್ಲು ಬೇಯದಿರ್ಕುಮೆ? ಕಾಲಲಬ್ಧಿಯೊಳ್ ಸಮ್ಯಗ್ಜ್ಞಾನಭಾವನೆ ತಗುಳ್ದೊಡಾತನ ಕರ್ಮಂ[4] ಕಿಡದಿರ್ಕುಮೆ ?— ಅದಱಿಂ ನೀಂ ಮಾಣದೆ—

ಮ|| ಮುಳಿಸಂ ಮಾೞ್ಪುದು ಕರ್ಮಬಂಧದೆಡೆಯೊಳ್ ವಿಕ್ರಾಂತದಿಂದಾಗಳುಂ |
ವಿಳಸದ್ಧರ್ಮದ ವೃತ್ತಿಯಲ್ಲಿ ಸತತಂ ಮಾಡಾ[5]ರ್ಪಿನಂ ರಾಗಮುಂ ||
ಮುಳಿಸುಂ ರಾಗಮುಮಿನ್ನವಪ್ಪೆಡೆಗಳೊಳ್ ತಾಮೊಳ್ಳಿಕೆಯ್ದುಂ ಕರಂ |
[6] ಮುಳಿಸಂತಲ್ಲದೊಡಾರ್ಗಮಾವೆಡೆಯೊಳಂ [7] ದುಷ್ಕರ್ಮಮಂ ಕೂಡುಗುಂ || ೧೨ ||

ವ|| ಕೆಯ್ದು ಪಗೆಯನಿಱಿಯಲೊಳ್ಳಿತ್ತು, ತನ್ನನಿಱಿಯಲೊಳ್ಳಿತ್ತೆ? ; ಮುಳಿಸುಂ [8] ಕರ್ಮಕ್ಕೆ ಮುಳಿಯಲೊಳ್ಳಿತ್ತು, ಧರ್ಮಕ್ಕೆ ಮುಳಿಯಲೊಳ್ಳಿತ್ತೆ ? ; ಖಂಡಶರ್ಕರೆ [9] ಪಾಲ್ಗುಡಿಯಲೊಳ್ಳಿತ್ತು, ವಿಷದೊಳ್ ಕುಡಿಯಲೊಳ್ಳಿತ್ತೆ ? ; ರಾಗಂ ಧರ್ಮದೊಳ್ ಕೂಡಿದೊಡೊಳ್ಳಿತ್ತು, ಪಾಪದೊಳ್ ಕೊಡಿದೊಡೊಳ್ಳಿತ್ತೆ ? ; ರಾಗದ್ವೇಷಂಗಳಿಂ[10]ತು ಧರ್ಮಕರ್ಮಂಗೆಳೆಡೆಯೊಳಲ್ಲದುೞಿದಾವೆಡೆಯೊಳಂ ಪೊಲ್ಲವೆಂದದರ್ಕಂಜುವುದು—

ಕಂ|| ಕುತ್ತಂ ಗುಣಮುಳ್ಳವ[11]ರ್ಗಳ |
ನೊತ್ತಿದೊಡವರಂಜರಶುಚಿಯ[12]ಪ್ಪಱಿಯೊಡಲಂ ||
ಪತ್ತಿರ್ಪರವಂ [13]ತೊಱೆಯಲು |
[14]ದಾತ್ತತೆಯಂ ಮೆಱೆಯಲಾದುದೆಂಬುದಱಿಂದಂ || ೧೩ ||

---

(1) ಪ್ಪೆನಿಸಾನುಂ (ಘ,ಖ) (2) ಬಿಸುಟು (ಕ,ಚ) ಬಿಸುಡು (ಘ,ಖ) (3) ಳ್ದೊಡಾಪುಲ್ಲು (ಕ,ಚ) (4) ಕಿಡದೇಕಿರ್ಕುಂ (ಕ,ಚ) (5) ಡಾರ್ಪಿನಿಂ (ಘ,ಖ) ಅಂತು ನೀಂರಾಗ (ಕ,ಚ) (6) ತಿಳಿವುಳ್ಳಂಗುೞಿದಾರ್ಗ (ಕ,ಚ) (7) ದುಃಖಂಗಳಂ (ಘ,ಖ) (8) ಕರ್ಮಕ್ಕಲ್ಲದೆ (ಘ) (9) ಪಾಲೊಲ್ಕೂಡಿದೊಡೊಳ್ಳಿತ್ತು ವಿಷದೊಳ್ಕೂಡಿದೊ (ಕ,ಚ) (10) ಧರ್ಮಪಾಪಂಗಳೊ (ಕ,ಚ) (11) ವರಂಪತ್ತಿದೊ (ಘ,ಖ) (12) ಪ್ಪೊಡಲಂನೀಂ (ಘ,ಖ) (13) ಬಗೆಯಲ್ (ಘ,ಖ) (14) ದತ್ತಾಯಂ ಮರೆಯಲಾದುದೆಡೆಯೆಂಬುದಱಿಂ (ಕ,ಚ) ಮೆರೆಯಲಾಗದೆಳೆಯೆಂಬುದಱಿ (ಘ,ಖ)

ವ|| [1]ಸೆಱೆ[2]ಯೊಳಿರ್ದಾತಂ, ಶಾಪಿನವರಗಲ್ಕೆಯಂ ಮಚ್ಚದಿರ್ಪನೆ ? ಗುಣದೊ[2]ಳ್ ನೆಗೞ್ದಿರ್ದಂ ಮೆಯ್ಯಗಲ್ಕೆಯಂ ಮಚ್ಚದಿರ್ಪನೆ ?—

ಮ|| ಅಱಿವುಳ್ಳಂ ರುಜೆ ಪೆರ್ಚೆ ತೀರ್ಚುಗ[3]ವೊಡದಂ ಮರ್ದಿಂದ(ಗ)ಡಂಗೊತ್ತಿ(ತ್ರ)ದಂ |
ದುಱಿ[3] ಬೇಗಂ ತೊಱೆ[3] ಯೆಂಬು[4]ದಿಂತು ಮನೆಯೊಳ್ ಕಿರ್ಚಿೞ್ದೊಡಾ ಕಿರ್ಚನೇ ||
ತೆಱದಿಂ ಬೇಗಮುಡಂಗಿ[5]ಸಿರ್ಪೊಡದು ತಾಂ ಕೆಯ್ಮಿಕ್ಕೊಡಾ ಗೇಹದಿಂ |
ಪೊಱಮಟ್ಟಾಗಳೆ [6]ಪೋಗದಲ್ಲಿ ಬೞಿಯಂ ಮಾಣ್ದಿರ್ಪುದೇ ಜೀವನೇ || ೧೪ ||

ವ|| ಅಱಿವುಳ್ಳಂ ಕುತ್ತಂ ಕೆಯ್ಮಿಕ್ಕೊಡಾಮೆಯ್ಯಂ ತೊಱೆ[3][7]ಯದೊಡಂ, ಬುದ್ಧಿಯುಳ್ಳಂ ಮನೆಯೊಳ್ ತಗುಳ್ದ ಕಿರ್ಚು ಕೆಯ್ಮಿಕ್ಕೊಡಾ ಮನೆಯಂ ಪೊಱಮಡದೆ ಮಾಣ್ದೊ[8]ಡಂ ಅದೆಲ್ಲಿಯಱಿವು ? ಅದಱನಱಿವುಮಣ್ಮಂ ನೆಗೞ್ತೆ[9]ಯ ನೇೞಿಸುವಂತವೇನಿಲ್ಲದೇ ?—

ಕಂ|| [10]ತಡೆಯದೆ ಜಗತ್ತ್ರಯಂಗಳ |
[11]ನೊಡನೊರ್ಮೊದಲಱಿವ ವಸ್ತು ನೆರೆ(ಱಿ)ಯದಡರ್ಪಿಂ ||
[12]ತೊಡರ್ದತ್ತ ಬಳ್ಳಿ ದಾಂಗುಡಿ |
ವಿಡಿ(ಡು)ವಂತಿರೆ ಮಿಗುವ ಸಕಳ[13]ಬೋಧಿಯನೊಲ್ಲಾ ! || ೧೫ ||

ವ|| ಒಂದು ವರುಷ ಮುದ್ಯೋಗಂಗೆಯ್ಯೆ ಮಱುವರುಷಕ್ಕೆ ಪಟ್ಟಬಂಧಂ ದೊರೆಕೊಳ್ವೊಡಂ, ಒಂದು ಭವದೊಳ್ ರತ್ನತ್ರಯಂಗಳಖಂಡನಾಗೆ ಮಱುಭವಕ್ಕೆ ಕೇವಲಜ್ಞಾನಂ ದೊರೆಕೊಳ್ವೊ[14]ಡಂ ಮತ್ತೆ ಕೆಲವು ವರುಷಕ್ಕೆ ಪಟ್ಟಮಿಲ್ಲದುದಕ್ಕುಂ. ಈತಂಗಾಸನ್ನಭವ್ಯತೆಯಿಲ್ಲದುದಕ್ಕುಂ. (ಇನಿತಱಿಂದಮೆ) ಆಯಿರ್ವರುಮಾಯೆರಡುಮನಿಲ್ಲೆಂದು ಕುಸಿದು ಮಾಣದುಂಟೆಂದುದ್ಯೋಗಂ[15]ಗೆಯ್ವೊಡಂ ಮತ್ತೆ ಕೆಲವುವರ್ಷದಿಂ ಪಟ್ಟಬಂಧಮಪ್ಪೊಡಂ ಕೆಲವುಭವದಿಂ ಮೋಕ್ಷಮ[16]ಪ್ಪೊಡಮೆಂತುಂ ಪೊಲ್ಲದೆ ?

---

(1) ತಗಪಿರ್ದುಂ (ಘ,ಖ,ಗ) (2) ಗುಣಂಗಳೊಳ್ ನೆಗೞ್ದಿರ್ದಾತಂ (ಕ,ಚ) ಗೞ್ದಿರ್ದಂ (ಘ,ಖ) (3) ವೊಡಲಂ (ಛ,ಜ) ತಿರ್ದುವುದದಂ (ಜ) (4) ದೆಂತು (ಕ,ಚ) ದಂತು (ಘ,ಖ) (5) ಸಿರ್ಪುದದುತಾಂ (ಕ,ಚ) (6) ಪೋಪುದಲ್ಲಿ ಬೞಿಯಂ ಮಾಣ್ದಿರ್ಪುದೇ ನೊಳ್ಪಿತೇ (ಕ,ಚ) ಮಾಣದಂತು ಬೞಿಯಂ ತಾನಿರ್ಪುದೇಂ (ಘ,ಜ) (7) ಯದೆ ಮಾಣ್ಗುಮಪ್ಪೊಡಂ (ಕ,ಚ) (8) ಮಾಣ್ದಿರ್ಪೊಡದೆಲ್ಲಿಯಱಿವೆಲ್ಲಿಯ ಬುದ್ಧಿಯೆನಿಸದಿರವುಮಣ್ಮ ನೆಗೞ್ತೆ (ಕ,ಚ) ಬುದ್ಧಿಯೆ ತಿಳಿಯೆನಿಪಂದಱಿವುಂಕೇಳ್ (ಘ,ಜ) (9) ಯುಮನೇ (ನಿ) ಳಿಸುವಂತು (ಕ,ಚ) ನಿಳಿಸುವಂತೆ (ಘ) (10) ಪಡೆಯದ (ಘ,ಗ) (11) ನೊಡರೊಳ್ ಮೊದಲಱಿದುವಸ್ತುನೆರೆಯದೊಡಾರ್ಪಿಂ (ಘ,ಗ,ಖ) (12) ಪೊದೆಟ್ತಿತ್ತ (ತ್ತ) ಬೆಳೆದುದಾಂಗುಡಿ (ಛ,ಜ) (13) ಬೋಧೆ (ಜ) (14) ಡಾವೊಲ್ಲದಿರ್ದೊಡಾತಂಗೆ ಪುಣ್ಯಮಿಲ್ಲದುದಕ್ಕುಮಿತಂಗಾಸನ್ನ (ಕ,ಚ) (15) ಗೆಯ್ಯೆಮತ್ತೆ (ಕ,ಖ) (16) ಪ್ಪೊಡಂಪೊಲ್ಲದೇ (ಚ) ದೆಂತುಂಪೊಲ್ಲಾ ? (ಛ,ಜ) ಮಪ್ಪೊಡದುಪೊಲ್ಲಾ (ಕ)

ಮ|| ಅಱಿವಂ [1]ತಾಳ್ದಿ ಪರಿಗ್ರಹದ್ವಿತಯಮಂ ನೀಂ [2]ತೂಳ್ದಿ ಚಾರಿತ್ರದೊಳ್ |
ನೆಱೆದಂತೀ ತನು ಮುಕ್ತಿಹೇತು ಗುಣದಿಂ ಗೆಂಟಾಗಿ ಸಂಸಾರದ ||
ತ್ರೈಱಗಿರ್ದಂದದು ಬಂಧಹೇತು ವದಱಿಂದೀ ಮೆಯ್ಯೊಳೆಂತಾಗಿಯುಂ |
ನಿಱಿಸೊಳ್ಪಂ ಕಿಡಿಸುಗ್ರ[3]ಕರ್ಮರಿಪುವಂ ಮಾಣ್ದಿರ್ಪುದೇ ಜೀವನೇ || ೧೬ ||

ವ|| ಸೆಂಡಾ[4]ಡುವವರ ಗೆಲ್ಲ ಸೋಲಕ್ಕೆ ತೋರಣಂ ಗುಱಿಯಪ್ಪಂತೆ [5]ಅಱಿವಂ ಕೊಂಡವರ ಗೆಲ್ಲ ಸೋಲಕ್ಕೆ ಮನುಷ್ಯಭವಂ ಗುಱಿಯಪ್ಪುದದಱಿಂದವರ್ ತೋರಣಮಂ ಪೊರ್ದಿದಾಗಳುಟಿದು ನೇಱುವುದು. ಈ ಮನುಷ್ಯಂಭವಮಂ ಪೊರ್ದಿದಾಗಳಱಿದು ತೊಱೆ(ವು)ದು ನೆಗಳ್ವುದು—

ಕಂ|| [6]ಮುನ್ನೆಂದುಂ ಭಾವಿಸದುದ |
ನಿನ್ನಾಂ ಭಾವಿಸುವೆ[7]ನೆನ್ನ ಭಾವನೆಯೊಳ್ ತಾಂ ||
ಮುನ್ನಂ ನಿಂದುದ ಭಾವಿಸೆನೆಂ |
ಬುನ್ನತ ಭಾವನೆಯೆ ಮುಕ್ತಿಯಂ ಸಾಧಿಸುಗುಂ || ೧೭ ||

ವ|| ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಮುನ್ನೆಂದುಂ ಭಾವಿ[8]ಸದುದಱಿಂ ಸಂಸಾರದೊಳ[9]ಗಿರ್ಪುದೆ ಪೇೞ್ಗಂ. ಅವನಿಂ ಭಾವಿಸು. ಮಿಥ್ಯಾ[10]ತ್ವ ಕಷಾಯಯೋಗಂ[11]ಗಳಂ ಭಾವಿಸುತಿರ್ಪುದು ನಿನಗೆ ಮೋಕ್ಷಮಾಗದಿ[12]ರವಂ ಪೇೞ್ಗಂ. ಅವನಿಂ ಭಾವಿಸದಿರು. ನಿನಗಿಂತಪ್ಪ [13]ಸಾಧನೆಯುಳ್ಳೊಡೆ ಮುಕ್ತಿಯಂ [14]ಸಾಧಿಸುವುದರಿದೆ ?

ಮ|| ನೆರೆಪಲ್ವೇೞ್ಕುಮೆ ತಿಣ್ಣಮರ್ಥಚಯಮಂ ತೀಕ್ಷ್ಣಾಯುಧಂ ಬೇೞ್ಕುಮೇ |
ಕರಿಗಳ್ ಬೇೞ್ಕುಮೆ ವಾಜಿ ಬೇೞ್ಕುಮೆ ಪದಾತಿವ್ಯೂಹಮೇಂ ಬೇೞ್ಕುಮೇ ||
ಮುರುಳೇ ಕೆಮ್ಮನಿದೇಕೆ ಬೆರ್ಚಿ ತಡೆವೈ ನಿನ್ನಿಂದಮೇಂ ತೀರದೇ |
ಪರಿಣಾಮಂ ಶುಭಮಾದೊಡೊಂದೆ ಮಳಮಂ ಕೇಡೆಯ್ದಿಸಲ್ ಸಾಲದೇ || ೧೮ ||

ವ|| ಮಹಾರಾಜಪುರುಷಂಗೆ ಚಕ್ರಂ ಪುಟ್ಟಿದೊಡೆ ಅಱಿವುಳ್ಳಂಗೆ ಬೋಧಿ ಪುಟ್ಟಿದೊಡೆ ಅತಂಗೆ ಪಗೆಯಂ ಗೆಲ್ವುದುಮೀತಂಗೆ ಕರ್ಮಮುಂ ಗೆಲ್ವುದುಮರಿದೇ ?—

---

(1) ತಾಳ್ದು (ಕ, ಚ) (2) ತೊಳ್ದು (ಕ, ಚ) (3) ಕರ್ಮದ ತಗುಳ್ಪಂ ಮಾಣದಿರ್ ಜೀವನೇ (ಕ, ಚ) (4) ಡುವಂಗೆ (ಕ) (5) ತನುವಂ ಕೊಂಡವರ್ಗೆ ಜ್ಞಾನಮೇ ಗುಱಿಯಪ್ಪುದು ಸೆಂಡಾಡುವವರ್ ತೋರಣಮಂ ಪೊರ್ದಿದಾಗಳ್‌ಗೆಲ್ದರ್ (ಕ, ಚ) ತನುವಿಡಿದವರೀಗೆಲಱಿವಂ ಮುಟ್ಟಿದಂದುಗೆಲ್ದರದಱಿಂ ಮನುಷ್ಯಭವಂ (6) ಮುನ್ನಂ ಭಾವಿಸದಿರ್ದುದನಿನ್ನುಂ(ಘ, ಖ) (7) ನನ್ನಭಾನಿಸಿದುದ ನಿನ್ನೊಳಗಂ ಭಾವಿಸುವೆನೆಂಬುನ್ನತ (ಕ, ಚ) ವೆನೆಂಬ ಭಾವನೆಯುಮನಾ ನಿನ್ನೊಳುನಾಂ (ಘ, ಖ) ನಿನ್ನುಮಣಂ ಭಾವಿ (ಛ) ಭಾವನೆಯೊಳ್‌ತಾಂ ಮುನ್ನಂ ನಿಂದುದ (ಗ, ಜ) (8) ಸದುದಂ (ವಂ) (ಕ, ಚ) (9) ಳಿರ್ದುದೆ (ಕ) (10) ತ್ವಾಸಂಯಮ ಕಷಾಯ (ಛ, ಜ) (11) ಗಳನಾವಗಂ (ಕ, ಚ) (12) ರವೆ (ಕ, ಖ) (13) ಭಾವನೆ (ಕ) (14) ಭಾವಿಸುವು (ಚ)

ಕಂ|| ಎನ್ನೆವರಂ ಬಿಸುಡು[1]ವುವೊಳ |
ವನ್ನೆವರಂ ಬಿಸುಡದಿರ್ದು ತವೆ ಬಿಸುಟೀ ೨ ||
ತ್ಪನ್ನ [2]ನಿವೃತ್ತಿಗೆ ನೆಲಸಿದೊ |
ಡಿನ್ನವು ತಪಮಾಗೆ ನಿನ್ನ ಬಯಸುವ ಮೋಕ್ಷಂ || ೧೯ ||

ವ|| ಮನ್ನಮ[3]ಶುಭಕರ್ಮಬಂಧ[4]ಕಾರಣಂಗಳುಮಂ ಬಿಡುತ್ತುಂ ಬಂದು ಬಱಿಯಂ ಶುಭಕರ್ಮಬಂಧಕಾರಣಂಗಳುಮಂ ಬಿಸುಡುತ್ತುಂ ಬಂದಿನ್ನುಂ ನಿವೃತ್ತಿಯು[5]ವಿಲ್ಲದಂದು ಮೋಕ್ಷಮಿಲ್ಲ. ಮತ್ತಮಿನಿಸಾನುಮೇಕಚಿತ್ತದಿಂ [6]ಕೇಳಿಲೆ ಜೀವಾ,

ಉ|| ಪೊಲ್ಲ[7]ವಿದೊಳ್ಳಿತೆಂಬೆರಡಱಿಂ ದುರಿತಂ ಸುಕೃತಂ [8]ತಗುಳ್ಗುಮಂ |
ತಲ್ಲಿಯೆ ದುಃಖಮುಂ ಸುಖಮುಮುಪ್ಪುದಱಿಂದವು ಮೂಱುಭಾಗ[9]ಮುಂ ||
ತೆಲ್ಲವಱಾಗಿ ನಿ[10]ಶ್ಚಯಿಸಿದಂತದೊ[11]ಳಱ್ತಗ ನಪ್ಪುದಾಗಿಯುಂ |
ಮೆಲ್ಲನೆ ತದ್ವಿಭಾಗಮುಮನೊಪ್ಪಿರೆ ಪಿಂಗಿಸು ಮುಕ್ತಿ ಕೂಡುಗುಂ || ೨೦ ||

ವ || ಅಧಿಕಾರಸೂತ್ರದಂತಾ[12]ಗಿರ್ದೀವೃತ್ತದರ್ಥಮಂ ವ್ಯಾಖ್ಯಾನ[13]ವಿಶೇಷದಿಂದಲ್ಲದಱಿಯಲಾಗದೆಂತೆನೆ :— [14]ಪೊಲ್ಲವಪ್ಪ ನೆಗಱ್ತಿಯಿಂ ದುಷ್ಕರ್ಮ ಬಂಧಮಕ್ಕುಂ, ಆ ಕರ್ಮಬಂಧದಿಂ ದುಃಖಮಕ್ಕುಂ. ಅಂತಾ ಮೊದಲಭಾಗಂ ಮೂಱುಂ[15]ತೆಱಂ, ಇನ್ನೊಳ್ಳಿತಪ್ಪ ನೆಗಱ್ತಿಯಿಂ ಪುಣ್ಯಬಂಧ[16]ಮಕ್ಕುಂ. ಆ ಪುಣ್ಯಬಂಧದಿಂ ಸುಖಮಕ್ಕುಂ. ಅಂತೆರಡನೆಯ ಭಾಗಮುಂ ಮೂಱುಂತೆಱಂ. ಆ ಮೊದಲ ಮೂಱುಭಾಗಮುಮಂ ತನ್ನೊಳಾಗಲೀಯದೆರಡನೆಯ ಮೂಱು ಭಾಗಕ್ಕಿಚ್ಚೈಸಿ ನೆಗಱ್ದು ತುದಿ[17]ಯೊಳಿರ್ಪ್ಪಗಳ್ ಕಾಲೊಳ್ ಕರ್ಬೊನ್ನ ಸಂಕಲೆಯನಿಕ್ಕಿ[18]ದೊಡಂ, ಪೊನ್ನ ಸಂಕಲೆಯನಿಕ್ಕಿದೊಡಂ ಸೆಱೆ[19]ಯಿರ್ಪುದುಂಟಪ್ಪೊಡೆ – (ಶುಭಾಶುಭರೂಪಮಪ್ಪ ದುಷ್ಕೃತಸುಕೃತಂಗಳೆರಡುಂ ಬಂಧಮಿರ್ಪುದುಂಟಪ್ಪೊಡೆ) ಈ ಎರಡರ [20]ತೊಡರ್ಪುಮಂ ಕಳೆವುದದು ಮೋಕ್ಷಂ—

---

(1) ವುದೊಳ....ಬಿಸುಡುತಿರ್ದು ತವೆ ಬಿಸುಡವೊಡಂ (ಕ, ಚ) (2) ನಿವೃತ್ತನಿವೃತ್ತಿಗಳಿಂ ನೆನಸಿದೊಡಮವೆನಿನ್ನ (ಕ, ಚ) ನಿರ್ವೃತಿಗೆನೆಲಸಿದೊ (ಛ, ಘ) (3) ಮಶುಭ ಪರಿಣಾಮಕರ್ಮ (ಕ, ಚ) (4) ಹೇತು ಕಾರಣಮಪ್ಪಂತಾಗಿ (ಛ, ಛ) ಬಿಸುಟು ತಪಂಬಡುತುಂಬಂದೀಬಱಿ (ಕ, ಚ) (5) ಮಿಲ್ಲ ನಿವೃತ್ತಿಯುಮಿಲ್ಲೆನಿಸಿದೊಡಮವೆ ಮೋಕ್ಷಮಕ್ಕುಮಿನಿ (ಕ, ಚ) ಮೋಕ್ಷಮಲ್ತು (ಛ) ಮೋಕ್ಷಮಿಲ್ಲ (ಖ, ಗ) (6) ಕೇಳಿಂ (ಖ, ಗ) (7) ದಿದೊಳ್ಳಿ (ಛ) (8) ತಂಗಳುಮಂ (ಚ) (9) ಮಂತೆಲ್ಲವರಾದಿ (ಗಿ) (ಖ, ಗ) (10) ಶ್ಚಯಿಸದಂತ್ಯ (ಚ) (11) ಳತ್ತಿರ್ಗಿ (ಕ, ಚ) (12) ಗಿರ್ದುದೀ (ಛ) (13) ವಿಷಯದಿಂ (ಛ) (14) ಪೊಲ್ಲದುವಪ್ಪ (ಕ) (15) ತೆರ ನಿನ್ನೊಳಿಂತಪ್ಪ (ಕ, ಚ) (16) ಮಕ್ಕುಮದಱಿಂ (ಖ, ಗ) (17) ಯೊಳಿರ್ಪ್ಪಗಳ್ (ಕ, ಚ) (18) ದೊಡೇಂ (ಕ, ಚ) (19) ಸೆರೆಯೊಳಿರ್ಪು (ಕ, ಚ) (20) ತೊಡರಂ (ಖ, ಗ)

ಕಂ|| [1]ತನ್ನಂ ತನ್ನಿಂದಘಿಮ್ಮ |
ಭಿನ್ನಂ [2]ಮಾಡುವುದು ನೋಲ್ಪು[3]ದಾತ್ಮನ ತೇಜನಂ ||
ತನ್ನೊಳ್ ಭಾವಿಸಿ [4]ತಿಳಿದುೞಿ |
ತನ್ನಂದಮ[5]ನೆಯ್ದಿದಲ್ಲಿ ತೊಡರ್ಗುಮೆ ಜೀವಾ || ೨೧ ||

ವ|| [6]ಅಂತು ಸಕಲಕರ್ಮಕ್ಷಯಮಂ ಮಾಡ[7]ಲುಂ ಮುಕ್ತಿಯೊಳ್ ಕೂಡಲುಂ ನೆರೆದಬೋಧಿಯೆಂಬನರ್ಘಮಹಾರತ್ನಂ[8]ಸಂಸಾರಿಜೀವಕ್ಕೆ ಕರಂ ದುರ್ಲಭಂ. ಸ್ಥಾಣುಸ್ಖಳನ (ಸ್ಥಾಣಾನಿಖನನ?) ಅಂಧನಿಧಿಲಾಭ ದೃಷ್ಟಾಂತ[9]ನ್ಯಾಯದಿಂ ಕರನುರಿದದೞಿಂದಮಲ್ಲದೆ ತಡೆಯಲಾಗ[10]ದದೆಂತೆಂದೊಡೆ :—

ಉ|| ಸ್ಥಾವರದಿಂ ತ್ರಸಪ್ರಕರಮಾ ತ್ರಸದಿಂ ಸ(ವಿ)ಕಳೇಂದ್ರಿಯತ್ವದಿಂ |
ಭಾವಿಸಿ ನೋಡೆ ಮತ್ತೆ ಸಕಳೇಂದ್ರಿಯ[11]ದಿಂ ಬೞಿ ಸಂಜ್ಞಿ ಸಂಜ್ಞಿಯಿಂ ||
ದೀ ವರಮಾನುಷತ್ವಮದೞೊಳ್ [12]ಕುಲ ದೇಶ ಸುರೂಪ ಸತ್ವ ಸ |
ತ್ಸೇವನೆ ಸೇವೆಯಿಂ ವಿಮಳಬೋಧಿಯೆ ದುರ್ಲಭಮಿಂತು ಜೀವನೆ || ೨೨ ||

ವ|| [13]ಈ ಸಂಸಾರಮೆಂಬ ಮಹಾಸಮುದ್ರದೊಳಗೆ ಕರಮಗಾಧಮಪ್ಪೆಡೆ[14]ಯೊಳಲ್ದಿರ್ದನನ್ತಾನನ್ತಮಪ್ಪ ಸ್ಥಾವರ ಜಾತಿಯೊಳ[15]ಗಣಿಂ (ಭವಂ ಪಡೆವುದರಿದು). ಪೊಱಮಟ್ಟು ತ್ರಸಮಾಗಿ ಪುಟ್ಟುವುದು ಕರಮರಿದು. ಆ ತ್ರಸಜಾತಿಯೊಳಗಣಿಂ [16]ಸಮವಾಯದಿಂ ಪೊಱಮಟ್ಟು (ವಿಕಳೇಂದ್ರಿಯವಾಗಿ ಪುಟ್ಟುವುದು ಕರಮರಿದು ಆ ವಿಕಳೇಂದ್ರಿಯದಿಂ) [17]ಸಕಳೇಂದ್ರಿಯವಾಗಿ ಪುಟ್ಟುವುದು ಕರಮಾಶ್ಚರ್ಯಂ. ಆಸಕಳೇಂದ್ರಿಯದೊಳಂ ಸಂಜ್ಞಿಜೀವಿಗಳಾಗಿ ಪುಟ್ಟುವುದು ಕರಮರಿದು. ಆ ಸಂಜ್ಞಿ ಜೀವಿಗಳೊಳಗಣಿಂ ಬಂದು ಮನುಷ್ಯಭವಮಂ ಪಡೆವುದರಿದು. ಮನುಷ್ಯಭವಂ ಬಡೆದುಂ ಧರ್ಮಕ್ಷೇತ್ರಂಬಡೆವೊಡರಿದು, ಧರ್ಮಕ್ಷೇತ್ರಂ ಬಡೆದುಂ ಕುಲಂಬಡೆವುದರಿದು. [ಕುಲಂಬಡೆದೊಡಂ ಸದ್ದೇಶಮಂ ಪಡೆವುದರಿದು ಸದ್ದೇಶಮಂ ಪಡೆದೊಡಂ] ರೂಪಂಬಡೆವುದರಿದು ; ರೂಪುವಡೆದುಂ ಸತ್ತ್ವಂಬಡೆವುದರಿದು, ಸತ್ವಂಬಡೆದುಂ ಕರಂ ಬುಧಸೇವೆವಡೆವುದರಿದು, ಬುಧಸೇವೆವಡೆದುಂ ಬೋಧಿಯೆಂಬನರ್ಘಮಹಾರತ್ನಮಂ ಪಡೆವುದರಿದು. [18]ಇಂತಪ್ಪುದನೆಂತಾನುಂ ಪಡೆದುಂ ಕಿಡಿಸುವರಾರಂ [19]ಪೋಲ್ವರೆಂಬಾ :—

(1) ತನ್ನಿಂ (ಕ,ಚ) (2) ಮಾಡೂದು (ಛ) (3) ದಾಪ್ತನ (ಖ,ಗ) ನೊಪ್ಪುವಾತ್ಮನ (ಗ) (4) ತಿಳಿದಿರೆ (ಕ,ಚ) (5) ನೆಯ್ದುದಲ್ಲಿ (ಘ) ನೆಯ್ದುದಲಸಿ (ಖ,ಗ) (6) ಇನ್ನು (ಕ,ಚ) (7) ಲುಂ ನೆರೆದ ಬೋಧಿ (ಘ,ಛ) (8) ಸಂಸಾರ (ಕ,ಚ) (9) ಜ್ಞಾನದಿಂ (ಘ) (10) ದ ದೆಂತೆನೆ (ಕ,ಚ) (11) ದಿಂದಮೆ ಸಂಜ್ಞಿಯಿಂ| ದೀ (ಕ, ಚ) ಸಂಜ್ಞಿಯೆಂಬೀವರ (ಛ, ಜ) (12) ಕುಲಮೊಳ್ಕುಲ ದೋಷದ ರೂಪುಸತ್ವತತ್ಸೇವನೆ (ಛ, ಝ) (13) ಈ ಸಂಭವದ(ಖ,ಝ) (14) ಯೊಳಿರ್ದ(ಖ,ಗ) (15) ಗಣಿಂ ಪೊಱಮಟ್ಟು(ಕ,ಚ) (16)ಮರಿದಾಸಂಜ್ಞಿಜೀವಂತ್ರಸ (ಛ,ಝ) (17) ವಿಕಳೇಂದ್ರಿಯ ಜೀವಿಯಾಗಿ ಪುಟ್ಟುವುದುಕರಮರಿದು ವಿಕಳೇಂದ್ರಿಯದೊಳಂ ಸಕಳೇಂದ್ರಿಯವಾಗಿ ಪುಟ್ಟುವುದುಕರಮರಿದು (ಕ, ಚ) ಸಂಜ್ಞಿಜೀವಿಯಾಗಿ (ಘ, ಝ) (18) ಇಂತಪ್ಪ ಬೋಧಿಯನೆಂತಾನುಂ ಪಡೆದುಮದಂ ಕಿಡಿಸು (ಕ,ಚ) (19) ಪೋಲ್ವರೆಂದೊಡೆ

ಕಂ|| ಪಲ[1] ಕಾಲಮಾಗರಂಗಳೊ |
ಳಲಸದೆ ನಮೆ[2]ದಗುಱ್ದು ಪಡೆದ ಪ್ರಾಣಿ[illegible] ||
[3] ಜಲನಿಧಿಯೊಳಿಕ್ಕಿ ಕಿಡಿಸುವ |
ವೊಲಲಘುಗುಣ ಪ್ರಣುತ ಬೋಧಿಯಂ ಕಿಡಿಸುವವರ್ || ೨೩ ||

ವ|| ಎಂತಾನುಂ ಪಡೆದ [4]ಬೋಧಿರತ್ನಮಂ ಆರಾನುಂ ಕಿಡಿಸಿದರಪ್ಪೊಡೆ ಮಗುೞ್ಚಿ ಪಡೆ[5]ಯಲಾಗದು ಗಡಿಂ—

ಚಂ|| ಪಡುವಣ ವಾರ್ಧಿಯಲ್ಲಿ ನೊಗ[6]ನಂ ಕಱಯುಂ ಗಡ ಮೂಡಣಬ್ಧಿಯ |
ಲ್ಲಿಡಿಕಿದೊಡೊಯ್ಯನಾ ನೊಗದೊಳಾ ಕಱ ಮುನ್ನೆ [7]ತಗುಳ್ದು ಛಿದ್ರದೊಂ ||
ದೆಡೆಯೊಳೆ ಮತ್ತೆ ಬಂದು ಘಟಿಯಿಪ್ಪೊಡೆ ತಾಂ ಘಟಿಯಿಕ್ಕುಮೊರ್ವೆ ಕೆ |
ಟ್ಟೊಡೆ ಬೞಕೆಲ್ಲಿಯುಂ ಪಡೆಯಬಾರದು [8]ನೆಟ್ಟನೆ ಬೋಧಿರತ್ನಮಂ || ೨೪ ||

ವ|| ಪಿರಿದಪ್ಪಡವಿಯಂ ಕಳೆದುಪೋಗಲ್ ಬಗೆವಾತಂ ಬ[9]ಲ್ನೆರೆವು ದೊರೆಕೊಂಡೊಡೆ ಕೂಡಿಪೋಗ (ಲೊಲ್ಲ) ದಿರ್ದೊಡಂ, ಸಂಸಾರಮುಂ [10]ಕಳೆವಾತಂ ಬೋಧಿ ದೊರೆ[11]ಕೊಂಡೊಡ ಘಮಂ ಕಿಡೆ ನೆಗೞದೊಡಂ[12] ಆತನಾ ಪೇರಡವಿಯುಮಂ ಈತನೀ ಸಂಸಾರಮುಂ ಕಳೆಯಲಾಱಂ—

ಕಂ|| ಅದಱಿಂ [13]ತಪಮಂ ಗೆಯ್ವುದು |
ವಿದಿತ ಮಹಾಬೋಧಿ ರತ್ನಮಂ ಪಡೆದು ಬೞ ||
ಕ್ಕದು ಮುಕ್ತಿ ಶ್ರೀ[14]ವಧುವೊಳ್ |
ಪುದುವಾೞಲ್ ತಾನೆ [15]ಕೂಡಲಾರ್ಕುಮಮೋಘಂ || ೨೫ ||

ವ|| ಇಂತಪ್ಪ [16]ಬೋಧಿರತ್ನಮಂ ಪಡೆದು ಬೇಗಂ ತಱಸಂದ ಮಹಾಪುರುಷರ [17]ಕಥೆಯನಪ್ಪೊಡಂ ಮುಂ ಕೇಳದೊಡವಿಂ ಕೇಳಿಂ—ಅದೆಂತೆನೆ—

---

(1) ದೆವಸ (ಕ,ಚ) (2) ದಗಲ್ದು (ಕ,ಚ) (3) ಜಲಧಿಯೊಳಗಿಕ್ಕಿಕಿಡಿಸದ (ಖ,ಗ) ವವೋಽಅಲಂಘ್ಯನಿಬೋಧಭೋಧಿಯಂ ಕಿಡಿಸುವವರ್ (4) ಬೋಧಿಯಂ (ಘ) (5) ಯಲ್ಬಾರದದಂತೆನೆ (ಜ) ಪಡೆಯಲಾಗದೆಂತೆನೆ (ಕ,ಚ) ಲಾಗದುಗಡಾ (ಖ) (6) ನುಂಕಳೆಯುಂ (ಚ) (7) ತಗುಳ್ದದಿ ನಿಂದೊಂದೆಡೆಯೊಳೆ (ಕ,ಚ) ತಗುಳ್ದ ಚಿನ್ನಿಂದೊಂದೆಡೆ (ಚ) (8) ನಿರ್ಮಳ (ಖ) (9) ನೆರಂ (ಕ) (10) ಕಳೆವೆನೆಂಬ ಬಗೆಯುಳ್ಳಾತಂ (ಕ) (11) ಕೊಂಡೊಡವಂ ಕಿಡಿಸಿದೊಡಂ ಅತ (ಖ,ಘ) (12) ಈತನೀಸಂ ಬೋಧಿಯಂ ಕಡೆಯಲಾಱಂ (ಘ) (13) ಪಯ್ತಂಗೆಯ್ವುದು (ಕ,ಚ) ಪಯ್ಯಂಗೆಯ್ವುದು (ಛ) ತಪಮಂ ಕೈಕೊಂಡುದಿತ (ಘ,ಖ) (14) ವಧುವಿನ (ಕ,ಘ) ರಮೆಯೊಳ್ (ಚ) (15) ಮಾಡಲಾರ್ಕು (ಕ,ಚ) (16) ಬೋಧಿಯೆಂ (ಖ,ಗ) (17) ಕಥೆಯುಂ ಕೇಳ ದೊಡಿಂ ಕೇಳಿಂ (ಕ,ಚ)

## — ನಿದರ್ಶನ ಕಥೆ —

### ( ಧನ್ಯಕುಮಾರ ಚರಿತೆ)

ಕಂ|| ಶ್ರೀನಾರೀಯುತಮಪ್ಪು |
ಜ್ಜೈನಿಯೊಳಭಿನೂತವೈಶ್ಯಕುಲದೊಳಗೆ ಮಹಾ ||
ಸ್ಥಾನದಿನಭಿಮಾನದಿ [1] ನತಿ |
ದಾನದಿನೆಸೆದಂ ಪ್ರಸಿದ್ಧಗುಣಿ(ಣ)ಧನಪಾಳಂ || ೨೬ ||

ವ|| ಆತನ [2] ಸೆಟ್ಟಿತಿ ಪ್ರಭಾವತಿಯೆಂಬೊಳ್. ಆಯಿರ್ವರ್ಗಮೆಣ್ಬರ್ ಗಂಡುಗೂಸುಗಳಾದೊ[3]ಡವರ್ಗುತ್ಸಾಹ ಕಾರ್ಯಂಗಳ್ಗಂ [4]ದಾನ ಸನ್ಮಾನಾದಿಗಳಿನರ್ಥಂ ತವಿಪ್ಪೊಡಂ ಮನಮಿಕ್ಕದೆ ಮಕ್ಕಳಂ ದಾರಿದ್ರ್ಯಂಗೆಯ್ಸಿ ಬಾಱುತ್ತುಮಿರೆ ಪ್ರಭಾವತಿಯೊಂದುದಿವಸಂ [5]ತಲೆನೀರ್ಮಿಂದು ಧನಪಾಲಸೆಟ್ಟಿಯೊಡನೆ [6]ನಿದ್ರಾವಶಗತೆಯಾಗಿ ಮಲಂಗಿರ್ದು ಶುಭಸ್ವಪ್ನಂಗಳಂ [7]ಕಂಡೊಸೆದಱಿವುಳ್ಳರಂ ಬೆಸಗೊಂಡೊಡೆ ನಿನಗೆ ಸ್ವರ್ಗದಿಂ ಬಂದು ಪುಟ್ಟುವನೊರ್ವಂ ಸುಪುತ್ರನಂ ಪಡೆವೆಯೆಂ[8]ದೊಡೊಸೆದಿರ್ದು ಕೆಲವುದಿವಸದಿಂ ಗರ್ಭಮಾಗಿ ನವಮಾಸಂ ನೆಱೆಯೆ ಮಗನಂ ಪೆತ್ತಾಗಳಾ ಕೂಸಿಂಗೆ ಜಾತಕರ್ಮನಾಮಕರ್ಮಂಗಳೊಸಗೆಗಳಂ ಮಾಡಿ—

ಉ|| ಈತನ ಗರ್ಭ[9]ದಿಂ ಬಱಿಯಮೆಯ್ದೆ ಧನೋದ್ಭವಮಾದುದೆಂಬ(ದ)ತಿ |
ಪ್ರೀತಿಯೆ ಧನ್ಯ(ಧಾನ್ಯ)ನೆಂಬ ಪೆಸರಾಗೆ ಸುಖಂ ಬಳೆದಕ್ಷರಾದಿ ವಿ ||
ಖ್ಯಾತ ಕಳಾಗಮಂಗಳನಚಿಂತಿತಸಂಚಿತ [10]ಪುಣ್ಯರಾಶಿ ಸ |
ನ್ನೂತನರೇಂದ್ರಪುತ್ರ[11]ರೊಡಗಲ್ತತಿಗರ್ವಿತನಾದನುನ್ನತಂ || ೨೭ ||

ವ|| ಅಂತು ಸಕಳವಿದ್ಯಾವಿರಾಜಿತನುಂ, ರಾಜಪೂಜಿತನು[12]ಮಾಗೆ ತಾಯ್ಗೆ ಧನ್ಯಕುಮಾರನ ಮೇಗತಿಸ್ನೇಹಮುಂ ಮೋಹಮುಂ ತಿಣ್ಣಮಾಗೆ ನಿತ್ಯ(ಚ್ಚ)ಮಾತನ [13]ಬೀಯಮಂ ಸಲಿಸಿ ಕೊಂಡಾಡುವುದರ್ಕಣ್ಣಂಗಳ್ ಎಮ್ಮುಮ್ಮಳ್ಪುದೆಲ್ಲಮಂ ನಿನ್ನ ಕಿಱಿಯ ಮಗನ ಬೀಯಕ್ಕೆ ಕೊಟ್ಟೆಮ್ಮಂ [14]ಕಿಡಿಸಿದಪ್ಪೆ ಯೆಂದಬ್ಬೆಯಂ ನಿಚ್ಚ[15]ನಿಚ್ಚಮುನಿವಂಗೆಯ್ಯೆ ಧನ್ಯಕುಮಾರನಂ ತಾಯ್ ಕರೆದಿಂತೆಂದಳ್.

---

(1) ನುತ (ಕ,ಚ) (2) ಪೆಂಡಿತಿ (ಕ,ಚ) (3) ಡವರುತ್ಸಾಹ ಕಾರ್ಯಕ್ಕಂ (ಕ,ಚ) (4) ದಾನಧರ್ಮಂಗಳಂ ಬೀಯಂಗೆಯ್ದರ್ಥಮೆಲ್ಲಂ ತಪ್ಪೊಡೆ (ಕ,ಚ) (5) ರಜಸ್ವಲೆಯಾಗಿ ಮಿಂದು ಬಂದು (ಕ, ಚ) ಚತುರ್ಥಸ್ನಾನಂಮಾಡಿ ಮಿಂದು ಬಂದು (ಖ,ಗ) (6) ಭೋಗಾಸಕ್ತಚಿತ್ತೆಯಾಗಿ ಸುರತಾವಸಾನದೊಳ್ ನಿದ್ರಾ (ಕ,ಚ) (7) ಕಂಡೊಸೆದೆೞ್ದು ತನ್ನ ಸೆಟ್ಟಿಗೆ ಪೇೞ್ದೊಡೆ ಸೆಟ್ಟಿಯೆಂದಂ ನಿನಗೆ ಸ್ವರ್ಗದಿಂ (ಕ,ಚ) (8) ದೊಡೆರಾಗಿಸಿರ್ದು (ಕ,ಚ) ಸಂತೋಷದಿರ್ದು (ಛ,ಝ) (9) ದಿಂದಮೆಧಾನ್ಯೋದ್ಭವ ಮಾಗುತೆ ಬಂದು (ಕ) ದಿಂಬಳಿಯಮುತ್ಸವ ಮಾಗುತೆ ಬಂದುದೆಂಬ (ಛ,ಝ) ದಿಂಬಱಿಕೆ ಪೆರ್ಚಿಧನೋದ್ಭವಮಾಗುತೆ (ಖ,ಗ) (10) ಪುಣ್ಯಭಾಗಿ (ಕ,ಚ) ಪುಣ್ಯವಿನೂತನಾಗಿ ಸ| ನ್ನೂತ (ಛ,ಖ) (11) ರೊಡಸಿರ್ದತಿ (ಛ,ಖ) (12) ಮಾಗಿ ಬಳೆಯುತ್ತುಮಿರೆ ಧಾನ್ಯ (ಕ,ಚ) (13) ಬೀಯಂಗಳಂ ಸಲಿಸಿಕೊಂಡಾಡುವುದು ಮಾತನುಂಡಾಡುವುದಮಂ ಕಂಡೆಣ್ಬರಣ್ಣಂಗಳುಮೆಮ್ಮಂ ಪಡೆದುದೆಲ್ಲಮಂ ನಿನ್ನಕಿಱಿಯ (ಕ,ಚ) (14) ಕಿಡಿಸಿದಿರೆಂ (ಕ,ಚ) (15) ನಿಚ್ಚಮುಳಿವಂಗೆಯ್ಯುತ್ತುಮಿರೆ (ಕ,ಚ) ಮನಿವರಂಗೆಯುತ್ತು (ಛ) ಮನಿಪ್ಪಂಗೆಯ್ಯೆ (ಖ,ಗ)

ಕಂ|| ಪರದರ ಮಗನತಿ[1] ಮದದಿಂ |
ಪರಮುಱದಿರೆ ಧನದ ಬರವುಮೊಲ್ದಿಪ್ಪನುನೋ ||
ಹರಮುಂ [2]ಸುಖಕರಮುಂ ಕುಲ |
ಭರಮ್ಮುಂ[3] ತಾವಿಂತಿವೆಲ್ಲಮೆಂತುಟು ಬರ್ಕುಂ || ೨೮ ||

ವ|| "ಕೆಮ್ಮಗಿರಲಾ[4]ಗದು, ಪಿಡಿ ಪರದುಗೆಯ್" ಎಂದು ನೂಱು[5]ಗದ್ಯಾಣಂ ಪೊನ್ನಂ ಕೊಟ್ಟೊಡೆ ಕೊಂಡು [6]"ಪರದುಗೆಯ್ವುದೆಂತು?" ಎಡೊಡೆ "ಒಂದಂಕೊಟ್ಟೊಂದಂ ಕೊಳ್ವುದು" ಎಂದೊಡೆ "ಅಂತೆಗೆಯ್ವೆಂ" ಎಂದಂ[7]ಗಡಿಯ ಬೀದಿಯತ್ತಲ್ ಬಂದು ಸವಿ(ವು)ದೆಯ ಭಂಡಿಯಂ ಮಾಱುವುದಂ ಕಂಡಾ ಪೊನ್ನೆಲ್ಲಮಂ ಕೊಟ್ಟಾ ಸವಿದೆಯ ಭಂಡಿಯಂ ಕೊಂಡಾ ಭಂಡಿಯಂ ಕೊಟ್ಟೊಂದು ತಗರಂ ಕೊಂಡದರ ಪಿಡಿ[8]ದಿರ್ಪನಂ ಒರ್ವಪೊಲೆ[9]ಯನೊಂದು ಮಂಚದೆಕ್ಕೆ[10]ಯಂ ಕೊಂಡು ಬರುತ್ತಿರೆ ಕಂಡಾ ತಗರಂ ಕೊಟ್ಟಾಮಂಚದೆಕ್ಕೆಯಂ ಕೊಂಡು ಪಗಲಾದಾಗಳ್ ಪಸಿದು ಮನೆಗೆ ವರೆ ಪೊಕ್ಕು ಪರದುಗೆಯ್ದು[11] ಮಗಂ ಬಂದನೆಂದವನಬ್ಬೆ—

ಕಂ|| ರಂಗವಲಿಯಿಕ್ಕಿ ತೋರಣ |
ಮುಂಗುಡಿಯುಮನೊಪ್ಪೆ ಕಟ್ಟಿ ಪಸೆವಾಸಿ ಮಹಾ ||
ಮಂಗಳಕಳಶದಿನಿದಿರ್ಗೊಂ |
ಡಂಗಡಿಯಿಂ ಬರ್ಪ ಸುತನನೊಸೆದಭಿನುತನಂ || ೨೯ ||

ವ|| ಪಸೆಯ ಮೇಲೆ ಕುಳ್ಳಿರಿಸಿ [12]ಪರಸಿ ಸೇಸೆಯನಿಕ್ಕಿ ಮನ್ನಿಸಿ ಕುಳ್ಳಿರಿಸುವುದಂ ಕಂಡಣ್ಣಂಗಳೆಣ್ಬರಾವುಮೊಂದಕ್ಕೆ ನೂಱು[13]ಪಡೆದೊಡಂ ಬಗೆವಳಲ್ಲೀತಂ ನೂಱುಗದ್ಯಾಣಮಂ ಕೊಟ್ಟು ಒಂದು [14]ಕೋಳದ ಮಂಚದೆಕ್ಕೆಯಂ ಕೊಂಡು ಬಂದೊಡಿನಿತೊಸಗೆಯಂ ಮಾಡಿದಳ್ "ತಾಯ್ ಕೂತೆರ್ಪಡೇಗೆಯ್ಯಳ್" ಎಂದು ತಮ್ಮೊಳನಿಬರುಂ ನುಡಿಯುತ್ತಿರೆ ತಾಯಾತನ ತಂದ ಮಂಚದೆಕ್ಕೆಯಂ ಮಣ್ ಪತ್ತಿತ್ತೆಂದದನೊರಸಿ [15]ಕರ್ಚಿದೊಡಲ್ಲಿಯಮರ್ಚಿದ [16]ಬಂಧಂ ಸಡಿಲ್ದು ಬಿಟ್ಟಾಗಳ್—

(1) ಮುದದಿಂ (ಛ,ಜ) (2) ಶುಭಕರಮುಂ (ಕ,ಚ) (3) ಸುಖದಿರವುಮೆಂತು ಬರ್ಕುಂಮಗನೇ (ಕ,ಚ) (4) ಗದುಪರದುಗೆಯ್ ಪಿಡಿ (ಕ,ಚ) (5) ಪೊನ್ನಂ (ಛ,ಝ) (6) ಎಂತುಪರದುಗೆಯ್ವೆನಬ್ಬಾ (ಕ,ಚ) (7) ಗಡಿಯತ್ತಲ್ (ಕ,ಚ) (8) ದಿರ್ಪನ್ನೆಗಂ (ಕ,ಚ) (9) ಯಂಮಂಚ (ಕ,ಚ) (10) ಯಂ ಪಿಡಿದು ಬರುತ್ತಿರೆ (ಕ) (11) ಮಗಂ ಪಡೆದು ಬಂದಪ್ಪನೆಂದು (ಕ,ಚ) (12) ಪರಸಿಸೇಸೆಯಾನಿಕ್ಕಿ ಮನ್ನಿಸುವುದಂ (ಕ) (13) ಪಡೆದು ಬಂದೊಡಮೆಂದುಂ ಬಾಜಿತ್ತು (ತೆ) ಗೆಯ್ಯುಳೀತಂ (ಕ) (14) ಒಂದು ಮಂಚದ ಕೋಳದ ಎಕ್ಕೆಯಂ ಕೊಂಡು ಬಂದೊಡಿನಿತೊಸಗೆಯಂ (ಕ, ಚ) ಕೊಟ್ಟುಸುಳ್ಳಿಯ ಬಂತಿಯಂ ಕೊಂಡದಂಕೊಟ್ಟು ತಗರಂಕೊಂಡದಂ ಕೊಟ್ಟೊರ್ವಂಪೊಲೆಯನ ಕೆಯ್ಯೊಳಿರ್ದ ಕೋಳದ ಮಂಚದೆಕ್ಕೆಯಂ (ಘ,ಛ) (15) ತೊಳೆದೊಡೆ (ಖ,ಗ) (16) ಬಂಧ ಮಱಿಯಲ್‌ಕೀಲ್‌ಸಡಿಲ್ದುರ್ಚಿ ಕಳಲ್ದಾಗಳ್ (ಕ,ಚ)

ಮ|| ಬೆಲೆಯಿಲ್ಲೆಂಬನಿತಗ್ಗಳಿಕ್ಕೆಯ ಮಹಾರತ್ನಂಗಳಾ[1]ಗಳ್ ಕರಂ |
ಪಲವುಂ ತೊಟ್ಟನೆ ಕೂಟಿಪತ್ರಸಹಿತಂ ಬಂದೊಕ್ಕುವಂ ಕಂಡು ನಿ ||
ರ್ಮಲಚಿತ್ತಂಗೆ ಮಗಂಗೆ ತೋಱಿದೊಡವಂ ಕಂಡೆಂಗುಮಾ! ಬುದ್ಧಿ[2]ಯೋ |
[3]ಬಲಮೋ! ಕ್ಲೇಶಮನೂನಪುಣ್ಯಮೆ ಗಡೀ ದ್ರವ್ಯಂಗಳಂ ಮಾಡುಗುಂ || ೩೦ ||

ವ|| ಎಂದು ಮತ್ತ ಮಿಂತೆಂದಂ—

ಕಂ|| ಆನೆತ್ತಲ್ ಮಾ[4]ಱಿತ್ತೆನ |
ಗೀ ಸುತಸದ್ವಸ್ತುವೆಂತು ಸಮನಿಸಿದುವು [5]ಮ ||
ತ್ತೀನೋ ಪೇೞನಾವಂ ತಾಂ |
ಮಾನಿತಪುಣ್ಯೋದಯಂ ಪ್ರಧಾನಂ ನಿಯತಂ || ೩೧ ||

ವ|| ಎಂದಾ ಕೂಟಿಪತ್ರಮಂ ಬಾಚಿಸಿ[6]ದೊಡೆ "ಇಂತಪ್ಪ ಮನೆಯಾತ ನಿಂತಪ್ಪ ಕುಲದಾತ [7]ನಿಂತಪ್ಪ ಪೆಸರಾತನನಿನಿತುರತ್ನಂಗಳಿವು ಮನೆಯೊ[8]ಳಿಂತಪ್ಪ ವಸ್ತುಗಳಿರ್ದುವು" ಎಂದು ಬರೆದಿ[9]ರ್ದುದಱಿಂದದೆಂತಪ್ಪೊಡಾ ಮನೆಯೊಳೆಲ್ಲಂ ಮಾರಿ ಪೊಕ್ಕು ಸತ್ತರ್. ಈ ಮಂಚದೊಳಾತನ ಪೆಣನನೊಯ್ದು [10]ದಹಿಸುವಲ್ಲಿ ಬಿಸುಟುದಂ ಪೊಲೆಯರದಂ ಪರ್ಚಿಕೊಂಡಲ್ಲಿ ಯವಂಗಿದು ಬಂದುದು. ಅಂತು ನಮಗೆ ಸಮನಿಸಿದ ಪುಣ್ಯಂ ಎಂದು ಒಸೆದಿರ್ದಂ. ನಾಮಂತಪ್ಪೊಡಾ ಮನೆಯನರಸರ ದೆಸೆಯಿಂ ಮಾಱುಗೊಳ್ವಮೆಂದು ಕೆಲವಾನುಂದೆವಸದಿನರಮನೆಗೆ ಪೋಗಿಯರಸಂಗೆ ಬಿನ್ನಪಂಗೆಯ್ದಾ ಮನೆಯ ಬೇಡಿದೊಡೆ "ಮಾರೀಪೊಕ್ಕು ಸಾಯೆ ಪಾೞಾದ ಮನೆ ಬೇಡ [11]ಪೆಱತಂ ಬೇಡಿಕೊಳ್ಳಿ"ಮೆಂದೊಡಾ ಧನ್ಯಕುಮಾರನಿಂತೆಂದು ಪೇೞ್ಗುಂ—

---

(1) ಗಳ್ ತೆಱಂ। ಬೋಳೆದುಂತೊಟ್ಟನೆ (ಖ,ಗ) (2) ಯಿಂಬಲದಿಂ। ಕ್ಲೇಶದಿನಿಲ್ಲ ಪುಣ್ಯಮೆ (ಖ,ಘ) (3) ಚಲಮೋ (ಛ,ಜ) (4) ರೇನೆನಗೀನೂತನ ಸುವಸ್ತುಗಳಿವೆಂತುಸವನಿಪುದಿದು (ಕ, ಚ) ಪೀವಸ್ತುಗಳು ಮಿಂತು। ತಾನದುಪೆಱತಾವುದೊ ಪೇೞ್। ಮಾನಿತ (ಛ,ಜ) (5) ಮತ್ತೇನಿಂಪೆಱದಾವೊಂಗಂ (ಛ) (6) ನೋಡಿ ಯಿಂತಪ್ಪ (ಛ) (7) ನಿಂತೆಂಬನಾತನ (ಕ,ಚ) (8) ಳಿಂತೆಪ್ಪೆಡೆಯೊಳಿಂತಪ್ಪವಸ್ತು (ಕ,ಚ) (9) ರ್ದುದಂಕಂಡು ನೋಡಿ ಯಱಿದನಪ್ಪಡಾಪರದನ ಮನೆಯೊಳ್ ಮಾರಿಪೊಕ್ಕೆಲ್ಲರ್ಸತ್ತೊಡೆ ಮಂಚದೊಳಾತನ (ಕ, ಚ) (10) ಸಂಸ್ಕರಿಸುವಲ್ಲಿ (ಘ) ದಹಿಸುವಲ್ಲಿ ಯಿಾಮಂಚಮನೀಡಾಡಿದೊಡೆ ಪೊಲೆಯರದಂ ಪರ್ಚುಗೊಂಡಲ್ಲಿ ಯವಂಗೆ ಮಂಚದೆಕ್ಕೆ ಬಂದುದನ್ತು ನಮಗೆ ಸಮನಿಸಿತೆಂದೊಸೆದಿರ್ದ (ಕ,ಚ) (11) ಪೆರತೊಂದುಮನೆಯಂ ಬೇಡಿಕೊಳ್ಳಿಮೆಂದೊಡಾ ಧಾನ್ಯಕುಮಾರನಿಂತೆಂದಂ (ಕ,ಚ)

ಕಂ|| ಸಾರಿ ಪೇೞದಲ್ಲು ಮೃತ್ಯುವೆ |
ಬಾರಿ[1] ಪರಾರ್ ಮೃತ್ಯು[2] ವಡಸುವಂದೇತಱೊಳಂ ||
ಮಾಱಿಗವಿದಿರ್ಚಿಸಿಂದು |
ಗ್ರಾರಿಗವೇ[3] ಕಂಜುವರ್ ನರರ್ ಧರಣಿಪತೀ || ೩೨ ||

ವ||ಎನೆ "ಮಹಾಪುರುಷನೀತ" ನೆಂದರಸಂ ಮಚ್ಚಿಯಾ ಮನೆಯಂ ಕೊಟ್ಟೊಡೆ ಮನೆಯಂ ಪಡೆದು ಶುಭದಿನದೊಳಾ ಮನೆಯಂ ಪೊಕ್ಕು ಧನ್ಯಕುಮಾರಂ ಧನಕನಕಸಮೃದ್ಧನಾಗಿ [4]ಪೊೞಲ್ಗ ಮರಮನೆಗಂ ಪ್ರಭುವಾ[5]ಗಿರ್ದಂ—

ಉ|| ಆ ಪೊೞಲೊಳ್ ವ[6]ಣಿಗ್ಜನ ಮಹಾಪ್ರಭುವೊರ್ವ[7]ನುದಾತ್ತಚಿತ್ತಕಂ ||
ಶ್ರೀ ಪದನಾಗಿ ಮಿಕ್ಕ ಜನಮಾನ್ಯದ [8]ಧನ್ಯನ ಪುಣ್ಯದೊಳ್ಪಮಂ ||
ರೂಪಿನ ಚೆಲ್ವುಮಂ ಮನದ ಪೆಂಪುಮನೊಳ್ಪಿತು [9]ಮಚ್ಚಿ ನೋಡಿ ವಿ |
ಖ್ಯಾಪಿತೆಯಪ್ಪ ತನ್ನ ಸುತೆಯಂ ಸುತೆಯಂ ಕುಡವೊಂದು ಬು[10]ದ್ಧಿಯಂ || ೩೩ ||

ವ|| ಬಗೆದು ಧನ್ಯಕುಮಾರನ ತಂದೆಯಲ್ಲಿಗಟ್ಟಿದೊ[11]ಡೊಡಗೊಂಡುಯ್ದು ತನ್ನಿಂ ಪಿರಿಯರಿರ್ದಂತೆ ಕಿಱಿಯರ್ಗೆ ಮುನ್ನೆ ಮದುವೆಯಂ ಮಾಡಲಾಗದು, ಪಿರಿಯಂಗೀವುದೆಂ ದಟ್ಟಿದೊಡೆ ಎಂದಿರ್ದೊಡಮಾತಂಗಲ್ಲದೆ ಕುಡೆನೆಂದಿರ್ದಂ. ಪ್ರಭುಗಳುಮರಸರುಂ ಮನದೆ ಕೊಂಡಾಡುವು[12]ದುಮಂ ಕಂಡಣ್ಣಂಗಳೆಲ್ಲಂ ಮುಳಿದು (ಆತನಂ) ಕೊಲಲ್ ಬಗೆದು ಪುಸಿ ಗೂ[13]ರ್ವೆಯೊಳಿರ್ದೊಂದುದೆವಸಂ ಎಂದರ್. " ಬಾ ನಾಮಾ[14]ಬಾವಿಯೊಳ್ ಜಲಕ್ರೀಡೆಯಾ ಡುವಂ " ಎಂದೊಡಗೊಂಡೊಯ್ದಾತನಂ ಬೊಡ್ಡಣದ ಬಾವಿ[15]ಯೊಳಗೆ ಪುಗುವಂತೆಗೆಯ್ದು ದರಿಯಂ ಮೆಟ್ಟಿರ್ದು ಆತನ ಪೆಱಗಣಿಂ ಬಂದು ತೊಟ್ಟನೆ ನೂಂಕಿ ಕಲ್ಲೊಳಮುದಂ [16]ಮರ ದೊಳಂ ಪೂೞಲ್ ಬಗೆವನ್ನೆಗಂ—

---

(1) ಪರಾಮೃತ್ಯು (ಕ) (2) ವಡಸಿದಂದದಱಿಂದಂ (ಕ, ಚ) ವಡಸಿಬಂದುದಱಿಂದಂ (ಖ, ಗ) (3) ಕಂಜುವನ್ನರಾರ್ (ಖ,ಗ) ಗ್ರಾರಿಕಮೇಕಂಜು (ಕ) (4) ಪೊೞಲ್ಲಂಮನೆಗಂ (ಕ) (5) ಗಿರ್ಪನ್ನೆಗಂ (ಕ) (6) ವಣಿಗ್ವರ (ಛ,ಜ) ವಣಿಕ್ಪತಿ (ಘ) (7) ನುದಾರವೃತ್ತಿಯಿಂ (ಕ,ಚ) ನುದಾರಧೀಯಶಶ್ರೀಪತಿ (ಘ,ಜ) (8) ಧಾನ್ಯನ (ಕ,ಚ) (9) ಮಾಡಿಮಚ್ಚಿ (ಘ) (10) ಯಿಂ (ಕ, ಗ) (11) ದೊಡಾತನಿಂಪಿರಿ....ರಿಯಾತಂಗೆ ....ರಿಯಾತಂಗೆಕುಡುವುದೆಂದಟ್ಟಿ....ಮಾಕಿರಿಯಾತಂಗಲ್ಲದೆ (ಕ, ಚ) (12) ವುದಕ್ಕಮಣ್ಣಂಗ (ಕ, ಚ) (13) ಗೂರ್ಮೆಯೊಳ್ಕಲವುದೆವಸಂ ಮೇಳಿಸಿರ್ದೊಂದು (ಕ,ಚ) (14) ಬನದೊಳಗಣಕೊಳದೊಳ್....ವಂಬಾ ಎಂದೊಡಗೊಂಡುಪೋಗಿ (ಕ,ಚ) (15) ಯೊಳೆಲ್ಲಂ ಪಾಯ್ವಂತೆ ಪಾಯ್ದುದರಿಯ ಮೆಟ್ಟಿರ್ದಾತನಂ ಪೆಱಗಣಿಂ ಬಂದೊರ್ವಂ ತೊಟ್ಟನೆ (16) ಮರದೊಳಂ ಪೂೞಲ್ ಬಗೆದಾಗಳಾ ಕುಮಾರಂ (ಕ,ಚ)

ಕಂ|| ತುಂಬಿದ ಬೊಡ್ಡಣವಾವಿಯು |
ತೂಂಬಂ ತುಡವರಿಸಿ ಕಂಡದ[1]ಕಳೆದಲ್ಲಿಂ ||
ದಂ ಬೇಗಂ ಪೊಱಮಡೆ ಕಂ |
ಡೇಂ ಬಲ್ಲಿತ್ತೊ ಪುಣ್ಯಮೆಂದು ವನದೇವತೆಗಳ್ || ೩೪ ||

ವ|| ಅಂತು[2]ಪೊಗೞ[3] ತಮ್ಮಂಣಂಗ[3]ಳಿಂತು ನೆಗೞ[3] ತನ್ನೊಳೆ ಬಗೆದು[4]ನೋಡುತ್ತಿರ್ದ್ದು, ಪೆಱ್ಪಟ್ಟಾನಿಲ್ಲಿರ್ದೊಡಿ(ತ)ವರೆನ್ನನೆಂತುಂ ಕೊಲ್ವುದುಮಾಂ ದುರ್ಗತಿಗೆ ಸಲ್ವುದುಮಪೋಘ ಮಕ್ಕು ಮಿನಿತಂ ಮಾಡೆನೆಂದಾಗಳೆ ಕಪ್ಪಡಮು ಸೀಱುಟ್ಟು[5]ಪೊೞಲನಂದಗಲ್ದೊರ್ವನೆ ಪಯಣಂ ಬೋಗು[6]ತ್ತುಂ ಪಸಿದು ಬೞಲ್ದು ನಿಂದು ಬಟ್ಟೆಯ ಕೆಲದೊಳುೞುತ್ತಿರ್ದೊರ್ಕ್ಕಲಿಗನಂ[7]ಕಂಡೆಲ್ಲಸುಂ ಬಲ್ಲೆ ನೀ ವಿದ್ಯೆಯನಱಿಯೆನೆಂದು ನಿಂದು ನೋಡುತ್ತಿರೆ ಕುಮಾರನ[8]ನೊಕ್ಕಲಿಗಂ ನೋಡಿ ಕಂ[9]ಡಿನಿತು ತೇಜಮಾರ್ಗಮಿಲ್ಲೀತಂ ಪ್ರಭುವಿನ[10]ಮಗನಾಗಲೆವೇೞ್ಕುಂ. [11]ಪಸಿದು ಬೞಲ್ದು ಪೋದಪ್ಪನೆಂದು ನೇ[12]ಗಿಲಂ ನಿಲಿಸಿ ಬಂದು "ನೀಮಿಂದೆನಗೆ ಬಿರ್ದಿನರಾಗಿ"ಮೆಂದು ಭರಂಗೆಯ್ದೊಡ ಗೊಂಡೊ[13]ಯ್ದು ನೇಗಿಲ ಸಾರೆ ವರ್ಪುದುಂ ಪಾಸಿಯುಣಲೆಲೆಯಂ ತಂದಪ್ಪೆನೆಂದಲ್ಲಿರಿಸಿ ಪೋದನ್ನೆಗಂ ಧನ್ಯಕುಮಾರಂ ಉೞ್ತು ನೋೞ್ಪೆನೆಂದು ಮೇೞಿಯಂ ಪಿಡಿದು—

ಕಂ|| ಪಿಡಿ[14]ದೊತ್ತಿ ಪೊಡೆಯೆ ನೇಗಿಲ್ |
ನಡೆ ಮೊನೆಯೊಳ್ ನೆಗೆದ ಕಳಶಮುಂ ಕಂಡಿಂತ ||
ಪ್ಪೊಡಮೆ[15]ಯುಮನೊಲ್ಲದಾಂ ಬಿಸು |
ಟಡವಿಗೆ ಬರೆ ಬರ್ಕುಮೆನ್ನ ಬೞಿಯನೆ ಮತ್ತಂ || ೩೫ ||

ವ|| ಇದು ಪುಣ್ಯದೇವತೆಯ [16]ಗೊಡ್ಡಾಟಮಕ್ಕುಂ. ಆದೊಡೇನಿದನೀ ಯೊಕ್ಕಲಿಗಂಗೆ ಮಾಡುವೆಂ ನಾಂ ಕೊ(ಕ)ಂಡು ಕೊಟ್ಟೊಡೆ ಶಂಕಿಸುಗುಮೆಂದದನಱಿಯದಂತುೞುತ್ತಿರೆ "ಬನ್ನಿ ಮೆಲೆಯಂ ತಂದೆ" [17]ಎಂದು ಕರೆಯುತ್ತಿರೆ ಬಂದು ಕುಳ್ಳಿರೆ ಪೂಲ್ವ ಕರಗದ ನೀರಂ [18]ತಂದು ಕಾಲ್ಗಂ ಕೆಯ್ಗಮೆಱೆದು ಎಲೆಯಂ ಪಾಸಿ ಕಲಸುಗೂೞಂ ಬಡಿ[19]ಸಿದೊಡುಂಡು ರಾಜಗೃಹದ ಬಟ್ಟೆ[20]ಯಂ ಬೆಸಗೊಂಡಾ ಧನ್ಯಕುಮಾರಂ ಪೋಪಾಗಳೊಕ್ಕಲಿಗಂ ಮಿಕ್ಕಿರ್ದುದಂ ತಾನುಂಡು ಮತ್ತಮುೞುತ್ತಿರ್ದಾಗಳಾ ಕಲಶಮಂ ಕಂಡು ಬೆಕ್ಕಸಂ[21]ಬಟ್ಟಗುಮಪ್ಪೊಡಾತನುೞುವಲ್ಲಿ ನೆಗೆದುದಾತಂಗಪ್ಪುದೆಂದೆೞ್ತಂ ನಿಲಿಸಿ ಬೇಗಮಾತನ ಪಿಂದನೆ ಪರಿದೆಯ್ದಿ ಪೋಗಿ[22]"ನಿಲ್ಲಿ"ಮೆಂದು ಇಂತೆಂದಂ—

---

(1) ತಳೆದಲ್ಲಿಂ (ಘ,ಖ) (2) ಪೊಗಳುತ್ತುಮಿರೆ (ಕ,ಚ) (3) ಳಂತು (ಘ) (4) ನೋಡಿ (ಕ,ಚ) (5) ೞಲಿಂದಗಲ್ದು (ಘ) ೞಲಿಂದಂ ಪೊಱಮಟ್ಟು ಬೇಗಮೊರ್ವನೆ (ಛ) (6) ಗುತುಂಬೞಲ್ದುನಿಂದು (ಕ,ಚ). (7) ಕಂಡೆಲ್ಲಾ ವಿದ್ಯೆಗಳುಮಂ (ಕ,ಚ) (8) ನೊಕ್ಕಲಮಗಂ ಕಂಡಿಂತಪ್ಪ (ಛ) (9) ಡಿನ್ನವುತೇಜ (ಛ) ಅಂತ ಪ್ಪತೇಜ ಖ) (10) ಮಗನಕ್ಕುಂ(ಖ,ಗ) (11) ಪಯಣಂ ಬೋಗುತ್ತುಂ ಪಸಿದು ಬಳಲ್ವನಿಂದವನೆಂದು (ಕ, ಚ) (12) ಗಿಲನಂತೆನಿರಿಸಿ (ಕ,ಚ) (13) ಯ್ದು ನೇಗಿಲಸಾಲಿ (೦) ರ್ಪುದುಂಪಾಸಿಯುಣ (ಕ,ಚ) ನೇಗಲಸಾರೆಯಿ ರ್ಪುದುಂ (ಖ, ಗ) (14) ದೆತ್ತಿ (ಕ, ಚ) (15) ಮೆಗಳನೊಲ್ಲ (ಛ) (16) ಗೊಡ್ಡಮಕ್ಕುಂ (ಛ,ಖ) (17) ಎಂದು ಕುಳ್ಳಿರಿಸಿ ಪೂಲ್ದಿರ್ದಕರಗದ (ಕ,ಚ) (18) ತೆಗೆದು (19) ಸಿದೊಡಪೂರ್ವಮಾದುದೆಂದರ್ಥಿ (ಱ್ತ್ರಿ) ಯೊಳುಂಡು (ಕ,ಚ) (20) ಯಾವುದೆಂದು (ಕ,ಚ) (21) ಬಟ್ಟೇಕಲಶಮಪ್ಪೊಡಾತನುಳ್ಳಸಾತೊಳ್ ನೆಗೆದು ತೋರಿದುದಾತನ ಪುಣ್ಯದಿಂದಾದುದಾತಂಗಪ್ಪುದೆಂದೆತ್ತಂ ನಿಲಿಸಿ (ಕ,ಚ) ಬಿಗಡುಗೊಂಡು ತನ್ನೊಳೆಂದ ನೀತನುಳ್ತ (ಛ,ಖ) (22) ನಿಲಿಸಿ ಮತ್ತಿಂತೆಂದಂ (ಛ,ಖ)

ಕಂ|| [1]ನಿನ್ನುಱ್ತ ಸಾಲೊಳೊಗೆದುದು |
ಪೊನ್ನೊಳ್ ತೀವಿರ್ದ ಕಳಶಮದನಾಂ ಕೊಂಡಂ ||
[2]ದೆನ್ನೊಳ್ಪು ಕಿಡುಗುಮೊಲ್ಲೆಂ |
ನಿನ್ನೊಡಮೆಯನೇಕೆ ಕೊಂಡು ಪೋಗದೆ ಪೋಪೈ || ೩೬ ||

ವ|| ಎಂಬುದುಂ ಧನ್ಯಕುಮಾರಂ ಕೇ"ಳ್ದಿದೇಂ ಚೋದ್ಯಮೋ ಪೇಱಿಂ"ದು ತಲೆಯಂ [3]ತೂಗುತ್ತುಂ ತಕ್ಕನು[4]ಮಿಂತೊಳ್ಪಿನೊಳ್ ಮಿಕ್ಕನುಮಾವನುಮಿಲ್ಲೆಂದಿಂತೆಂದಂ—

ಉ|| ನಿನ್ನದು ನೇಗಿಲೆತ್ತುಗಳುಮಪ್ಪೊಡೆ ನಿನ್ನವು ನಿನ್ನ ಕೆಯ್ಯ ಬೆಸಂ |
ನಿನ್ನದು ಬಟ್ಟೆವೋಪೆನಗೆ ಬರ್ಕುಮೊ [5]ಮಾಱನೊಳಾದುದಲ್ತು ಮ ||
ತ್ತೆನ್ನ ಕುಲಕ್ರಮಾಗತಮುಮಲ್ತು ನರೇಶ್ವರನಿತ್ತುದಲ್ತು ಪೇ |
ೞನ್ನಿದನೆಂತುಕೊಳ್ವರಭಿಮಾನ ಮಹೋನ್ನತ ಚಿತ್ತವೃತ್ತಿಗಳ್ || ೩೭ ||

ವ|| ಎಂದೊಡೊಕ್ಕಲಿಗಂ ಮಹಾ[6]ಪುರುಷನಂತಾಗಲೇವೇಱ್ಕು[7]ಮೆಂದು ಮತ್ತಮಿಂತೆಂದಂ—

ಕಂ|| ಎಲ್ಲಾ ಕಾಲಮುಮೆಮ್ಮವ |
ರೆಲ್ಲರುಮೀ ಕೆಯ್ಯನಾಳ್ವರಾನೆಂದುಂ ಮ ||
ತ್ತಿಲ್ಲಿಯೆ ಬೆಸಕೆಯ್ವೆಂ ಸೈ |
ಪಿಲ್ಲದುದಱ [8]ನೆಮಗೆ ತೋಱದಿನಿತುಂ ಕಾಲಂ || ೩೮ ||

ವ|| "ನೀಂ ಮಹಾ[9]ಪುರುಷನಯ್, ನೀಂ ಬಂದು ನೇಗಿಲಂ ಪಿಡಿದಾಗಳೆ ಪೊನ್ನ ಕಲಶಂ ತೋಱಿದುದು. ನಿನ್ನ ಸೈಪಿನೊಳ್ ಕಂಡುದು ನಿನ್ನೊಡಮೆ"ಯೆನೆ ಧನ್ಯಕುಮಾರಂ ಒಕ್ಕಲಿಗನ ಮನದ ಪೆಂಪಂ ಮೆಚ್ಚಿ ತಾನದನೆಂತುಮಾತಂಗೆ ಮಾಡುವ [10]ಬಗೆಯೊಳಿಂತೆಂದಂ—

ಚಂ|| ಎನಗೊದವಿರ್ದ ಪುಣ್ಯದ ಮಹತ್ತ್ವ(ಹಾತ್ಮ್ಯ)ದಿ ನೆಲ್ಲಿಗೆ ಪೋದೆನಪ್ಪೊಡ |
ಧನಮದು ತಾನೆ[11]ಬರ್ಕುಮದಱಿಂದರಿ[12]ದಲ್ತೆನಗೊಲ್ಲೆ[13]ನೆನ್ನ ಕಂ ||
ಡನಿತಱನೆನ್ನದೆಂಬ ಬಗೆಯಿಂ ನುಡಿದಪ್ಪೆಯವೆ[14]ನ್ನದಾದೊಡಂ |
ನಿನಗಿದನಿತ್ತೆ ನೀಂ ನುಡಿಯದಿರ್ ಪೆಱವಂ ಸುಖದಿಂದನಾಳದಂ || ೩೯ ||

---

(1) ನೀನುಳ್ತ (ಕ,ಚ) (2) ದೆನ್ನೊಪ್ಪು, (ಚ) (3) ತೂಗಿ ಸಂತೋಷಮಾಗಿ....ಮಾವನೆಂದಿಂತೆಂದಂ (ಕ,ಚ) (4) ಮಿತನಿಂದೊಳ್ಪಿನಿಂ (ಕ,ಚ) (5) ಮಾರಿ (ಕ) ಮಾತಿನೊ (ಚ) (6) ಪುರುಷನವಚನಮಿಂತಾ (ಕ,ಚ) (7) ಮೆಂದು ಮನದೊಳ್ ಬಗೆದು (ಕ, ಚ) (8) ನೆನಗೆ (9) ಪುಣ್ಯವಂತನೆಯಿಂದು ನೇಗಿಲಂ (ಕ,ಚ) (10) ಮನಮೊಳಿಂತೆಂದಂ (ಘ,ಖ) (11) ಬರ್ಪುದವೆ (ಕ,ಚ) (12) ದಿಕ್ಲೆನ (ಛ,ಖ) (13) ನಾಕಂಡನೀಡನಿ (ಛ,ಖ) (14) ದೆನ್ನರಾದಡಂ (ಕ)

ವ|| [1]ಎಂದಿತ್ತೆನೆಂದು ನುಡಿದುದಱಿಂ 'ನಿಂತಾದೊಡಕ್ಕುಮೆನ್ನಂ ಬೆಸಕೆಯ್ಸಿಕೊಳ್ವುದಂ ಮಱೆಯದಿರಿ'ಮೆಂದೊಕ್ಕಲಿಗಂ ಮಗುೞ್ದು ಬಂದಾ ಕಲಶಮಂ ಕೊಂಡು ಮನೆಗೆ ಪೋದ ನಿತ್ತಲ್ ಧನ್ಯಕಮಾರನು[2]ಮಂತೆ ಬರುತ್ತುಂ ಒಂದೆಡೆಯೊಳ್ ದಿವ್ಯಜ್ಞಾನಿಗಳಪ್ಪ ಮಹರ್ಷಿಯರಂ ಕಂಡು[3]ಪೊಡೆವಟ್ಟು ಮುಂದೆ ಕುಳ್ಳಿರ್ದು "ಭಟಾರಾ, ಬೆಸಸಿಂ, ಎನಗೆಮ್ಮಂಣಗಳೇಕೆಮುಳಿದು ಕೊಲ್ವನಿತಂ ಬಗೆದರೆ" ನೆ ಭಟಾರರೆಂದರ್ "ಮುನ್ನಂ ಪೋದ ಭವಾಂತರದ ಮುಳಿಸೆ"ಂದೊಡೆ ಆದೆಂತಾಯ್ತೆನೆ ಪೇೞ್ದರ್—

ಭೋಗವತಿಯೆಂಬೂರೊಳ್ ಕಾಮವೃಷ್ಟಿಯೆಂಬಗಾವುಂಡಂಗಂ ಇಷ್ಟದಾನಿಯೆಂಬ ಗಾವುಂಡಿಗಂ [4]ಅಕೃತಪುಣ್ಯನೆಂಬ ಮಗಂ ಪುಟ್ಟಲೊಡಂ—

ಕಂ|| ತಂದೆ ಮೊ[5]ದಲಾದ ಪಲಬರು |
ಮೊಂದಿದ [6]ನಂಟರ್ಕಳೞಿಯೆ [7]ಸೈಪೞಿದರ್ಥಂ ||
ನಿಂದು ಕುಡುವನಿತುಮಿಲ್ಲೆಂ |
ಬೊಂದೆಡಱಡಸಿದೊಡೆ ಮಗನುಮಬ್ಬೆಯುಮುೞಿದರ್ || ೪೦ ||

ವ|| ಅಂತವರಿರ್ವರುಮುೞಿಯೆ ತಮ್ಮವರೆಲ್ಲರುಂ [8]ಕೞಿದಲ್ಲಿಯ ಸೈಪೞಿಯಲುವಾದ ದುಃಖಮಂ. ತಿಣ್ಣಮಾದ ಬಡತನಮುಮೊಂದೊಂದಂ ಕೆಯ್ಮಿಕ್ಕಡಸೆ ಮಗನಂ ಕೆಲಸಂಗೆಯ್ಸಿ ಬಸಿರಂ ಪೊರೆದು ಬಾೞುತ್ತಿರೆ ಒಂದುದೆವಸಂ ಮಗಂ ತಡೆದನೆಂದು ತಾಯೞುತ್ತಿರೆ ಮಗಂ ಬಂದು 'ಏಕೞ್ತಪಿರೆ'ನೆ "ನಿನ್ನ. ಕಾಣದೞ್ತಪೆನೇಕೆ ತಡದೆ" ಯೆನೆ "ಅ(ಸು)ಕೃತಪುಣ್ಯಾಂ ಬನದೊಳ್ ಬೆಸಕೆಯ್ಯುತ್ತಿರ್ದು ತಡೆದೆನೆಂದೊಡೆ ಯಬ್ಬೆಎಂದಳ್ "ಎಮ್ಮ ಭಂಟಂಗೆ ನಾಮೆ ಬೆಸ[9]ಕೆಯ್ವನಿತಾಯ್ತು. ಇಲ್ಲಿರ್ಪುದು ಪರಿಭವಂ" ಎಂದು(ನೆ)ಮಗನನೊಡಗೊಂಡು ಪೋಗಿ [10]ಸೀಸಪಾಕಮೆಂಬೂರೊಳ್ ಬಲಭದ್ರನೆಂಬ ಗಾವುಂಡನ ಕೇೞಿಲೊಳ್ ಸಾರ್ದೊಡವರ್ ಕರು[11]ಣದಿನೊಂದುಗುಡಿಸಿಲನೆಡೆಗೊಟ್ಟೊಡಲ್ಲಿರ್ದು ತಾಯುಮಾಗಾವುಂಡನ ಮನೆಯೊಳ್ ಬೆಸಕೆ[12]ಯ್ದುಣ್ಗುಂ.ಮಗಂ ಕಱುವಂ ಕಾದುಣುತ್ತುಮಿರ್ದೊಂದು ದೆವಸಂ [13]ತಾಯ್ಗಿಂತೆಂದಂ—

(1) ಎಂದೊಡಿಂತೆಂದು ನಿಂತಾದೊಡಕ್ಕು(ಕ, ಚ) (2) ರನುಂ ಮುನ್ನಿನಂತೊರ್ವನೆ ಪಯಣಂ ಬೋಗುತ್ತು ಮೊಂದೆಡೆ (ಕ, ಚ) (3) ಬಂದಿಸಿ (ಕ) ತಾಯ್ತೆಂದೊಡಿಂತೆಂದು (ಕ) ಏಕಾರಣದಿನಾಯ್ತೆನೆ (ಘ) (4) ಸುಕೃತ (ಝ) (5) ಮೊದಲಾಗಿ (ಛ) (6) ಬಂಧುಗಳು (ಕ, ಚ) (7) ಬಾಯಳಿದ (ಕ, ಚ) (8) ಕೀನಾಶನಿವಾಸಮಂ ಪುಗೆ (ಛ, ಜ) (9) ಕೆಯ್ವಂತುಟಾದುದು(ಕ) ಕೆಯ್ವಂತಾದುದು (ಛ) (10) ಸೀಸವಾಕ (ಛ) ಸಿಸವಾಕ (ಚ) ಸಸಿವಾಕ(ಖ) (11) ಣೆಸಿ ತಮ್ಮ ಮನೆಯ ಮುಂದೊಂದು ಗುಡಿಸಂ (ಸಲನೆಡೆಮಾಡಿ) ಕೊಟ್ಟೊಡಲ್ಲಿರ್ದು(ಕ, ಚ) (12) ಕೆಯ್ಗುಂ (ಛ) ಬೇಸಂಗೆಯ್ದುಣ್ಣು (ಕ) (13) ದೆವಸಂಮುಗಂ (ಕ, ಚ)

ಶಾ|| ನಾಮುಂ ಮಾನಿಸರೆಂ ದಲೀ ಮನೆಯವರ್ ನ[1]ಮ್ಮಂತೆ ದಲ್ ಮಾನಿಸರ್ |
ನಾಮಿಂತೇಕಿವರ್ಗಱ್ಕೆ ಬಱ್ಕೆ ಬೆಸ[2]ಕೆಯ್ವಂತಾಂಡು [3]ಕಣ್ಬಟ್ಟೆಪಂ ||
ನೀಮು(ಮಿ)ಂ ಪೇೞಮಮೋಘಮೆಂದೊಡವರ್ಗಳ್ ಸೈಪುಳ್ಳರೀ ಕಾಲದೊಳ್ |
ನಾಮುಂ ಮುನ್ನಿವರಿಂದಮಗ್ಗಳಿಕೆಯೊಳ್ ಮಿಕ್ಕಿರ್ದೆ(ರ್ಪೆ)ವಾ ಕಾಲದೊಳ್ || ೪೧ ||

ವ|| ಮತ್ತಂ—

ಕಂ|| ಕಡುವಿಸಿಲಾದೊಡೆ ಮಂಜಿನ |
[4]ಪಡೆಯುಂ ಕಿಡುವಂತೆ ಬಱದೆ ನೀಂ ಪುಟ್ಟಲೊಡಂ ||
ತಡೆಯದೆ ಕೆಟ್ಟುದು ಸೈಪೊಂ |
ದೆಡಱಡ[5]ಸಿಂತಾಯ್ತು ನಮಗಮೀಗಳ್ ಮಗನೇ || ೪೨ ||

ವ|| ಎಂದು ತಮ್ಮ ಮುನ್ನಿನ ಸಂಪತ್ತುಮನೀಗಳಿನಾಪತ್ತುಮುಮಂ ನೆನೆದುಬ್ಬೆಗದೊಳ್ [6]ಕೆಲಕಾಲಂ ಪೋಗೆ ಮತ್ತಮಱ ಮೇಗೆ ಗಾವುಂಡನೆಣ್ಬರ್ [7]ಮಗಂದಿರುಂ ತನ್ನನಲೆದು ಬೆಸಕೆಯ್ಯೆ ಕಱುಕುಚಿ[8]ಗನವರ್ಗೆ ಪಲ್ಮೊಱೆದು ಕನಲ್ವೊನಲ್ದು ಬಡವಾಗಿರ್ದು ಆ ಮನೆಯವರುಣ್ಬುದಂ ಕಂಡು ಕಣ್ಬಾತುದಂ [9]ತಾಯ್ ಕಂಡಱದಱುತ್ತಿರೆ ಗಾವುಂಡಂ ಕಂ"ಡಿತೇಕೆರ್ಱಲ್ತಪೆ"[10]ಯೆಂದು ಕೇಱೆ ಬೆಸಗೊಳೆ ಕಿಱಯಾತಂ "ತುಯ್ಯಲಂ ಬಯಸಿ ಕ[11]ಣ್ಬಾತುವದು ಕೂಡದುದಱನಲ್ತಪೆ"ನೆಂದೊ[12]ಡಾಗಳ್ ಕರುಣಿಸಿ ಪಾಲನಕ್ಕಿಯುಮಂ ಕುಡವೇೞ ತಂದು ತುಯ್ಯಲನಟ್ಟು ಮಗನಂ [13]ಕಾದಿರಿಸಿ ತಾಯ್ ನೀರ್ಗೆ ಪೋದಳನ್ನೆಗಮಿತ್ತಲ್—

ಕಂ|| ಪರಮತಪೋಧನರೊರ್ವರ್ |
ಚರಿಗೆಗೆ ವರೆ ಕಂಡು ನೆಟ್ಟನೆನ್ನಿಂದೀತಂ ||
ಕರಮೆ ಬಡವಂ ದಲೆಂದಾ |
ದರದಿಂ ಕಱು[14]ಕುಚಿಗನವರ ಕೆಯ್ಯಂ ಪಿಡಿದಂ || ೪೩ ||

ವ|| [15]ಪಿಡಿದು "ನೀಂ ಬನ್ನಿಂ ನಿಮಗುಣಲಿಕ್ಕಿದಪ್ಪೆಂ" ಎಂದಾ ತುಯ್ಯಲಂ ತಂದಿರಿಸಿದನ್ನೆಗಂ ಅವನಬ್ಬೆ ಬಂದು ಕೊಡನನಿೞಪಿ ಪೊಡೆವಟ್ಟು "ಭಟಾರಾ ನಿಲ್ಲಿ"ಮೆಂದು ನಿಲಿಸೆ "ಕರವೊಳ್ಳಿತೆಯ್ದೆ"ಯೆಂದು ಮಗನಂ ಪೊಗೞ್ದು ಮನೆಯೊಳುಚಿತಮಪ್ಪೆಡೆಯೊಳ್ ಕುಳ್ಳಿರಿಸಿ ಕಾಲಂ ಕರ್ಚಿ "ಶ್ರದ್ಧಾ ಶಕ್ತಿ ರ್ಭಕ್ತಿ ರ್ವಿಜ್ಞಾನ ಮಲುಬ್ಧತಾ [16]ಕ್ಷಮಾಶೌಚ"ಮೆಂಬೇೞುಂ ತೆಱದ ಗುಣಂಗಳೊಳ್ ಕೂಡಿ ತುಯ್ಯಲಂ [17]ಬಡಿಸಿದೊಡೆ ಉಂಡು "ಅಕ್ಷಯದಾನಮಕ್ಕೆ" ಎಂದು ಪರಸಿ ಭಟಾರರ್ ಪೋದಿಂ ಬೞಯಂ ತುಯ್ಯಲಂ ಮಗನುಂ ತಾನುಮುಂಡೊಡಂ ತವೆಯದಾಯ್ತು.

---

(1) ಮ್ಮಂತೆ ಪೋಲ್ (ಕ) (2) ಗೆಯ್ವಂತೇಕೆ (ಛ,ಖ) (3) ಬರ್ದಿರ್ದಪಂ (ಛ,ಝ) (4) ಪಡೆ ಪರಿ(ವ)ಪಡೆ ಕಿಡುವತೆಱದೆ ನೀಂ (ಕ,ಚ) (5) ಸಿದೊಡಿಂತಾಯ್ತುನಮೆವ (ಪು) ಮೀಗಳ್ (ಕ) ಸೈಪೆಡ! ರಡಸಿದೊಡಿಂ (ಚ) (6) ಕೆಲದೆವಸಂ (ಕ,ಚ) (7) ಮಕ್ಕಳುಂ (ಕ,ಚ) (8) ಗಂತಾನವರ್ಗೆ (ಕ,ಚ) (9) ತಾಯಱದಳು (ಕ,ಚ) (10) ಯನೆ ಕಿಱಯಾತಂ (ಕ,ಚ) (11) ಣ್ಬಾತೊಡದು ಕೂಡಿಬಾರದುದಱನ (ಕ,ಚ) (12) ಡಾಗಗಾವುಂಡಂ ಪಾಲನುಕ್ಕಿ ಯಮಂತರಿಸಿಕೊಟ್ಟೊಡೆ (ಕ,ಚ) (13) ಪಕ್ಕದಿನಿರಿಸಿ (ಕ) (14) ಕುದುಗಿಚಿಗ (ಕ) (15) ಪಿಡಿದುನಿಮಗುಣ (ಕ) (16) ದಯಾಕ್ಷಾಂತಿ (ಕ,ಚ) (17) ಬಡಿಸಿ ಕೈಯೊಳಿಕ್ಕಿದೊಡೆ

ಭಟಾರರಾಹಾರಾಕ್ಷೀಣರ್ಧಿಸಾಮರ್ಥ್ಯದಿನಂತಾ [1]ಕೇರಿಯೆಲ್ಲಕ್ಕಂ ನೇಸಱ್ ಪಡುವಿನೆಗಂ ಬಡಿ [2]ಸುತ್ತಿರೆಯುಂ ಮತ್ತಮುಂಟಾಗಿರ್ದತ್ತು. ಮಱುದೆವಸಮಾ ಕಱುಕುಚಿಗಂ ಕಱುವಂ ಕಾಯಲ್ ಪೋಗಿ [3]ಕಱುವಂ ಕಿಡಿಸಿ ಮನೆಗೆವಾರದಿರೆ ಗಾವುಂಡನೆಲ್ದು 'ಕಱುಗಳ್ ಬಂದುವು ಕಿಱಿಯವನೇಕೆ ಬಾರನೊ!'. ಎಂದಾ[4]ತನನಱಸಿ ಪೋಗಿ ಕಂಡು ಜಡಿದು ಬಗ್ಗಿಸಿದೊಡೆ[5]ಯಂಜಿಯೋಡಿ ಪಲು ವಮಂ ಪೊಕ್ಕು ಬೆಟ್ಟದ ಗುಹೆಯಂ ಸಾರ್ದಾಗಳಾ ಗುಹೆಯೊಳಗಿರ್ದ ಮಹರ್ಷಿಯರಂಸಾರ್ದು—

ಉ|| ಕೊಲ್ಲದ ಕಳ್ಳದಿರ್ದ ಪುಸಿವೇಳದಣು[6]ವ್ರತದಿಂದವಿಂತು ತ |
[7]ಳ್ವಿಲ್ಲದಿವಂ ಮನೋಮುದದೆ ತಾಳ್ದಿದರ್ಗಿಂತು ಫಳಂಗಳಾದುವೆಂ ||
ದೆಲ್ಲ[8]ಮನಂದು ಪೇೞುತಿರೆ ಕೇಳ್ದಭಿಲಾಷದೆ ವತ್ಸಪಾಲಕಂ |
ಮೆಲ್ಲನೆ(ಗೆ) ಸಾರ್ದು ಕೆಯ್ಮುಗಿದು[9]ಕೊಂಡ ನಳುರ್ಕೆಯಿನಾ ವ್ರತಂಗಳಂ || ೪೪ ||

ವ||[10]ಅಂತಣುವ್ರತಮಂ ಕೊಂಡು ಗುಹೆಯ ಬಾಗಿಲ ಪೊಱಗಿರ್ದವನಂ ಪುಲಿ ಪಾಯೆ ಸತ್ತಾ ವ್ರತದ ಫಲ[11]ದಿಂ ಸ್ವರ್ಗದೊಳ್ ಪುಟ್ಟಿದಂ. ಇತ್ತಲ್ ಮಗಂ ಬಾರಮದರ್ಕೆ [12]ತಾಯ್ ಮಱುಗಿ ಪೋದ ದೆಸೆಯನಱಸಿ ಬಂದು[13]ಪುಲಿಕೊಂಡರೆದಿಂದ ಪೆಣನಂ ಕಂಡು ಪುಲಿ ಕೊಂಡು ದೆಂದಱಿದು ಮಹಾಶೋಕದಿಂ ಪಳಯಿಸುತ್ತಿರ್ಪನ್ನೆಗಂ ಆ[14]ಕಱುಕುಚಿಗಂ ಸ್ವರ್ಗದೊಳ್ ಪುಟ್ಟಿರ್ದವಧಿ ಜ್ಞಾನದಿಂ ತನ್ನ ಭವದಂದಮುಮಂ ಸಱಿದು [15]ತಾಯದುಃಖಮನಾಱಿಸುವೆನೆಂದು ಮುನ್ನಿನ ರೂಪುಗೊಂಡು ಬಂದೊಡೆ ತಾಯ್ ಕಂಡೆಲ್ದಪ್ಪಿಕೊೞಲ್ ಬಗೆದೊಡೆ ದಿವ್ಯಶರೀರಮಂ ಮಾನಸರ್ ಮುಟ್ಟಲಾಗದ ಕಾರಣ[16]ದಿಂದಾಕಾಶಕ್ಕೆ ನೆಗೆದು ದೇವನಪ್ಪ ರೂಪಂ ತೋಱಿ "ಸಂಸಾರ ಸ್ಥಿತಿಯಿಂತುಟು"ಎಂದಱಿಪಿ "ನೀನುಬ್ಬೆಗಂ ಬಡದಿರಿಮಾ ವ್ರತದ ಫಲದಿಂದಾನಿಂತಾದೆಂ ನೀಮುಂ ವ್ರತಮಂ ಕೆಯ್ಕೊಳ್ವುದು" ಎಂದು ತಿಳಿಯೆ ಪೇೞ್ದಾ ದೇವಂ ದೇವಲೋಕಕ್ಕೆ [17]ಪೋಗಿ ಪಲವುಕಾಲಂ ದಿವ್ಯಸುಖಮನನುಭವಿಸಿ ಬಂದು—

ಕಂ|| ಧನಪಾಳಂ[18]ಗಾ ದೇವಂ |
ತನಯಂ ನೀನಾದೆ ಯಿಂತು ಪುತ್ತಾ ಗಾವುಂ ||
ಡನ ಸುತ[19]ರೆಣ್ಬರು ಮುಣ್ಣರ್ |
ನಿನಗಾಗಿ ವಿರೋಧಮುನ್ನೆನೆದು ನಿನಗಿನ್ನುಂ || ೪೫ ||

---

(1) ಕೇರಿಗೆಲ್ಲಂ (ಕ) (2) ಸುತ್ತಿರ್ದೊಡಂ ಮತ್ತಮುಂಟಾಗಿರ್ದುದು (ಕ,ಚ) ಸಮೆಯುಮುಂಟಾಗಿರ್ದುದು (ಛ,ಖ) ಬಡಿಸಿಕುಡುತಿರ್ದೊಡಂ (ಘ) (3) ಕರುಗಳಂ ಕಿಡಿಸಿ ಮನೆಗೆ ಬರಲಣ್ಮ(ಮ್ಮ) ದಿರೆ (ಕ, ಚ) (4) ಜಡಿ (ಱಿ) ದು (ಕ, ಚ) ಗಾವುಂಡನಾತನವಱಸಿ ಜಡಿದು ಬಗ್ಗಿಸಿ (ಛ) (5) ಪೆಱಱುವೋಡಿಪೋಗಿ (6) ವ್ರತದಂದಮೆಂತು (ಖ) (7) ಳ್ವಿಲ್ಲದೆ ಧರ್ಮಮಂ ನೆಱೆಯೆತಾಳ್ದಿ (ಖ,ಗ) (8) ಮನಿಂತು ಮನೋದೆ(ಚ) ಕೊಂಡನಣುವ್ರತಂಗಳಂ (9) ನೆಟ್ಟನೆ (ಛ) ರಾಗದೆ ಕೊಂಡನಣುವ್ರತಂಗಳಂ (ಖ,ಛ) (10) ಕೊಂಡಾಗುಹೆಯ ಪೊಱಗಣಲಿರ್ದವನಂ (ಕ) ಯುಂ ಪೊಱಮಟ್ಟಿರ್ದನಂ (ಚ) (11) ದಿಂ ಸದ್ದನದಫಲದಿಂ (ಕ, ಚ) (12) ತಾಯ್ ಮಮ್ಮ●ಮಱುಗಿ (ಛ) (13) ಪುಲಿಪಾಯ್ದೊಂದು ಭಾಗಮಂತಿಂದು (ಕ,ಚ) ಪೋಗಿಚಿತ್ರಕಾಯಂ ಪಿಡಿದೊಂದು ಭಾಗಮಂತಿಂದ ಮೃತಕಮುಂ(ಛ) ಪೋಗಿಮಹಾರಣ್ಯಮಂ ಪೊಕ್ಕುಗುಹೆಯ ಪೆಱಗಿರ್ದನಂಪುಲಿ ಪಾಯ್ದುರೆದಿಂದಪೆಣನಂ (ಖ, ಗ) (14) ವತ್ಸಪಾಲಕಂ (ಛ) (15) ಜನನಿಯ (ಛ) (16) ದಿಂಗಗನಕ್ಕೆ (ಚ) ನಭಕ್ಕೆ (ಖ) (17) ಪೋದವನಲ್ಲಿ (ಘ) (18) ಗಾತ್ಮಜನಾದೆ ನೀನುಮಾಗೌಂಡನಾತ್ಮಸುತರೆಣ್ಬರುಮುಂದಿನ ಮುನಿಸಿಂದಣ್ಣಂಗಳಾಗಿ ನಿನ್ನನಿನ್ನುಂ ಕೊಲಲ್ಕೆ ಮುನಿಯುತ್ತಿರ್ಪರ್(ಘ,ಖ) (19) ರೆಣ್ಬರ್ ಮುಂದಿನ ಮುನಿಸಿಂ ದಣ್ಣಂಗಳಾಗಿಯುಂ ನಿನಗಿನ್ನುಂ (ದೆಂತುಂ) (ಕ)

ವ|| ಅದಱಿಂ ಮುನಿಯುತ್ತಿರ್ಪರ್ ಎಂದಿಂತು ತನ್ನ ಮುನ್ನಿನ ಭವಾಂತರಮುಂ ತಿಳಿಯೆ ಪೇೞೆ ಕೇಳ್ದು, ಆ ಭಟಾರರಂ ಬಂದಿಸಿ ಮತ್ತಮಂತೆ ಪಯಣಂಬೋಗಿ ರಾಜಗೃಹಪುರಮನೆಯ್ದೆ ವಂದು ಪೊಱಗಣುದ್ಯಾನದೊಳ್ ವಿಶ್ರಮಿಸಿರ್ದನನ್ನೆಗಮಲ್ಲಿಯ ಮಹತ್ತರನಪ್ಪ ಮಾಲೆಗಾಱಂ ಬಂದು ನೋೞ್ಪಾಗಳ್—

ತರಳ|| ದಿವಸಮಿ(ಮ)ಲ್ಲದೆಯುಂ ಕೊನರ್ತುಂ ತಳಿರ್ತುಂ ಪೂತು ಫಲಂಗಳಾ |
ದುವು ತರುಪ್ರಕರಂ[1] ಗಳಿಂಚರವಿಾಯೆ ಕೋಗಿಲೆ ತಿಂಕಣಿಂ ||
ಪವನನೊಯ್ಯನೆ ಕಂಪನೀೞ್ಕುಳಿಗೊಂಡು ಬಂದಪುದೇಕೆಯೋ |
ಪ್ರವರಪುಣ್ಯ ಸಮೇತನತ್ಯಭಿನೂತನಿಲ್ಲಿಗೆ [2] ಬಂದನೋ || ೪೭ ||

ವ|| ತೊಟ್ಟನಿಂತತಿಶಯ[3] ಮಪ್ಪುದೆಂಬುದು ಮುನ್ನ ಪೇೞ್ದಾ ದೇಶಪುರುಷಂ ಬಂದನಕ್ಕು ಮೆ[4] ನುತ್ತುಂ ಬರ್ಪ ಮಾಲೆಗಾಱಂ ಕುಮಾರನಂ ಕಂಡು ಸಾರೆವಂದು ನೋಡಿ "ನೀಮಾರ್ಗೆ? [5] ಎತ್ತಣಿಂದೆ ಬಂದಿರಿ" ಎನೆ [6] "ದೇಶಾನ್ತರಿಗನೆಂ ಬಟ್ಟೆವೋಗುತ್ತುಂ ಬಂದೆ"ನೆಂದೊಡೆ [7] "ಅಕ್ಕುಂ, ನೀಮೆನಗಿಂದಭ್ಯಾಗತರಾಗಿಂ" ಎಂದು ಭರಂಗೆಯ್ದು ನುಡಿದು ಮನೆಗೊಡಗೊಂಡು ಪೋಗಿ ಪೂಗಟ್ಟುವ ಮನೆಯೊಳ್ ಕುಳ್ಳಿರಿಸಿದಾಗಳ್ ಆಮನೆಯವರ್ ಪೂಗಟ್ಟುವಂದಮುಂ ನೋಡಿ ತಾನು ಮೊಂದುನೂಲಂಕೊಂಡು ನಾನಾವಿಧಚಿತ್ರಮಾಲೆಗಳಂ ಸಮೆವ ಹಸ್ತಕೌಶಲ್ಯಮಂ ಕಂಡಾತ್ಮಜಾತಿ ವಿದ್ಯಾನಿಪುಣನೀತನೆಂದಾ ಮಹತ್ತರಂ ಮಚ್ಚಿ "ಇತ್ತೆಲ್ತನ್ನಿಂ" ಎಂದು ಪಿರಿಯ [8] ಮನೆಗೊಯ್ದು "ಎನ್ನ ತಂಗೆಯ ಮಗಂ, ನಿನ್ನಳಿಯಂ" ಬಂದನೆಂದು ಪೆಂಡಿತಿಗೆ ಪೇೞ್ದತಿ[9] ಪ್ರೀತಿಯಿಂ ಸ್ನಾನಾನ್ನಪಾನಾದಿಗಳಿಂ ತಣಿಪಿ "ನೀಮೆತ್ತಲುಂ ಪೋಗ[10] ದಿಲ್ಲಿರ್ಪುದು, ಕಾರಣಮುಂಟು" ಎಂದು ಪೇೞ್ದು ಇರಿಸಿದೊಡಾಮಾಲೆಗಾರನ ಮಗಳ್ ಪುಷ್ಪಾವತಿಯೆಂಬಳ್—

ಕಂ|| ಧನ್ಯಂಗೆ ಕುಸುಮಶರಸಾ |
ಮಾನ್ಯಂಗೆ ನರೇಂದ್ರವರ್ಗಮಾನ್ಯಂಗೆ ಲಸ ||
ತ್ಕನ್ಯೆ [11] ಸುರೂಪಾತಿಶಯಾ |
ಮಾನ್ಯೆ ಕರಂ ಕೂರ್ತುಂ ಕೂಟಮಂ ಒಯಸಿರ್ಕುಂ || ೪೭ ||

ವ|| ಇರ್ದೊಡೊಂದು ದೆವಸಮಾತಂ ಕಟ್ಟಿದ [12] ಪೂವನರಸರ ಮಗಳ್ಗೆ ಕೊಂಡು ಪೋಗಿ ಕೊಟ್ಟೊಡೆ "ಇನ್ನೆಗಮೇಕೆ [13] ಬಾರೆ"ಯೆಂದು ನುಡಿದು ಮುಳಿದು ಆ ಪೂಮಾಲೆಯ [14] ಚೆಲ್ವಂ ನೋಡಿ "ಪೇೞಿಂದನಾರ್ ಸಮೆದರ್?" [15] ಎಂದೊಡೆ "ಎಮ್ಮತ್ತೆಯ ಮಗಂ ಬಂದಿರ್ದನಾತ ನಿವಂ ಸಮೆದ"ನೆಂದೊಡೆ "ಇಂತಪ್ಪ ಕುಶಲಂಗೆ ನಿನ್ನಂ [16] ಕೊಟ್ಟೊಡೊಳ್ಳಿತ್ತೆಂದಾಮುಮೆಲ್ಲಂ

(1) ಗಳೊಳ್‌ಗಿಳಿ(ಣಿ)ವಿಂಡು ಕೋಗಿಲೆ (ಕ,ಚ) (2) ವಂದನೇಂ (ಛ,ಜ) ವಂದನ್ನೆ (ಖ,ಗ) (3) ಮಪ್ಪು ದೆಲ್ಲಮುಂ (ಕ) ಮೆಂಬುವೆಲ್ಲಂ (ಖ) (4) ನುತ್ತಂತೆ ಬರುತ್ತುಂ ಕುಮಾರನಂ (ಕ, ಚ) (5) ಎಲ್ಲಿಂದೆ (ಘ) (6) ದೇಸಿಗನೆಂಬಟ್ಟೆ (ಕ,ಚ) (7) ಅಕ್ಕುಂ ನಿಮ್ಮಂ ನೀಮುಂ ಪೇೞದಿರ್ದೊಡಮೇಮೆಮ್ಮ ಮನೆಗಿಂದಭ್ಯಾಗತ (ಕ,ಚ) (8) ಮನೆಯೊಳಗಣ್ಗೊಯ್ದು (ಕ,ಚ) (9) ಪ್ರಿಯದಿಂ (ಕ) (10) ದಿರಿಯಿಲ್ಲಿರ್ಪುದೆಂದು (ಕ,ಚ) (11) ನಿಜರೂಪದಿಂ ಪ್ರಾಧಾನ್ಯೆಕರಂ (ಕ,ಚ) ಕ್ಕನ್ಯಾಸತಿರತಿ (ಸ) ಸ್ನಿಭೆ ಮಾನ್ಯೆ (ಛ,ಝ) (12) ಪುಷ್ಪ (ಪ್ರಿ) ಮಾಲೆಯುಂ ಕೊಂಡೊಯ್ದರಸನ (ಕ, ಚ) (13) ಇಂತೇಕೆ ತಡೆದೆ (ಕ,ಚ) (14) ಚೆಲ್ವಿಕೆಯುಂ ಕಂಡುಮಚ್ಚಿ (ಘ,ಜ) (15) ಎಂದು ಬೆಸಗೊಂಡೊಡೆ (ಕ,ಚ) (16) ಕುಡುವುದೊಳ್ಳಿತ್ತಾಮೆಲ್ಲಂ (ಕ,ಚ)

ಬಯಸಿದಪ್ಪೆಂ'' ಎಂದೊಡೆ ಆಕೆಗೆ ಕೂರ್ಮೆಯಿಮ್ಮಡಿಸಿ ಮಗುಳ್ದು ಬಂದು ವಿರಹ ಪರಿತಾಪದಿಂ ದಿರ್ದೊಡೆ ಅವರಯ್ಯನುಂ ಆಕೆಯನಾತಂಗೆ ಕುಡುವ ಬಗೆಯೊಳಿರ್ದಂ. ಮತ್ತಮಾ[1] ಪೊೞಲ ಪ್ರಧಾನ ಶ್ರೇಷ್ಠಿ—

ಕಂ|| ಒಂದು ಪಣವಿನ ಮೊದಲ್ಗೊಂ |
ಡಂದಿನ [2] ದಿನದೊಳೆ ಸಹಸ್ರಪಣಮುಂ ಪಡೆನಂ ||
ಗಿಂದು[3] ನಿಭಾಸ್ಯೆಯನಭಿನುತ |
ಸೌಂದರಿ ಕನ್ನಿಕೆಯನೆನ್ನ ಮಗಳಂ ಕುಡುವೆಂ || ೪೮ ||

ವ|| ಎಂಬ ಪ್ರತಿಜ್ಞೆಯಂ ಕೇಳ್ದು ಆತನಲ್ಲಿಗೆ (ಧನ್ಯಕುಮಾರಂ) ಪೋಗಿ ''ನಿಮ್ಮ [4] ಕೂಸ ನಿತ್ತೊಡಮಕ್ಕುಮಾಯದೊಡಮಕ್ಕುಂ. ಎನ್ನ ಬುದ್ಧಿಯಂನೋಡಿಂ''. ಎಂದೊಂದುಪಣಮು[5] ನಧ್ಯಕ್ಷ ಸಹಿತಂ ಕೊಂಡುಪೋಗಿ ಪೂಗಟ್ಟುವ ನಾರನಾಪಣವಿಂಗೆ ಮಾಱುಗೊಂಡು ತೋಂಟದ ಬಟ್ಟೆ ಗೊಯ್ದು ಒಂದುನಾರನೊರ್ಪಿಡಿಪೂವಿಂಗೆ ಕೊ[6]ಟ್ಟು ಪೂವಂ ಮಾಱುಗೊಂಡು, ಆಪೂವಂ ಚಿತ್ರ ಮಾಲೆಗಟ್ಟಿ ವನಕ್ರೀಡೋತ್ಸವಕ್ಕೆ ಪೋಪ ರಾಜಕುಮಾರನ(ರ) ನೆರವಿಗೆ ತೋಱಿ ಮಾಱಿ ಸಾವಿರಪಣಮಂ ಮೇಣ್ ಮೊದಲೊಂದು ಪಣಮುಮ[7] ನೊಯ್ದೊಡಾತನಂ ರಾಜಶ್ರೇಷ್ಠಿ ಮೆಚ್ಚಿ ತನ್ನ ಮಗಳನಾತಂಗೆ ಕುಡುವೆನೆಂದು ಕೊಂಡಾಡುತಿರ್ದಂ. ಮತ್ತಮಲ್ಲಿಯೊರ್ವಂ [8] ಸಾವನಿಗನ ಚಿತ್ರಮಂ ಬರೆದಂಗಡಿಗೆಪೋಗಿ ಕುಳ್ಳಿರ್ದೊಡಂದಾ ವಣಿಕ್ಪತಿಗೆ ಲಾಭಮಾದೊಡೀತಂ ಬಂದಲ್ಲಿ ಪಡೆದೆನೆಂದಾತನ ತೇಜಕ್ಕಂ ಬುದ್ಧಿಗಂ ಮೆಚ್ಚಿ [9] ಕೂಸಂ ಕುಡಲೆಂದಿರ್ದಂ ಮತ್ತಂ ರಾಜ ಪ್ರ[10]ಧಾನಮಂತ್ರಿಗೆ [11] ಚಂದ್ರಕವೇಧ್ಯಮೆಂಬ ವಿದ್ಯೆಯಂ ಬೆಸಂದೋಱಿ[12] ದೊಡೆ ಆತನೊಸೆದು ತನ್ನ ಮಗಳಂ ಕುಡಲಿರ್ದಂ. ಇಂತಾತನ ವಿದ್ಯಾಪರಿಣತಿಗಂ, [13] ರೂಪಿನೊಳ್ಪಿಂಗಂ, ಸೌಭಾಗ್ಯಕ್ಕ [14] ಮರಸಂ ಪುರುಡಿಸಿ[15] ಕಾಯ್ದು ಕೋಪದಿಂ ಕೊಲಲ್ ಬಗೆದು—

ಕಂ|| [16] ರಕ್ಕಸನ ಮಾಡದೊಳಗಂ |
ಪೊಕ್ಕಾವಂ ಸುಖ[17] ದಿನಿರ್ದನಾತಂಗೆ ಕರಂ ||
[18] ತಕ್ಕಪ್ಪೆನ್ನಾತ್ಮಜೆಯಂ |
[19] ಮಿಕ್ಕಿರ್ದಾ [20] ನಾಡುಮಂ ನಿತಾಂತಂ ಕುಡುವೆಂ || ೪೯ ||

---

(1) ಪೊೞಲೊಳಿರ್ದನೊರ್ವ ಪ್ರಧಾನಶ್ರೇಷ್ಠಿ (ಕ, ಚ) (2) ದೆವಸದೊಳೆ ಸಾವಿರಪಣವಡೆದಂ|| (ಕ) ದೆವಸದೊಳೆನೂಱುಪೊನ್ನಂ ಪಡೆದಂ (ಘ) ನೂಱುಪಣಂ ಬಡೆದಂಗಂ (ಖ, ಗ) (3) ನಿಭಾನನೆ (ಕ) (4) ಮಗಳ ಕೊಟ್ಟೊಡಮಕ್ಕುಂ ಕುಡದೊಡ (ಛ) (5) ನಧ್ಯಕ್ಷಮುಮಂ (ಬೇಡಿ) ಕೊಂಡು ಪೋಗಿ ಪೂಗಂ ಪೂಗಟ್ಟುವನಾರ್ಗೆ (ರ್ಗಂ)ಪಣಮಂ ಕೊಟ್ಟುತೋಂಟದ (ಕ, ಚ) (6) ಟ್ಟಂತೆಪೂವೆಲ್ಲಮಂಕೊಂಡು (ಛ) (7) ನೊಯ್ದು ಕೊಟ್ಟೊಡಾ (ಕ, ಚ) (8) ಸೋವನಿಗಳ (ವಿ) ಚಿತ್ರಂ (ಕ, ಚ) ಸೌವರ್ಣಿಕನಾ (ಘ) ಸೊವನಿಗಂ (ಚ) (9) ತನ್ನಮಗಳಂ (ಚ, ಜ) (10) ಧಾನನೆಂಬಮಂತ್ರಿ (ಕ, ಚ) (11) ಚಂದ್ರಕವಿದ್ಯೆಯಂ ಬೆಸಂದೋಱೆ (ಕ, ಚ) ಚಂದ್ರಿಕವೈದ್ಯಮೆಂಬ (ಘ, ಖ) (12) ದೊಡೊಸೆದಾತಂ (ಕ) (13) ರೂಪಿಂಗಮೊಳ್ಪಿಂಗ (ಛ, ಜ) (14) ಕ್ಕಮರಸರಮಗಂ ಪುರು (ಕ, ಚ) (15) ಕಾಯ್ದುಪಾಯದಿಂ (ಕ, ಚ) (16) ರಕ್ಕಸಿಯಮಾಡ (ಜ) (17) ನಿರ್ಪ (ಛ) (18) ತಕ್ಕಿಪಮತ್ಪ್ರಿಯಸುತೆಯ (ಘ, ಚ) (19) ಮಿಕ್ಕಿರ್ದನ್ನರ್ಧರಾಜ್ಯಮಂ ನೆರೆಕುಡುವೆಂ (ಕ, ಚ) (20) ಮಾಡಮಂ (ಛ)

ವ|| ಎಂದು ಗೋಸಣೆವಿಡಿಸಿದೊಡೆ ಆ ಗೋಸಣೆಯಂ ಧನ್ಯಕುಮಾರಂ ಕಂಡು (ಕೇಳ್ದು) ಪಿಡಿದೊಡೆ ಅರಸಂ ಅಱಿ'ದೆನ್ನ ಬಗೆದಂತಾ[1]ಯ್ತೆಂ'ದೊಸೆದು "ಪೋ, ಬರವೇೞ್ಮಾತನಂ ಮನೆಯಂ [2]ಪುಗುವಂದಮಂ ನೋೞ್ಪೆನೆಂದಟ್ಟೆ [3]ತಾನುಂ ತನ್ನರಸಿಯರ್ಕಳುಂ ತನ್ನಮಕ್ಕಳಪ್ಪ ಕ[4]ನ್ಯಾಸಮೂಹಮುಂ, ಪುರಪ್ರಧಾನರುಂ ಕೆಯ್ಗೆಯ್ದು ಬಂದು ಮತ್ತಂ ಪುರಜನಂಗಳೆಲ್ಲಂ ತಂತಮ್ಮ ವಿಳಾಸಂಗಳಂ ಮೆಱೆದು ಬಂದಾ ಮನೆಯಂ ಬಳಸಿರ್ದು ನೋಡುತ್ತಿರೆ — ಧನ್ಯಕುಮಾರಂ ಕರಂ ಕೆಯ್ಗೆಯ್ದು ಪೊೞ[5]ಲೊಳಗೆ ಬರ್ಪಾಗಳ್—

ಉ|| [6]ಈ ನೆವದಿಂ ಕೊಲಲ್ ಬಗೆದಸೀತನ ನೀನ್ನೃಪನೆಂದಪರ್ ಕೆಲರ್ |
ದಾನವನಂ ಗೆಲಲ್ ನೆಱೆಗುಮೀತನ ಪೌರುಷಮೆಂದಪರ್ ಕೆಲರ್ ||
ಮಾನಿತ ಪುಣ್ಯದೇವತೆಗಳುಳ್ಳೊಡೆ [7]ಗೆಲ್ದಪನೆಂದಪರ್ ಕೆಲರ್ |
[8]ತಾನುಱುಗುಂ ಪುರಾಕೃತಮದೇಕೆ ಪ[9]ಲುಂಬುವಿರೆಂದಪರ್ ಕೆಲರ್ || ೫೦ ||

ವ|| ಎಂದಚ್ಚರಿವಟ್ಟು [10]ಪೊೞಲೆಲ್ಲಂ ನೋಡುತ್ತಿರೆ (ಧನ್ಯಕುಮಾರಂ) ರಕ್ಕಸನ ಮಾಡಮನೆಯ್ದೆವಂದು ಪಂಚನಮಸ್ಕಾರಮಂ ಮನ[11]ದೊಳವಧಾರಿಸಿ ನಿಶ್ಶಂಕೆಯಿಂ ತನ್ನ ಮನೆಯಂ ಪುಗುವಂತೆ ಪುಗುವಾಗಳ್ ರಕ್ಕಸಂ ಮಾಡದಿಂ ಪೊಱಮಟ್ಟು ಭಯಂಕರಾಕಾರಮಂ ತೋಱೆದೊಡೆ ಮುಗುಳ್ನಗೆ ನ"ಕ್ಕೆಮ್ಮಂ ನೀಂ ಮುಚ್ಚಿಸಲಕ್ಕುಂ [12]ಬೆರ್ಚಿಸಲಕ್ಕುಮೆ ?" ಎಂದಿದಿರ್ಚಿದೊಡೆ ರಕ್ಕಸನುಗ್ರಭಾವಂಗೆಟ್ಟು ಕುಮಾರನ ಮನದ ಪೆಂಪಿಂಗಚ್ಚರಿವಟ್ಟು [13]ಸೌಮ್ಯನಾಗಿ ಬೆಳ್ಳಿಯ ಕಳಶಮಂ ಕನ್ನಡಿಯುಮಂ [14]ಪಿಡಿದಿರ್ದಿಗೊಂಡು '[15]ಇತ್ತೆಬ್ಬನ್ನಿ' ಮೆಂದು ಕುಮಾರನಂ ಮಾಡದೊಳಗಣ್ಗೊಯ್ದು ಸಿಂಹಾಸನದ ಮೇಲಿರಿಸಿ ಪರಸಿ ಸೇಸೆಯನಿಕ್ಕಿ "ನೀನೀನಿಧಿಗಳಂ ಮನೆಯುಮಂ ಕೆಯ್ಕೊಂಡು ಸುಖಮಿರ್ಪುದು, ನಾಂ ಪೆಱತೊಂ[16]ದಾಶ್ರಯಕ್ಕೆ ಪೋದಪ್ಪೆಂ" ಎಂದು ರಕ್ಕ[17]ಸಂ ಪೊಱಮಟ್ಟು ಪೋಪುದುಂ ಪೊಱಗೆ ನೋಡುತ್ತಿರ್ದರಸ[18]ನುಂ, ಮಂತ್ರಿಯುಂ, ಪ್ರಧಾನರುಂ, ಸಾರೆವಂದು ರಕ್ಕಸನುಗ್ರಭಾವಂಗೆಟ್ಟು ನಿಧಿಗಳುಮಂ, ಮನೆಯುಮನಾತಂಗೊಪ್ಪುಗೊಟ್ಟು ಪೋದುದುಮಂ ಕಂಡೆನಿತಾನುಂ[19]ಮುದದಿಂ ಪೊ[20]ಗೞ್ದರಸನಾ ಮಚ್ಚಿನೊಳಾಗಳ್—

---

(1) ಯ್ತೆಂದು ಸಂತಸಂಬಟ್ಟಾತನಂ ಪೋಗಿಬರ (ಕ, ಘ) (2) ಪುಗುವುದಂ (ಕ, ಚ) (3) ತಾನು ಮರಸಿಯರುಂ (ಕ, ಚ) ಕನ್ಯಾರತ್ನಮು ಮಂತಃಪುರಮುಂ (ಘ) (4) ಮೆರೆಯುತೆಂದು (ಕ, ಚ) (5) ಲೊಳ್ (ಕ, ಚ) (6) ಈ ತೆಱದಿಂ (ಘ, ಝ) (7) ಗೆಲ್ಲಿವ (ಕ, ಚ) (8) ತಾನಱಿವಂ (ಕ, ಚ) (9) ಪಲುಂಬದಿರೆಂದಪರ್ (ಚ) (10) ಪೊಳಲ ಜನಮೆಲ್ಲಂ (ಚ) (11) ದೊಳು ನಿಶ್ಶಂ (ಕ, ಚ) (12) ಬೆರ್ಚಿಸಲಾಗದೆಂದು (ಛ) ಬೆರ್ಚಿಸಲಾರೆಯೆಂದಿದಿರ್ಚಿದೊಡೆ (ಕ) ಬೆರ್ಚಿಸಲ್ಲಾರದೆಂದು (ಚ). (13) ಸೌಮ್ಯರೂಪನಾಗಿ (ಕ, ಚ) (14) ಬೆರಸಿದಿ (ಕ, ಚ) (15) ಬನ್ನಿಮೆಂದು ಗಸೆಯಮೇ (ಕ, ಚ) (16) ದಾವಾಸಕ್ಕೆ (ಕ, ಚ) (17) ಸಂಪೋಪುದುಂ (ಕ, ಚ) (18) ರಸನುಂ ಪ್ರಭುಗಳುಂ ಸಾರೆ (ಕ, ಚ) (19) ತೆಱದಿಂ ಕುಮಾರನಂ (ಕ, ಚ) (20) ಪೊಗೞುತಿರ್ದರಸನಾ ಮೆಚ್ಚಿನೊಳಾಗಳ್ (ಕ, ಚ)

ಕಂ|| ತನ್ನ ನೆಗಟ್ದಿರ್ದ ಸುತೆಯಂ |
ಸನ್ನು(ನ್ನ)ತೆಯಂ [1]ರೂಪವತಿಯನತ್ಯುತ್ಸವಸಂ ||
[2]ಪನ್ನತೆಯಂ ಕೊಟ್ಟೊಡೆ ಕೊಂ |
ಡುನ್ನತನಾಗಿರ್ದನಂದು ಧನ್ಯಕುಮಾರಂ || ೫೧ ||

ವ|| ಅಂತತಿಶಯಮಪ್ಪ ಪುಣ್ಯಫಲಮುಮಂ, ಮನದ ಬಳಮುಮಂ, ಶಾಳಿಭದ್ರಂ ಮಚ್ಚಿ ಮಾವನ ಮಗನೆಂದಱಿದು ತನ್ನ [3]ತಂಗಿಯಪ್ಪ ಸುಭದ್ರೆಯಂ ಮಹಾ[4]ವಿಭವದಿಂದಾತಂಗೆ ಕೊಟ್ಟಂ. ಅಂತಂತೆ ಮುನ್ನೆ ಕುಡುವೆನೆಂದಿರ್ದವರೆಲ್ಲರುಂ ತಂತಮ್ಮ ಕೂಸುಗಳಂ ವಿವಾಹವಿಧಿಯಿಂ ತಂದುಕೊಟ್ಟರ್. ಅಂತು ಪುಷ್ಪವತಿವೆರಸು ಪದಿನಱುವ[5]ರುಮಂ ಮದುವೆನಿಂದವರ್ಗೆ ಪದಿನಾಱು ಮಾಡಂಗಳಂ ತನ್ನಮಾಡದ ಬಳಸಿಯುಂ ಮಾಡಿಸಿಕೊಟ್ಟು ಶುದ್ಧಚಂದ್ರೋದಯದೊಳ್ ಸಮುದ್ರಂ ಪೆರ್ಚುವಂತೆ ಪುಣ್ಯೋದಯದೊಳ್ ಶ್ರೀ ಪೆರ್ಚೆ ಧನ್ಯಕುಮಾರನಿಂತು ಸುಖದಿನಿರ್ಪನ್ನೆಗಂ – ಅತ್ತಲುಜ್ಜೈನಿಯೊಳವರಯ್ಯನುಮಬ್ಬೆಯುಂ ಪೋದಮಗನನೆಲ್ಲಿಯುಮಱಿ ಕಾಣದೆ—

ಕಂ|| ಎತ್ತಾನುಂ ಪೋಗಿ ಮಗಂ |
ಸತ್ತಂ ಹಾ! ಕೆಟ್ಟೆವೆಂದು ದುಃಖಾಗ್ನಿ ಕರಂ ||
ಪೊತ್ತಿ ಸುಡೆ ಬೆಂದು ನೊಂದಾ |
ಪತ್ತಿಂದಿರೆ [6]ಬಱಿಕಲ್ಲಿ ಸೈಪು ತೊಲಗಿತ್ತವರೊಳ್ || ೫೨ ||

ವ || ಅಂತಬಲುಮಬ್ಬೆಗಮುಮೆಡಱುಮಡಸಿದೊಡೆ ಧನಪಾಳಸೆಟ್ಟಿಯುರ್ ಕಣ್ಗೆಟ್ಟು [7]ಮುಂದುಗೆಟ್ಟು ಬಾಱು[8]ತ್ತಿರಲಾಱದೆ "ರಾಜಗೃಹದೊಳಿರ್ದ(ರ್ಪ) ತಂಗಿಯಮಗಂ ಶಾಲಿಭದ್ರನಂ [9]ಕಂಡು ಬರ್ಪೆ" ನೆಂದು ಕಪ್ಪರ(ಡ) ಮನುಟ್ಟು ಪೊಱಮಟ್ಟು ಒಂದು ರಾಜಗೃಹ[10]ಮಂ ಪೊಕ್ಕು ಧನ್ಯಕುಮಾರನ ಮಾಡದ ಮುಂದಣ [11]ಬೀದಿಯನೆಯ್ದಿ ಮೆಲ್ಲಮೆಲ್ಲನೆ ಮುಪ್ಪುಂ, ಬಡತನಮುಂ ಪಯಣಮು[12]ಮೆಂಬ ಮೂಱುಂತೆಱದಿನಾದ [13]ಪರಿಶ್ರಮಮಡಸೆ ಬಱಲ್ದು ಬರ್ಪನಂ—

---

(1) ರೂಪಯುತೆಯ (ಕ, ಚ) (2) ಪನ್ನತೆಯ (ಕ, ಚ) (3) ತಂಗಿಯಂ (ಛ, ಜ) (4) ಮಹಾ ವಿಭೂತಿಯಿಂ (ಛ, ಝ) (5) ರುಮಂ ಸತಿಯರಂ ಮದುವೆ (ಛ, ಝ) (6) ಬಳಿಕೆ ಸೈಪು ತೊಲಗಿತ್ತವರಂ (ಕ, ಚ) (7) ಮುಟ್ಟುಗೆಟ್ಟು (ಕ, ಜ) (8) ತ್ತಿರ್ದಮತ್ತಮಿರ (ಕ, ಚ) (9) ಕಂಡು (ಕ, ಚ) (10) ಮನೆಯ್ದಿ (ಛ, ಜ) (11) ಬೀದಿಯಲ್ಲಿ ಪೊಯ್ಯನೆಮೆಲ್ಲಮೆಲ್ಲನೆ (ಕ, ಚ) (12) ಮೆಂದಿಂತು (ಕ, ಚ) (13) ಪರಿಶ್ರಮಮಡಿಸಿದೊಡೆ ಕರಂ ಬಱಲ್ದು (ಛ, ಝ)

ಕಂ|| [1]ತೆರೆದ ಮೊಗಂ ಬಾಗಿದ ಬೆಣ್ |
[2]ನರೆತ ಸಿರಂ ಕವಿದ ಪುರ್ಬುಗಳ್ ಸಂಸೃತಿಯಿಂ ||
ಬುರುಜಲಧಿಯ ನೆಲೆ ನೋಳ್ಪವೊ |
ಲಿರದೂಱುವ [3]ದಂಡುವೆರಸು ಬರ್ಪನನಾಗಳ್ || ೫೩ ||

ವ|| ಮಾಡದ [4]ಮೇಗಣ ನೆಲೆಯಲ್ಲಿ ವಿನೋದಿಗಳುಂ, ವಿದ್ಯಾವಂತರುಂ, ಶ್ರೀಮಂತರುಂ, ರಸಿಕರ್ಕಳುಂ ತನ್ನನೋಲಗಿಸೆ [5]ಮಹೈಶ್ವರ್ಯದಿನಿರ್ಪ ತೊಟ್ಟನೆ ಬೀದಿಯತ್ತಲ್ ನೋಡಿ ಕಂಡು ತಂದೆಯಪ್ಪುದನಱಿದು [6]ಬೇಗಮೆಲ್ದು ಮೇಲುದನಪ್ಪೊಡಂ ಕೊಳ್ಳದೆ ಅಲ್ಲಿ ನೆರೆದಿರ್ದ ಸಭೆಯೆಲ್ಲಮಚ್ಚರಿವಡೆ—

ಕಂ|| ಸುರಪತಿಯಾನುಂ ವಿದ್ಯಾ |
ಧರಪತಿಯಾನುಂ ನಭೋವಿಭಾಗದಿನಿೞಿದೀ ||
ಧರೆಗತಿರಾಗದೆ [7]ಬರ್ಪಂ |
ತಿರೆ ಮಾಡದಿನಿೞಿದು ಬಂದು ಧನ್ಯಕುಮಾರಂ || ೫೪ ||

ವ|| ತಂದೆ[8]ಗಿದಿರಂ ನಡೆದು ಮೆಯ್ಯಿಕ್ಕಿ ಪೊಡೆವಟ್ಟು "ಬನ್ನಿಂ, ಇತ್ತ ಬನ್ನಿ"ಮೆಂದು ಕೆಯ್ಯಂ ಪಿಡಿದು ಮಾಡದೊಳಗಣ್ಗೊಯ್ದು [9]ಚಿತ್ರಾಸನದೊಳ್ ಕುಳ್ಳಿರಿಸಿ ಕಾಲಂ ಕರ್ಚಿ [10]ತಾನೆ ಕಾಲ್ಗಳನೊತ್ತುವಾಗಳ್ ಬೆಕ್ಕಸಂಬಟ್ಟಯ್ಯನಿಂತೆಂಗುಂ—

ಉ|| ರಾಜಕುಮಾರ ಕೇಳ್ ನಿನಗೆ ಭಕ್ತಿಯೊಳಾಮೆಱಗುತ್ತುಮಿರ್ಪುದೊಂ |
[11]ದೋಜೆಯೆ ಪಾೞು [12]ನೀನೆಱಗೆ ಬೆರ್ಚಿದೆನೆಂದೊಡೆ ಬೆರ್ಚವೇಡ ವಿ ||
ಭ್ರಾಜಿತನೆಂ ಭವತ್ತ[13]ನಯನೆಂ ಸುತಧನ್ಯಕುಮಾರನೆಂ ಧರಾ |
ಪೂಜಿತಮಪ್ಪ ಪುಣ್ಯಮೆನಗಾದುದು ನಿಮ್ಮ ಮಹಾಪ್ರಸಾದದಿಂ || ೫೫ ||

ವ|| ಎಂದಾಗಳ್ [14]ಮನಮಿಕ್ಕು ಕಂಡು ಸಂತಸದಿಂ ತೆಗೆದಪ್ಪಿಕೊಂಡು ಪರಸಿದಾಗಳ್ "ಎಮ್ಮಬ್ಬೆಯು ಮಣ್ಣಂಗ[15]ಳುಂ ಸುಖಮಿರ್ದ(ರ್ಪ)ರೆ ಪೇೞು"ಮೆಂ[16]ದೊಡೆ "ಎಲ್ಲರುಂ ಪ್ರಾಣದೊಳೊಳರೆಂಬ[17]ನಿತೆ, ನೀಂ ಪೋದಿಂ ಬೞಿಯಂ ಆಮನೆಯ ದೇವತೆ ಎಮ್ಮ ಪುಣ್ಯದೇವತೆಯನೆಲ್ಬಿಟ್ಟೆ ಕಳೆಯೆ [18]ಕಡುನಿರ್ಧನರಾಗಿ ಬಾೞುತಿರ್ಪ ಅಲ್ಲಿ ಎನ್ನ ತಂಗೆಯ ಮಗಂ

---

(1) ತೆರಳ್ದ (ಘ,ಜ) (2) ನರೆವೆರೆಯುಂ (ಛ,ಝ) (3) ಡಾಂಗೆ (ಕ,ಚ) ದಾಂಟು (ಘ,ಛ,ಖ) ಡಂಗೆ(ಗ) (4) ಮೇಗೆವಿದ್ಯಾವಂತರುಂ ಶ್ರೀಮಂತರಯ ತನ್ನ (ಘ) (5) ಮಹೈಶ್ವರ್ಯದೊಳ್ ಕೂಡಿರ್ಪ (ಕ, ಚ) (6) ದೊಳ್ಮೆಯ್ಮರೆದುಮೇಲುದ (ಕ,ಚ) (7) ಬಂದಂತಿರೆ ಮಾಗಳೆ ಮಿಳಿಮ (ಛ, ಖ) (8) ಗಿದಿರಂ ಬಂದಾಶ್ಚರ್ಯಂಬಟ್ಟು ಬನ್ನಿಮಿತ್ತ ಬನ್ನಿ (ಛ,ಖ) (9) ಪಿರಿದೊಂದು ಸಿಂಹಾಸನದೊಳ್ ಕುಳ್ಳಿರಿಸಿ (ಕ,ಚ) (10) ಕರ್ಚಿ ತಲೆಯೊಳ್ ತಳಿ(ಳಿ)ದುಕೊಂಡು (ಕ,ಚ) (11) ದೋಜೆಯು (ಕ,ಚ) (12) ನೀನೆರಗೆ (ಛ,ಝ) (13) ತನಯ ಸನ್ನುತ (ಘ, ಝ) (14) ಮನ್ನುಮಿಕ್ಕಿರ್ದು (ಛ,ಜ) ಮನಮೊಸೆದಿರ್ಪ (ಖ) ಮನಮಿಕ್ಕಿರ್ದು (ಕ,ಚ) ಸಂತೋಷಂಬಟ್ಟು (ಗ) (15) ಳುಂಬಲ್ಲಿವರೇ ? ಸುಖ (ಕ,ಚ) (16) ದೊಡವರೆಲ್ಲರುಂ (ಕ,ಚ) (17) ನಿಲ್ಲಲ್ಲದೆ (ಕ,ಚ) ತಲ್ಲದಿಂ ಪೆಜಿತಿಲ್ಲ ನಿನ್ನಪೋದಿಂ (ಛ) (18) ಕೆಟ್ಟಳಿದು ದಾರಿದ್ರ್ಯಾಭಿಭೂತರಾಗಿ ಬಾೞು (ಕ, ಚ)

ಶಾಲಿಭದ್ರನೆಂಬನಿಲ್ಲಿರ್ದ(ರ್ಪ)ನಾತನನಾಸೆವಟ್ಟು ಬಂದೆ'' ನೆನೆ "ಶಾಲಿಭದ್ರನ ತಂಗೆ ಮೊದಲಾಗೆ ನಿಮ್ಮ ಸೊಸೆವಿರ್ ಪದಿನಱುವರಾದ" ರೆಂದವರಂ [1]ಕರೆಯಿಸಿ ಪೊಡೆವಡಿಸಿ ತಮ್ಮಣ್ಣಂಗಳ್ ಮಾಡಿದ[2]ಪಾಯಂ ಮೊದಲಾಗಿಂದುವರಮಾದ ವೃತ್ತಾಂತಮೆಲ್ಲಮಂ ತಿಳಿಯೆ ಪೇೞ್ದು ಅಬ್ಬೆಗ ಮಣ್ಣಂ[3]ಗಳ್ಗ ನುಂದಳಮುಮನಟ್ಟಿ ಬರಿಸಿ, ಬರ್ಪಾಗಳ್ ತಾನಿದಿರಾಗಿ ಪೋಗಿ ಪೊಡೆವಟ್ಟೊ ಡಣ್ಣಂಗಳ್ಗೆ ಪರಸು[4]ವನಿತರ್ಕಂ ನಾಲಗೆ ಪೊರಳದೆ ತಲೆಯಂ ಬಾಗಿರೆ [5]ತಾಯೆಂದಳ್ "ಇವರ್ ತಮ್ಮ ಮಾಡಿದ ದೋಷಕ್ಕೆ ಸಿಗ್ಗಾಗಿರ್ಪರ್, ಪಾಪಕರ್ಮರ್" ರೆಂದೊಡೆ [6]"ಅಂತೇಕೆಂಬಿರಿಂತಪ್ಪೈ ಶ್ವರ್ಯಮವರ ನಿಮ್ಮ ಪ್ರಸಾದದಿಂ ನೆಗೞ್ದುದು'' ಎಂದವರಂ ವಿನಯದಿಂ ಮನ್ನಿಸಿರ್ದು ಮಱುದೆವಸ ಮೆಣ್ಬ[7]ರ್ಗಂ ಮಾಡಂಗಳಂ ಮಾಡಿಸಿಕೊಟ್ಟು ಮಹಾದ್ರವ್ಯಪತಿಗಳಂ ಮಾಡಿ ತಾಯ್ಗಂ ತಂದೆಗಂ ಬೆಸಕೆಯ್ವುತ್ತುಮಿರ್ದು ಪೊೞಲೊಳಾರ್ಗಮಗ್ಗಳನುಪ್ಪ ಪುಣ್ಯದಿಂ ಮಹಾಶ್ರೀಮಂತನುಂ ಗುಣವಂತನುಮಾಗಿ—

ಚಂ|| [8]ಪರದಿನ ದಾನಧರ್ಮದ ನಿಯೋಗದ [9]ಚಾಗದ [10]ನಿಟ್ಟೆಯಿಂ ನಿರಂ |
ತರಮೆಸೆ[11]ದಿರ್ದು ವೃತ್ತಿಯು ವಿಭೂತಿಯು ರಂಜನೆ ಶಬ್ದಶಾಸ್ತ್ರದಂ ||
ತಿರೆ ಬುಧರಪ್ಪವರ್ ಬಳಸಿ [12]ಬಂದಿರೆ ಸಂದಿರೆ ಪೆಂಪು ಧಾತ್ರಿಯೊಳ್ |
ನಿರತಿಶಯಂ [13]ಸಮಸ್ತಮಯಮಾಯ್ತೆನೆ ಧನ್ಯಕುಮಾರನೊಪ್ಪಿದಂ || ೫೬ ||

ವ|| ಅಂತು ಪಲವುಕಾಲಂ ಧರ್ಮಾರ್ಥಕಾಮ ಭೋಗ[14]ಮೆಂಬ ತ್ರಿವರ್ಗಮನುತ್ತರೋತ್ತರಂ ನೆಗೞ್ದು ನಡೆಯಿಸುತ್ತಿರ್ಪಿನಂ ತನ್ನ ಮೆಯ್ದುನಂ ಶಾಲಿಭದ್ರಂ ತಪಂಬಡುವೆನೆಂದು ಮೆಯ್ಯನೊಡಂ ಬಡಿಸಲ್ ಮನೆಯೊಳಿರ್ದು ಭಾವಿಸಿದಪ್ಪನೆಂಬುದಂ ಧನ್ಯಕುಮಾರಂ ಕೇಳ್ದು ಸುಭದ್ರೆಗಾಮಾತಂ ಪೇೞ್ದು "ಬಾ, ನಿಮ್ಮಣ್ಣನಂದನುಂ [15]ನೋೞ್ಪೆ'' ಮೆಂದಿರ್ವರುಂ ಶಾಲಿಭದ್ರನ ಮನೆಗೆ ಪೋಗಿ [16]ಸತ್ಪ್ರೀಯದಿಂ ಸಂತೋಷಂಬಟ್ಟು· ಕುಳ್ಳಿ "ರ್ದಿಂತೇಕೆ ಬಡವಾದಿರೆ'' ನೆ ಶಾಳಿಭದ್ರನೆಂಗುಂ— ಈ [17]ಶರೀರದಂದಮಂ ನೀಂ ಬಗೆಯಿರೆ !

ಕಂ|| ಪೊರಿಸುವುದೊರ್ಮೆ ವಿಗತಾ |
ಹಾರದೆ ಗಳಿಯಿಸುವುದೊರ್ಮೆ ತಾನೀ[18]ಮೆಯ್ಯೊಳ್ ||
ಸಾರದ ಬಾರದ ದುಃಖಾ |
ಕಾರದ ಮೊದಲಪ್ಪ ತೆಱನ[19]ನನಿತಂ ಬಗೆಯಾ || ೫೭ ||

---

(1) ಬರಿಸಿ (ಕ, ಚ) (2) ಯಮಾದಿಯಾಗಿಯಿಂದುವರಮಾವ ಪ್ರಪಂಚ (ಛ) ಪಾಯಮುಂದುವರಮಾದ ಪ್ರಪಂಚ (ಕ, ಚ) (3) ಗಳ್ಗಂಸಿವಿಗೆಗಳನ (ಕ, ಚ) (4) ವನಿತರ್ಕೆ (ಕ, ಚ) (5) ತಾಯರಿದೆಂದಳವರ್ (ಕ, ಚ) (6) ಇಂತೇಕಪ್ಪಿರಿ (ಛ) ಅಂತೆಂಬಿರದಂ ನುಡಿಯದಿರಿಮಾಗಳಿಂತಪ್ಪೈಶ್ವರ್ಯ (ಕ, ಚ) (7) ರ್ಗಮೆಣ್ಬ್ಮಾಡಂ ಗಳಂ (ಛ, ಖ) (8) ಪರಹಿತ ದಾನ (ಘ, ಖ) (9) ಭೋಗದ (ಕ, ಚ) (10) ವಿದ್ಯೆಯಿಂ (ಛ, ಝ) (11) ದಿಪ್ಪ (ಘ) (12) ಬಂದಿದೆ ಪೆಂಪ (ಕ) ಪೆಂಪು (ಚ) ಪೆಂಪುಕರಂಧರಿತ್ರಿಯೊಳ್ (ಛ, ಜ) (13) ನಿರಸ್ತ ಮಯಮಾಯ್ತೆನೆ (ಕ, ಚ) ನಿರಂತರಮುಮಾಯ್ತೆನೆ (ಛ) (14) ಮೆಂಬೀಶ್ರಾವಕಮಾರ್ಗಂಗಳನುತ್ತರೋತ್ತರ (ಕ, ಚ) (15) ನೋಡಿಬರ್ಪಂ (ಕ, ಚ) (16) ಸಂಪ್ರೀತಿಯಿಂ (ಘ, ಜ) (17) ಶರೀರಧರ್ಮದಂದ (ಕ) (18) ಮೆಯ್ ಸಂಸಾರದ ದುಃಖವಿಕಾರದ (ಕ) ಸಾರದದುಃಖಾಕಾರದ (ಘ)

ವ|| ಎಂದ ಮಾತು [1]ತನ್ನಂ ಮೂದಲಿಸಿದಂತಾಗೆ—ಧನ್ಯಕುಮಾರನಿಂತೆಂದಂ :—

ಚಂ|| ತನು ಮಳ[2]ಧಾರಿ ನಿರ್ಗುಣ ವಿಕಾರಿ ಬಹುಕ್ರಿಮಿಧಾರಿ ಪೊರ್ದಿದೀ |
[3]ಧನಮವಿಶೇಷಿ ಸರ್ವಜನ[4]ರೋಷಿ ಸಮುದ್ಭವದೋಷಿ ಪತ್ತಿದೀ ||
ಮ(ಜ)ನಮವಿಶುದ್ಧಿ ದುಃಖಚಯವೃದ್ಧಿ ಕಳಂಕಿ ನಿಬದ್ಧಿಯೆಂಬುದೊಂ |
ದನುಪಮಬೋಧಿ ಪುಟ್ಟಿದೊಡೆ ಪೇೞ್ ಮನೆಯೊಳ್ [5]ತೊಡರ್ದಿಂತು ನಿಲ್ಪುದೇ
|| ೫೮ ||

ವ|| ಎಂಬ ಮಾತಂ ಶಾಳಿಭದ್ರಂ ಕೇಳ್ದು ಮತ್ತಮಿಂತೆಂದಂ—

ಕಂ|| [6]ಅಱಿದೊಡಮೇಂ ಬಂಧಂ ಮೇಣ್ |
ಪಱಿಪಡುಗುಮೆ ಕಾಲಲಬ್ಧಿ ದೊರೆಕೊಳ್ವನೆಗಂ ||
ತೊಱೆಯಲ್ ತಪದನುಭವಣೆಗೆ |
ನೆಱೆಯುಲೊಡಂಬಡಿಪುದೊಳ್ಪು ಮನೆಯೊಳ್ ಮೆಯ್ಯಂ || ೫೯ ||

ವ|| ಎಂದಾಗಳ್ ಧನ್ಯಕುಮಾರಂ ಮುಗುಳ್ನಗೆ ನಕ್ಕು ಅಱಿವುಳ್ಳಂ ಮನೆಯೊಳಿರ್ದಾಗಳ್ ಮುಳ್ಳ ಮೊನೆಯೊಳಿರ್ದಂತೆ ನೋವುಮಿಲ್ಲದ ಸಾವುಮಕ್ಕುಮೆಂದಿಂತೆಂದಂ—

ರಗಳೆ—ತನು ನಿಲ್ಲದು [7]ಪೊಲ್ಲದು ತಾನೆಂತುಂ—[8]ಧನಮೋತೊಡವಾರದು ಕೇಳೆಂತುಂ ||೧||
ಮನೆ[9]ಯೆಂಬುದು ತಾಂ ಸೆಱೆವನೆಯಂದಂ—ತನಯರ್ ಸೆಱೆವಿಡಿದಿರ್ದವರಂದಂ ||೨||
ಬಲೆಯಂದಂ ಪೆಂಡಿರ [10]ತೊಡರ್ಪಂದಂ—ಕೊಲೆಯಂದಂ ಬಂಧುಗಳೊಂದಂದಂ ||೩||
ಭೋಗಂಗಳೆ(ಳ್)ವಿಷಧರಭೋಗನಿಭಂ—ರಾಗಂ ಬಗೆಪಂದದು ಮೋಗಶುಭಂ ||೪||
ಮೋಹಂ ಸಂಸಾರದ ಬೇರ ತೆಱಂ—ಸ್ನೇಹಂ ಭವಜಲಧಿಯ ನೀರ ತೆಱಂ ||೫||
ಎಸೆದೊಪ್ಪುವ ಸಿರಿ ಪೆರ್ಮುಗಿಲ ತೆಱಂ—ಪೊಸ ಜವ್ವ[11]ನಮುಂ ಗಿರಿನದಿಯ ತೆಱಂ ||೬||

---

(1) ತನ್ನನೂಱಿಯುಂ ತೋಱಿಯುಂ ಸುಡಿದಂತಾಗೆ (ಕ, ಚ) (2) ಭಾರಿ (ಕ, ಚ) (3) ಜನದಮಶೇಷಿ (ಛ, ಖ) (4) ದೋಷಿ (ಜ) (5) ತಡ (ಡೆ) ದಿಂತುಮಿರ್ಪರೇ (ಕ, ಚ) ತೊಡರ್ದೆಂದುನಿಲ್ವರೈ (ಛ, ಝ) (6) ಅರಿವಾದದೊಡಮೇಂಬಂಧಂ (ಕ) ದೊಡಮೆಬಂಧಂ (ಚ) ಅರಿವಾದೊಡೆಗಳಬಂಧಂ (ಛ, ಜ) (7) ಸಲ್ಲದು (ಛ) ಕೇಳೆಂತು (ಕ, ಚ) (8) ಧನಮಾದೊಡವೋಗದು ಕೇಳೆಂತುಂ (ಛ) ತಾನೆಂತುಂ (ಕ, ಚ) (9) ಯಿಂತ್ತದು (ಕ, ಚ) (10) ತೊಡರಂದಂ (ಛ) (11) ನತುಂಬಿದನದಿಯ (ಛ, ಜ)

[1]ಇಂತೆಂತುಂ ಪೊಲ್ಲದು ನರರ ಭವಂ—ಸಂತಸಮಂ ಪುಟ್ಟಿಸ[2]ದೀ ವಿಭವಂ ||೭||
[3]ಅದಱಿಂ ಮೆಯ್ಯಱಿಯದೆ[4]ನಡೆದು ಕರಂ—[5]ಮುದದಿಂದಿರೆ ಪೊರ್ದುವುದಘನಿಕರಂ ||೮||
[6]ಅಱಿವವರಿಂತೆಂತುಂ [7]ಮೆಚ್ಚುಡಲಿಂ—ತೊಱೆಯಿಂ ಮೋಹಂಗಳ [8]ನೀ ಕಡಲಿಂ ||೯||
ನೆಱೆದೊಪ್ಪಿರೆ ಪುಟ್ಟಿದ ಬೋಧಿಫಳಂ—ತಱಿಸಂದು ಮಹಾತಪದಿಂ ಸಫಳಂ ||೧೦||
|| ೬೦ ||

ಕಂ|| ಬಡವಂ ನಿಧಾನಮಂ ಮು |
ಪ್ಪಡಸಿದನಮರ್ದಂ ಸರೋಗಿ ಮರ್ದಂ ಭವದೊಳ್ ||
ತೊಡರ್ದಂ ಬೋಧಿಯನೊಪ್ಪಿರೆ |
ಪಡೆದೊಡೆ ಕಡೆಗಣಿಸಿ ತಡೆಯೆ [9]ಸುಖಮೆಂತಕ್ಕುಂ || ೬೧ ||

ವ|| ಎನೆ ಶಾಲಿಭದ್ರನಿಂತೆಂದಂ. ''ಮನಮನೊಡಂಬಡಿಸದೆ ವೇಳೆಗೊಂಡೊಡಂ ತನುವ ನೊಡಂಬಡಿಸದೆ ತಪಂಗೊಂಡೊಡಂ ದೋಷಂ ಪುಟ್ಟಿದೊಡೇಗೆಯ್ಯಲಕ್ಕು''ಮೆನೆ ಧನ್ಯಕುಮಾರ ನಿಂತೆಂದಂ—

ಚಂ|| ಮಡುವಿನೊಳಬ್ಬವಂ ಪೊಱಡಲೊಲ್ಲದೆ ಮೆಚ್ಚಡನುಂಟುಮಾಡಿ[10]ಕೊಂ |
ಡೊಡೆ ಪುಗುಗುಂ ಜಳಂ ತನುವಿನೊಳ್ ಪಿಡಿಗುಂ ನೆಗಬಲ್ಲಿ ಬಂಧದೊಳ್ ||
ತೊಡರ್ದವರಿಲ್ಲಿ [11]ಮಾಣೆ ಮನಮಂ ಪುಗುಗುಂ ಕಡುಮೋಹಮಂತೆ ಬಂ |
ದಡಸು[12]ಗುಮಂತಕಂ ಬಱಿಯುಮೆಂತು ತಪೋವನದತ್ತ [13]ಪೋದಪಂ || ೬೨ ||

ವ|| ಎಂಬ ಭಾಷೆಯಿಂದಮನಱಿದು ಸುಭದ್ರೆ ಸೈರಿಸಲಾಱದಿಂತೆಂದಳ್—

ಕಂ|| ಎಮ್ಮಣ್ಣನಱಿದು [14]ಮನೆಯೊಳ್ |
ತಾಮ್ಮುನ್ನಂ ಭಾವಿಸುತ್ತುಮಿರ್ಪುದೆ ಪೇಳ್ಗುಂ ||
[15]ತಮ್ಮಿರ್ದಿರವಂ ಬಗೆಯದೆ |
ಕೆಮ್ಮನೆ ಭಾಷೆಯೊಳೆ [16]ತೆಗಱಲಕ್ಕುಮೆ ಪೆಱರಂ || ೬೩ ||

---

(1) ಯೆಂದಿಂತುಂ (ಛ) (2) ದಿಂತು (ಘ) (3) ಅರಿದಿಂ (ಕ) ಅಱಿದಿಂ (ಚ) (4) ತಡೆದು (ಚ) (5) ಮುದದಿಂ (ಕ,ಚ) (6) ಅರಿವುಳ್ಳವರೆಂತುಂ (ಕ) (7) ಮೆಚ್ಚಡದಿರಿಂ (ಛ) (8) ನೀವದಱಿಂ (ಛ) (9) ಸುಖಿಯೆಂತಪ್ಪುಯ್ (ಪ್ಪೈ) (ಛ) ಸುಖಿಯೆಂತಪ್ಪರ್ (ಕ) (10) ಮಾ। ಣ್ದೊಡೆ (ಕ,ಛ) ಮಾಣ್ಬನೆ (ಚ) (11) ರಿಲ್ಲಮಾಣ್ದಿರೆಮನಂ (ಕ,ಚ) (12) ಗುಗುಮ್ಮೃತ್ಯುತಾಂ ಬಳಿಯಮೆಂತು (ಕ,ಚ) (13) ಪೋಪರಾರ್ (ಛ) ಧನದತ್ತ ಪೋಪಿರೇ (ಖ,ಗ)(14) ಮುನ್ನಮೆ ತಾಂ|| ಮನೆಯೊಳ್ ಸಾಧಿಸುತ್ತುಮಿರ್ದಪನಳಿಪೇಂ (ಕ) ದಪುವ ಳಿಪೇ (ಚ) ಭಾವಿಸುತ್ತುಮಿರ್ದಪನುಱಿ ನೀಂ (ಖ) (15) ನಿಮ್ಮಿರ್ದಿರ (ಕ, ಚ) (16) ತಗುಳಲಕ್ಕುಮೆ(ಛ) ನುಡಿಯಲಕ್ಕುಮೆ ಕೆಲರಂ (ಜ)

ವ|| ಎಂಬ ಮಾತಂ ಕೇಳ್ದು 'ಧನ್ಯಕುಮಾರಂ [1] ನೀನೆಂದಂತು ಪೆಱರ[2] ನೇನೆಂಬುದೊ ! ಕೇಳ್, ತುಱುಲ[3] ಸಂದಂಗನುವರಂ ಮುಟ್ಟಿದೊಡಂ, ಶ್ರಾವಕಂಗೆ ಬೋಧಿ ಪುಟ್ಟಿದೊಡಂ, ಆತಂ [4] ತೊಂಗಲನೇಱಿಸಿಕೊಂಡು ನಡೆವುದು. ಈತಂ ಮಹಾವ್ರತಂಗಳನೇಱಿಸಿಕೊಂಡು ತಪೋವನಕ್ಕೆ ನಡೆವುದುಂತಿರ್ವರುಂ ಮನೆಯುಂ ಪೊಕ್ಕಿರಲಾಗದು ಎಂಬುದಕ್ಕೆ!, ಅಂತೆ ಯಾನಾರುಮಂ ನುಡಿವುದ ಱಿಂ ಕೀಳೇನೀಮಾತಂ ಎನಗೆ ನುಡಿದೆಂ' ಎಂದಾಗಳೆ ತನ್ನ ಮನೆಗೆ ವಂದು ಜ್ಯೇಷ್ಠಪುತ್ರನಂ ಕರೆದು ತನ್ನ ಪದವಿಯನೆಲ್ಲಮಂ ಕೊಟ್ಟುಳ್ಳುದಂ ಮಹಾದಾನಂಗೆಯ್ದು ಪೊಱಮಟ್ಟು ದೀಕ್ಷೆಯಂ ಕೆಯ್ಕೊಂಡುತ್ತರೋತ್ತರಂ ನೆಗಱ್ದು ತಪಮಂ ಚಾರಿತ್ರಮುಮಂ ಸಂಪೂರ್ಣಂಮಾಡಿ ವೊಂಬತ್ತು ತಿಂಗಳಿಂಗೆ ಸಲ್ಲೇಖನಾಕಾಲದೊಳುತ್ತಮಸ್ಥಾನಪ್ರಾಪ್ತ್ಯಭಿಪ್ರಾಯದಿಂ ಪ್ರಾಯೋಪಗಮನಂ ಗೆ[5]ಯ್ದು ಪರೀಷಹಂಗಳಂ ಸೈರಿಸಿ ಧರ್ಮಧ್ಯಾನದೊಳ್ ಮುಡಿಪಿ ಸರ್ವಾರ್ಥಸಿದ್ಧಿಯನೆಯ್ದಿದ ನೆಂಬ ಕಥೆಯಂ ಬಗೆದು ತಱಿಸಲ್ವುದು. *ಮುಕ್ತಿಶ್ರೀಯಂ [6] ಕೂಡಲಾರ್ಪ ಬೋಧಿರತ್ನಮ ನೆಂತಪ್ಪ ಭಾವನೆಯಿಂ ಪಡೆಯಲಕ್ಕುಮೆಂದೊಡೆ — ಅಧ್ರುವಾದ್ಯನುಪ್ರೇಕ್ಷಾನೈರಂತರ್ಯ ಭಾವನೆಯಂ ಭಾವಿಸೆ ಬೋಧಿ ನಿಲ್ಕುಂ. ಅದಱಿಂ ತಡೆಯದೆ ಮುಕ್ತಿಯಕ್ಕುಂ.

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

**ಬಂಧುವರ್ಮ ನಿರ್ಮಿತಮಪ್ಪ**

## ಜೀವಸಂಬೋಧನಾ ಗ್ರಂಥಾವತಾರದೊಳ್

ಬೋಧಿದುರ್ಲಭಾ (ತತ್ತ್ವಾ) ಭಿಧಾನಂ

ಏ ಕಾ ದ ಶಾ ಧಿ ಕಾ ರ ಂ.

———:O:———

ಇದು ಕ, ಚ, ಜ ಪ್ರತಿಗಳಲ್ಲಿದೆ—

ರಾಜ್ಯೇ ಮತಿಂ ಯಃ ಪ್ರವಿಹಾಯ ಮೋಕ್ಷೇ– ಸ್ಥಿತಿಂ ಚಕಾರಾಪುನರಾಗಮಾಯ ||
ಜೀವೇಷು ಸರ್ವೇಷು ದಯಾಂ ದಧಾನಃ – ತಂ ನೇಮಿನಾಥಂ ಪ್ರಣಮಾಮಿ ನಿತ್ಯಂ ||

(1) ನೀನೆಂಬಂತೆ (ಕ, ಚ) (2) ನೇಕೆಂಬುದು (ಕ, ಚ) (3) ಸಾಧನಂಗನು (ಕ, ಚ) (4) ತೊವಲ ನೇಱಿಸಿ (ಛ) ತಿಗುರುಗುರ್ವೆರಸಿಕೊಂಡು. (ಖ, ಗ) ತೊಲಗದಛಲಮನೇ (ಝ) (5) ಯ್ದುಪಸರ್ಗಂಗಳಂ ಸೈರಿಸಿ (ಛ, ಜ) (6) ಮಾಡಲಾರ್ಪ (ಕ, ಚ)

* ಶ್ರವಣಬೆಳ್ಗುಳದ ಮಠದ ಪ್ರತಿಯಲ್ಲಿ (ಕ) ಇಲ್ಲಿ "ನುತವೈಶ್ಯೋತ್ತಮ" ಎಂಬ ಗ್ರಂಥೋಪಸಂಹಾರ ಪದ್ಯ, ಬೋಧಾಭಿಧಾನಂದ್ವಾದಶಾಶ್ವಾಸಂ ಎಂಬಆಶ್ವಾಸಾಂತ್ಯಗದ್ಯ, ಗ್ರಂಥವನ್ನು ಬರೆದವನ ವಿಷಯ, ಗ್ರಂಥವನ್ನು ಬರೆದ ಕಾಲ ಇವನ್ನು ಬರೆದಿದೆ. (ಈ ಅಧಿಕಾರ ಆ ಪ್ರತಿಯಲ್ಲಿ ಕೊನೆಯದಾಗಿದೆ)

## ॥ ದ್ವಾದಶಾಧಿಕಾರಂ ॥

## — ಧ ರ್ಮಾ ನು ಪ್ರೇ ಕ್ಷೆ —

ಕಂ॥ ಧರ್ಮಮನಾದ[1] ಯಿನೊದವಿದ ।
ಕರ್ಮದ ಕೇಡಿಂಗೆ ಮೂಲಮಾದಱಿಂ ಜೀವ ॥
ಕ್ಕಾರ್ಪಂ ಪೆರದಾವುದೊ ಸಾ ।
ಸಿರ್ಮಡಿ ಯಾಗೊದವಿ ಸುಖಮನೀಗುಂ ಕಾಗುಂ ॥ ೧ ॥

ವ ॥ [2]ಬೆಳಸನಾಸೆವಡುವಂಗಾರಂಬಮೆ ಮೂಲಂ, ಸುಖಮನಾಸೆವಡುವಂಗೆ ಧರ್ಮಮೆ ಮೂಲಂ,[3] ಅದು ತಾಂ—

---

ಈ ಸಂಸ್ಕೃತ ಪದ್ಯ ಟೀಕೆಗಳು (ಕ, ಜ, ಚ) ಪ್ರತಿಗಳಲ್ಲಿ ಮಾತ್ರ ಇವೆ—

ಸರ್ಪಾಧಿರಾಜಃಕಮಠ[4]ರ್ದಿ(ತೋಯೋ)ತಸ್ಯ—ಧ್ಯಾನೇ(ನಂ)ಸ್ಥಿತಸ್ಯೈವ
ಫಣಾವಿತಾನೈಃ ।
ಯಸ್ಯೋಪಸರ್ಗಂ ನಿರವರ್ತಯತ್ತಂ—ನಮಾಮಿ ಪಾರ್ಶ್ವಂ ಮಹತಾದರೇಣ ॥ ೧ ॥

ದಾತಾಭೀಷ್ಟವಿಶಿಷ್ಟವಸ್ತು ನಿಚಯಸ್ಯಾಕಾಂಕ್ಷಿ ತೊ(ಣೋ)ಪಿ ಕ್ಷಣಾತ್ ।
ಹರ್ತಾSSರ್ತೇರ್ನರನಾರಕಾದಿಭವಸಂಭೂತೇಃ ಸ್ಮೃತೇ ರ್ಭೀಕೃತೇಃ ॥
ಹನ್ತಾSSಕ್ರಾಂತ ಜಗತ್ರಯಾಂತಕರಿಪೋಃ ಸ್ವಾಂತಂ ಗತಸ್ಸನ್ ತತಃ ।
ತ್ರಾತಾSತ್ರಾಣಶರೀರಿಣಾಂ ನ ಹಿ ಪರೋ ಧರ್ಮಾತ್ ಸುಶರ್ಮಪ್ರದಾತ್ ॥ ೨ ॥

ಟೀಕೆ॥ ಕ್ಷಣಾತ್-ಒಂದು ಕ್ಷಣದತ್ತಣಿಂದಮುಂ(ವುಂ?) ಅಕಾಂಕ್ಷಿತೋS(ಣೋ)ಪಿ-ಬಯಸದಂಗಂ,ಅಭೀಷ್ಟವಿಶಿಷ್ಟವಸ್ತುನಿಚಯಸ್ಯ-ಬಯಸಿದೊಳ್ಳಿತಪ್ಪವಸ್ತುಗಳ(ನ)ಸಮೂಹಮಂ,ದಾತಾ ಕುಡುವುದು, ನರನಾರಕಾದಿಭವಸಂಭೂತೇಃ—ಮನುಷ್ಯನಾರಕ ಮೊದಲಾದ (ಗತಿ)ಗಳೊಳಾದ, ಸ್ಮೃತೇಃ—ನೆನೆವಿನತ್ತಣಿಂ, ಭೀಕೃತೇಃ—ಭಯಮಂ ಮಾಳ್ಪ, ಆರ್ತೇಃ—ದುಃಖಮಂ, ಹರ್ತಾ (ಹನ್ತಾ) ಕಿಡಿಸುವುದು, ಆಕ್ರಾನ್ತ ಜಗತ್ರಯಾಂತಕರಿಪೋಃ—ಮೂಱುಲೋಕಮಂಗೆಲ್ದ ಮೃತ್ಯುವೆಂಬ ಪಗೆವನಂ, ಹನ್ತಾ-ಕಿಡಿಸುವುದು, ಯಃಯಾವುದೊಂದು, ಸ್ವಾಂತಂಗತಸ್ಸನ್-ಮನದೊಳಿರ್ದುದಾಗಿ, ತತಃ—ಅದು ಕಾರಣದಿಂ, ಅತ್ರಾಣ ಶರೀರಿಣಾಂ—ಕಾಪಿಲ್ಲದ ಪ್ರಾಣಿಗಳಂ. ತ್ರಾತಾ—ಕಾವಂ(ವುದು ?) ಪರಃ—ಪೆಱದು, ನ ಹಿ—ಇಲ್ಲಂ, ಸುಶರ್ಮಪ್ರದಾತ್—ಉತ್ತಮಮಪ್ಪ ಸುಖಮಂ ಕುಡುವ, ಧರ್ಮಾತ್—ಧರ್ಮದತ್ತಣಿಂ, (ಜೀವಂಗಳ ಕ್ಲೇಶಂಗಳಿಂದೆತ್ತುವ [5]ಧರ್ಮಮಂ ಪೇಳ್ವ ಧರ್ಮಾನುಪ್ರೇಕ್ಷೆ) (ಈ ಟೀಕೆ ಕ ಪ್ರತಿಯಲ್ಲಿಲ್ಲ)

---

(1) ಯ (ಗ,ಗ) (2) ಫಳಮಂ (ಕ,ಗ) (3) ಇಲ್ಲ (ಕ,ಗ,ಚ) (4) ರಿತೋಯೆ (ಕ,ಗ) ದಿತೋ (ಚ)
(5) ಧರ್ಮಸ್ವರೂಪಮಂ (ಕ)

ಮ|| ಎರಡುಂ ಮಾಱಿಕ್ಕೆಯ ಧರ್ಮಮಕ್ಕು ಮದಱೊಳ್ ಮು[1]ತ್ತಾರುಮಂತಾವುದಂ |
ಭರದಿಂ ಕೆಯ್ಕೊಳಲಾರ್ಕು[2]ಮಂತದನೆ ತಾಂ ಕೆಯ್ಕೊಂಡು ಪೂಣ್ದಿಯ್ಪೆ [3]ಬಿ ||
ತ್ತರಿಸುತ್ತಿರ್ಪುದು [4]ಕೆಮ್ಮನಿರ್ಪುದು ಕರಂ ಚೆ[5]ಲ್ವಲ್ತು ಕರ್ಮಾರಿಯುಂ |
ನಿ(ಪ)ರಿವುದ್ಯೋಗ ಮ[6]ದೀ ನಿಯೋಗಮೆನೆಯುಂ [7]ಕೆಯ್ಕೊಳ್ಳದೇಕಿರ್ಪಿರೋ || ೨ ||

ವ|| ಎರಡುಂ ಮಾಱಿಕ್ಕೆಯ ಧ[8]ರ್ಮಮಾವುವೆಂದೊಡೆ:—ದಾನಂ ಪೂಜೆ ಶೀಲಂ ಉಪವಾಸಮೆಂಬೀ ನಾಲ್ಕುಂತೆಱದ (ಧರ್ಮಂ) ಶ್ರಾವಕಧರ್ಮಂ, ಮತ್ತಮುತ್ತಮಕ್ಷಮಾಮಾರ್ದವಾರ್ಜವ ಸತ್ಯಶೌಚ ಸಂಯಮ ತಪಸ್ತ್ಯಾಗಾಕಿಂಚಿನ್ಯ ಬಹ್ಮಚರ್ಯಮೆಂದಿಂತು [9]ದಶಲಕ್ಷಣಂ ಯತಿಧರ್ಮಂ. [10]ಅಂತೆರಡುಂ ಧರ್ಮಂಗಳೊಳ್ [11]ಆವುದನಾರ್ಪನಿತು ಕೆಯ್ಕೊಂಡು ನೆಗಱ್ದಿಡಲ್ಲದೆ [12]ಕರ್ಮಕ್ಷಯಂಗೆಯ್ಯಲುಂ, ಸುಖದೊಳ್ ನಿಲಲುಂ ಕೂಡದು. ಮಾಣ್ದಿರ್ಪ ಕಾರಣ[13]ಮೇನೊ!

ಕಂ|| ಕಿಡುಪ ಕಸವರಮನೆಂತುಂ |
ಕಿಡುವೊಡಲಂ ಧರ್ಮದೊಳ್ ತಗುಳ್ಚಿದೊಡೆಂತುಂ ||
ಕಿಡದ ಗತಿಯಕ್ಕು ಮೆಂದೊಡೆ |
ಕಡೆಗಣಿಪುದೆ ಕುಡದೆ ಕೊಂಡ ಲೆಕ್ಕಂ ಕಾಣಾ || ೩ ||

ವ|| ತೌಡಿನ ಮಾ[14]ಱೊಳ್ ಮಾಣಿಕಂ ದೊರೆಕೊಂಡೊಡಂ ಕೆಮ್ಮಗೆ ಸಾರ್ದು ಬಂದ ನಿಧಿಯೆನ್ನದೆ ಮಾಱಿಂದು ಬಗೆವಾ(ವುದೇ)!

ಶಾ|| ಪತ್ತಿರ್ದೀಗಡಿನುಳ್ಳ [15]ಸೈಪನಱಿವೋ ಮುಂ ಗೆಯ್ದ ಸದ್ಧರ್ಮದಿಂ |
ಪೆತ್ತೈ ಮತ್ತೆ ಬಿಸುಟ್ಟೆ ಧರ್ಮಮನದೇಂ [16]ಮೇಗಣ್ಗೆ ಕೇಡಱ್ತಿಯೋ ||
ಬಿತ್ತಿಂದಂ ಬೆಳೆವೊಕ್ಕಲೆಂತು ಮಗುಳ್ದುಂ ಮುಂದಣ್ಗೆ ಧಾನ್ಯಂ[17]ಗೊಳಲ್ |
ಬಿತ್ತಂ ಬಯ್ತಿಡುವಂತೆ ಧರ್ಮಮನೆ ನೀಂ ಕೆಯ್ಗಾವುದಿಂ ಜೀವನೇ || ೪ ||

---

ಇದು ಘ ಪ್ರತಿಯಲ್ಲಿಲ್ಲ—
ಜಿನಧರ್ಮೋऽಯಮುತ್ಪನ್ನಂ ದುರ್ಲಭೋ ಭವಿನಾಂ ಮತಃ ||
ತಥಾ ಗ್ರಾಹ್ಯೋ ಯಥಾ ಸಾಕ್ಷಾತ್ ಆಮೋಕ್ಷಂ ಸಹಗಚ್ಛತಿ || ೩ ||

ತಾ|| ಎಲೆ ಜೀವನೇ ಜಿನಧರ್ಮಮಿದತ್ಯಂತ ದುರ್ಲಭಮಾಗಿರ್ಪುದು. ಅದು ಪ್ರಾಣಿಗಳ್ಗೆ

---

(1) ತ್ತಾವನೊಲ್ದಾವುದಂ (ಕ, ಚ) ತ್ತಾವನೋತಾವು(ಜ) (2) ವುತ್ತದನೆ(ಚ) ಮುಪ್ಪುದ(ಗ) (3) ನಿತ್ತ (ಚ) (4) ನೆಟ್ಟನೆಂಬುದು(ಚ) (5) ಲ್ವತ್ತೆ(ಚ) (6) ದೇನ(ಕ) (7) ಮಾಣ್ದಿರ್ಪುದೇ ಜೀವನೇ (ಕ, ಚ) ಮನೆನೀಂ(ಖ) (8) ರ್ಮಮೆಂಬುವವಾ (ಚ, ಜ) (9) ದಶವಿಧಂ (ಕ, ಚ) (10) ಮಿಂತೀಯೆ (ಕ, ಚ) (11) ಗಾವಳೊಳನಾವುದಕ್ಕಾರ್ಪಮಾರ್ಪುದಂ (ಕ, ಚ) ಕ್ಕಾರ್ಪ (ಜ) (12) ಕರ್ಮಮಂಗೆಲಲುಂ (ಕ) ಗೆಯ್ಯಲುಂ (ಚ) ಕಿಡಿಸಲುಂ (ಗ) (13)ಮಾವುದೊ(ಚ) (14) ಱಂಗೆ (ಚ) (15) ಗೆಯ್ಯುಗಳಿಪಾಂ (ಚ) ಯ್ಯನಱದುಂ (ಗ) (16) ಮುಂದಣ್ಗೆ (ಕ) (17) ಗಳೊಳ್ (ಚ) ಗಳಂ (ಛ)

ವ|| [1] ಅಂತೆ ಆರಂಬಂಗೆಯ್ವಾತಂ ಬಿತ್ತಿದ ಫಲಮನುಣುತಿರ್ದು ಮುಂದಣ್ಗೆ ಬಿತ್ತಂ [2] ಬಯ್ತಂ ಗೆಯ್ಯದೊಡಂ ಪರತ್ರೆಯಂ ಬಯಸುವಾತಂ ಧರ್ಮದ ಫಲಮನುಣುತಿರ್ದು ಮತ್ತಂ ಧರ್ಮಂಗೆಯ್ಯ ದೊಡಮಾತಂಗೆ ಬೆಳಸನಾಸೆವಡಲುಂ ಮಿಾತಂಗೆ ಗತಿಯನಾಸೆವಡಲುಂ ಬಾರದುದಱಿಂ ಧರ್ಮ ಮನೆಂತುಮುದಾಸೀನಂಗೆಯ್ಯದಿರು—

ಕಂ|| ಧರ್ಮಮನೆ ಕಿಡಿಸಿ [3] ಮೋಗಿನಿ |
ಸಾರ್ಮಮಿದೆಂದ(ಬ)ಱಸುಖಕ್ಕೆ [4] ನೀಂ ಮೋಹಿಸುವೈ ||
ಪೆರ್ಮರನಂ ಕಡಿದೋವದೆ |
ನಿರ್ಮಾಲಂ [5] ಮಾಡಿ ಪಣ್ದಿನಲ್ ಬಯಸುವ ವೋಲ್ || ೫ ||

ವ|| ಪಿರಿದಪ್ಪ ಮರನಂ ಕಡಿದು ಪ [6] ಣ್ದಿಂಬನಂತೆ ಧರ್ಮಮನಱದು ಮೆಯ್ಗಿಂಬಂ ಮಾಡು ವವನಂ ಮರು [7] ಳನಲ್ಲದೇನೆಂಬುದು. ಅಂತೇಱಸಿ ನೆಗೞ್ವಂತು ಧರ್ಮಮೇಂ ಕೇವಳಮೆ? ಲೋಕದೊ [8] ಳೀವ ವಸ್ತುಗಳೊಳಂ [9] ಕಲ್ಪವೃಕ್ಷಮುಂ ಚಿಂತಾಮಣಿಯುಂ ಅಗ್ಗಳಮೆಂಬಿವುಂ ಧರ್ಮದೊಳ್ ಸಮನೆ?—

ಉ|| ಆಮುಹನೀಯ ಕಲ್ಪತರು ಬೇಡಿದೊಡಲ್ಲದೀಯದಂತೆ ಚಿಂ |
ತಾಮಣಿ ಚಿಂತೆಯಂ ಬ [10] ರಿಸದೀಯದಿವರ್ಕವು ದೋಷಮಲ್ಲವೇ ||
ಪ್ರೇಮದೆ ಬಂದು ಬೇಡಿಸದೆ ಚಿಂತಿಸಲೀಯದೆ [11] ತಾನೆಸೊಕ್ಕಳಂ |
ಕಾಮಿತವಸ್ತುವಂ ಕುಡುವ ಧರ್ಮದಿನಗ್ಗಳಮುಂಟೆ ಲೋಕದೊಳ್ || ೬ ||

ವ|| ತನ್ನನಾಸೆಪಟ್ಟು ಪೊರ್ದಿದರಂ ಕರ್ಮರಾಜನಿಂ ಕಾಡಲೀಯದೆ ಕಾವ ಪೆಂಪುಂ, ಸುಖಮುಮಂ ಬೇಡಲೀಯದೀವ ಚಾಗದಳವುಂ ಧರ್ಮದೊಳಲ್ಲದೆ ಪೆಱ [12] ತಱೊಳ್ ಕಾಣ ಲಕ್ಕುಮೆ? ನಿಮಗಿಂತಪ್ಪಗ್ಗಳಮಪ್ಪ ಧರ್ಮಮೆಂಬ ಸದ್ವಸ್ತು ದೊರೆಕೊಂಡೊಡದನೇಱಸುವಿ ರೆಂ [13] ಬುದೇಕೆ?—

---

ನಿತ್ಯನಿರ್ಮಳ ನಿಶ್ಶ್ರೇಯಸ ಪ್ರಾಪ್ತಿಯಪ್ಪನ್ನೆಗಂ ಬರ್ಪಂತು ನೆಗೞ್ವುದು ಧರ್ಮಮೆಂಬುದು. ಆ ಧರ್ಮಾನುಪ್ರೇಕ್ಷೆಯಂ ಮೋಕ್ಷಾರ್ಥಮಾಗೆ ನೀನಿಂ ನೆಗೞಲ್ವೇೞ್ಕುಮೆಂಬೀ ಸೂತ್ರಾನುಸಾರ ಮಾದ ದೃಷ್ಟಾಂತ ಕಥಾನಿರೂಪಣಂಗೆಯ್ವನದೆಂತೆನೆ :—

---

(1) ಇಲ್ಲ (ಕ,ಗ) (2) ಬಯ್ತಿಡುವಂತೆ (ಕ) ಯ್ತಿಡದೊಡಂ (ಝ) (3) ಮೆಯ್ಗಿನಿಸಾರ್ಮ (ಕ, ಗ) (4) ಮೋಹಿಸುವುದೇ ಕೇಳ್ (ಕ) ಪೇೞ್ (ಚ) ಮೋಹಿಸುವುದೆ ನೀಂ (ಝ) (5) ಗೆಯ್ದು(ಝ) (6) ಣ್ದಿಂಬ ನುಮಂ (ಕ)ಮಣ್ದಿಂಬನಂತೆ (ಝ) (7) ಳಲ್ಲದೆ ಬುದ್ಧಿವಂತರಲ್ಲರ್ (ಕ) (8) ಳಗ್ಗಳಮಪ್ಪವಸ್ತು (ಚ,ಕ) (9) ಚೂತವೃಕ್ಷಮುಂ (ಕ) (10) ರಿಸಿಯೀವುದ (11) ತಂದು (ಚ) ಮತ್ತೆ(ಗ) (12) ವಱೊಳೇಂಕಾಣ (ಚ,ಝ) (13) ಬುದೇ (ಝ,ಚ)

ಕಂ|| ನಿರತಿಶಯಮಪ್ಪ ಧರ್ಮಂ।
ಕರಮಿೞಿದಱಿನೊದವಿ ಬಂದು ನಿನಗೀ ಮೆಯ್ಯೊಳ್ ||
ದೊರೆಕೊಳ್ವೊಡೆ ನಿಧಿ ಮನೆಯೊಳ್ |
ದೊರೆ[1]ಕೊಂಡೊಡೆ ನೆಗೞ[2]ದಗುೞದಿರ್ಪುದೆ ಮರುಳೇ || ೭ ||

ವ|| ಪೆಱರೆನ್ನಂ ಮರುಳೆಂದೊಡೆ ಮೇಗಾನದಱ ಬೇವಸಕ್ಕಾಱ[3]ನೆಂ[3]ದು ಬೞಲ್ದಿರ್ಪಂತು ಧರ್ಮಮೇನರಿದೇ ?

ಮ|| ಒಡೆಯಂಗಪ್ಪುಬು ಕೇಳ ತನ್ನೊಡಮೆಯಂ ಕೂರ್ತೀವೊಡಂ |
ಬಡವಂಗಪ್ಪುದು ಮೆಯ್ಯನೊಕ್ಕು ಗುಣಮಂ ತಕ್ಕೈಸುವಂಗೊಳ್ಳಿತಂ ||
ನುಡಿವಂಗಪ್ಪುದಿನಿತ್ತು ಮಿಲ್ಲದೊಡೆ [4]ಮೇಣಾ ಚಿತ್ತಸಂಶುದ್ಧಿಯ(ಯಿ)ಂ |
ಪಡೆಯಲ್ಕಪ್ಪುದು ಕಾಣ ಧರ್ಮಮರಿದಲ್ತೇಕಂಜುವೈ ಜೀವನೇ || ೮ ||

ವ|| ಈ ವೃತ್ತದರ್ಥಮೆಂತೆಂದೊಡೆ—ತಕ್ಕೆಡೆ[5]ಯನಱಿದೀಯಲಾರ್ಪೊಡೊಡೆಯಂಗಪ್ಪುದು—ಒಡಮೆಯಿಲ್ಲದೊಡಂ ಗುಣಂಗಳ್ಗೆ ಮೆಯ್ಯನೊಡಂಬಡಿಸಿ ನೆಗೞಲಾರ್ಪೊಡೆ [6]ಬಡವಂಗಪ್ಪುದು. ಇನಿತಿಲ್ಲದೊಡಂ ಮನಮಂ ಶುದ್ಧಿಮಾಡಿ ಶ್ರೀಭಗವದರ್ಹತ್ಪರಮೇಶ್ವರನ ಶ್ರೀಪಾದಪದ್ಮಂಗಳನಾಗಳುಂ ನೆನೆಯುತ್ತಿರ್ಪುದು. ಧರ್ಮಮರಿದೆಂದು ಬೆದರದಿರ್ ?

ಕಂ|| ಎನಿತಾನುಂ ಕಾಲಂ ಪೆಱ |
ರ್ಗನುವಶನಾಗಿರ್ದು ನಮೆದು [7]ನಡುಗಿದೊಡಮೇಂ ||
ನಿನಗೆ ಸುಖಮುಂಟೆ ಧರ್ಮದೊ |
ಳಿನಿಸೊಳಪೊಕ್ಕನಿತಱಿಂದೆ ಸುಖ[8]ಮಿರಲಾಗಾ || ೯ ||

ವ|| ಪೆಱರನೋಲಗಿಸಿ ಸುಖಮಂ ಪಡೆವೆಯಪ್ಪೊಡೆ ನಿನ್ನನೀಗಳಾಳ್ವರ[9]ಸರ್ಕಳೂನರುಮುದಾರಶಕ್ತಿಹೀನರುಮಲ್ಲದಿಲ್ಲ. ಬೆಸನಪ್ಪೊಡೇೞಿದಿಕೆಯುಂ ಪಾಪ[10]ಮುಮಲ್ಲದಿಲ್ಲ. ಅಂತಾಗಿಯು[11]ಮಾಕ್ಲೇಶದೊಳೆ ಮುನ್ನುಳ್ಳುದುಮಂ ಮೆಯ್ಯುಮಂ ತವೆ ಪಲಕಾಲಂ ನಮೆದೊಡಲ್ಲದಿಲ್ಲ. [12]ಎತ್ತಾನುಂ ಪಡೆವೊಡಂ[13]ಸ್ವಲ್ಪಮಲ್ಲದಿಲ್ಲ. ಕೇಳಿಮಿಂ ಧರ್ಮಾರ್ಥಿಯಪ್ಪಾತನೋಲಗದಳವಂ.

---

(1) ಕೊಳ್ವುದು (ಝ) (2) ದೀಗಳಿರ್ಪರೆ (ಕ,ಚ) (3) ದುಬ್ಬಿಗಂ ಬಟ್ಟಿರ್ಪಂತು ಧರ್ಮದೊಳ್ ಸ್ಥೈರಿಸದೆ(ಝ) ಪಂತಿರದೆ (ಕ) (4) ವೇಣ್ಚಿತ್ತಕ್ಕೆಸಂಶುದ್ಧಿ (ಚ,ಝ) (5) ಡೆಗೀಯಲಾ (ಕ,ಚ) (6) ಬಡವನಾಗಿಯುಂ ಮಶಕ್ತನಾಗಿ ಮೆಯ್ಯೊಡಂಬಡದಿರ್ದೊಡೆ ಕರ್ಮಕ್ಷಯೋಪದೇಶಮಂದೇೞ್ವಾಗಮಮನಾರ್ಪನಿತನೋದುವುದು ಓದಿಸೂದು, ವೋದಿ ದೇವರಂ ಗುರುಗಳಂ ಸ್ತುತಿಯಿಸುವುದೊಳ್ಳಿತ್ತು, ಒಳ್ಳಿತ್ತಂ ನುಡಿಯುವುದಿಂತು ನಾಲಗೆಯ ಸಾಮರ್ಥ್ಯದಿನಪ್ಪುದುದಿನಿತುಮಿಲ್ಲವೊಡೆ— (7) ನಿಂತುಗಿವೊಡ (ಕ, ಚ) (8) ಮಿದುಪೊಲ್ಲಾ (ಕ) ಮಿದುಮಕ್ಕುಂ (ಝ) (9) ಸರ್ಗೆಕರಮಭಿ ಮಾನಹೀನರುಮುದ್ಧತರು (ಕ) (10) ಮಂತರ್ಪಬೆಸನಲ್ಲ (ಕ) ಪಾಪಹೇತುವಪ್ಪ (ಕ,ಚ) (11) ಮಾಕ್ಲೇಶಂ ಸಂಕ್ಲೇಶಮಂ ಮಾಡಿ ತನುಮೆಯ್ಯಂ (ಚ) (12) ನಮೆದೆತ್ತಾನುಂ (ಕ,ಚ) (13) ಅದುಂ ಸ್ಥಿರಮಲ್ಲ (ಕ)

[1]ತನ್ನಾಳ್ದನಾವನೆಂದೊಡೆ ಸಕಳ ಜಗತ್ಸ್ವಾಮಿಯಪ್ಪ ಸರ್ವಜ್ಞಂ. ಆವನ ಬೆಸದ ನಿಯೋಗಮಾವುದೆಂಬಾ ! ಪೆಂಪಿನೊಳ್ ಕೂಡಿದ ಧರ್ಮದ ನೆಗೞ್ತೆ. ಕ್ಲೇಶದಾಪತ್ತು ಆವುದೆಂದೊಡೆ [2](ಆತನ) ತ್ರಿಭುವನಸ್ವಾಮಿಯ ಶ್ರೀಪಾದಂಗಳಂ ನೆನೆ(ಯದ)ನಿತೆ. ಅಷ್ಟವಿಧಕರ್ಮಂಗಳೆನಿತು ಕಾಲದಿಂ ಫಲಮಕ್ಕುಮೆಂದೊಡೆ ಶುಕ್ಲಧ್ಯಾನಂ ನಿಶ್ಚಲಮಾದನಿತುಪೊೞ್ತು. ಪಡೆವುದಾವುದೆಂದೊಡೆ ಶಾಶ್ವತಮ[3]ಪ್ಪ ಸಿದ್ಧಸುಖಂ. [4]ಇಂತೆರಡಱೊಳಾವುದುೞುಗುಮೆಂಬುದಂ ನೀಮಱಿದು ನೆಗೞಿಂ—

ಮ|| ಕುಲಮುಂ ರೂಪಮು ಮಾಯು[5]ವಾರ್ಪು ಗುಣಮುಂ ಸೌಭಾಗ್ಯಮುಂ ಭಾಗ್ಯಮುಂ |
ಬಲಮುಂ ತೇಜಮುಮಾಜ್ಞೆಯುಂ ವಿನಯಮುಂ ಚಾತುರ್ಯಮುಂ ಶೌರ್ಯಮುಂ ||
ನೆಲೆಯುಂ ವಿದ್ಯೆಗಳುಂ ಪ್ರಭುತ್ವಗುಣಮುಂ ಸೌಂದರ್ಯಮುಂ ಧೈರ್ಯಮುಂ |
ವಿಲಸದ್ಧರ್ಮದಿನಕ್ಕು[6]ಮೆಂದು ಬಗೆ ನೀಂ ಧರ್ಮಕ್ಕೆ ಗೆಂಟಪ್ಪುದೇ ! || ೧೦ ||

ವ|| [7]ಇಂತು ನಿನ್ನ ಮಚ್ಚಾದುವೆಲ್ಲಂ ಧರ್ಮದಿಂದಕ್ಕುಮೆಂದೊಡೆ [8]ಅದಕೊರ್ಲ್ಲದನುಂ, ರಸಾಯನಂ ದೊರೆಕೊಂಡೊಡದನೊಲ್ಲ[9]ದನುಂ ಇರ್ವರುಂ ಅಱಿವರಲ್ಲಂ. ಎಂತಪ್ಪ ಸುಖಮಂ ಬಯಸುವರ್ ಅಂತ[10]ಪ್ಪ ಸುಖಮೆಲ್ಲಂ ಧರ್ಮದಿನಕ್ಕುಮಲ್ತೆ !—

ಕಂ|| ಕಡು[11]ವೇಟದ ಪೆಂಡಿರೊಳೋ |
ತೊಡನಿರವುಂ ರಸರಸಾಯನಂಗಳ ಪಡೆವುಂ ||
ತಡೆಯದೆ ಧರ್ಮದಿ[12]ನಪ್ಪುದು |
ಗಡಮಲ್ಲದೆ ಬಯಸಿದಂ[13]ದವೇಂ ಕೂಡುಗುಮೇ || ೧೧ ||

ವ|| ಪೆಯಣಂಬೋಪಾತಂ ಸಂಬಳಮಿಲ್ಲದೆ ಉಣಲ್ ಬಯಸಿದೊಡಂ, ಕಾಮಿಯಪ್ಪಾತಂ ತನ್ನಗೆಯ್ದ ಧ[14]ರ್ಮಮಿಲ್ಲದೆ ಸುಖಮಂ ಬಯಸಿದೊಡಂ ಅಂತಿರ್ವರ ಬಯಕೆಯುಮೇಕೆ [15]ಕೂಡುಗುಂ !—

---

(1) ಪೊರೆವಾಳ್ದ (ಚ,ಝ) (2) ಮನವಚನಕಾಯಃ ವಿಶುದ್ಧನಾಗಿರ್ದೇಕಚಿತ್ತದಿಂ ತನ್ನಾಳ್ದನಂ ತ್ರಿಭುವನ (ಝ,ಗ)ನೆನೆವನಿತೆ(ಕ) (3)ಪ್ಪನಂತಸುಖಂ(ಕ,ಚ) (4)ಇಂತೀಯೆರಡೋಲಗದೊಳಾವೋಲಗಮುೞುಗುಮೆಂಬು (ಕ,ಝ,ಚ) (5) ಪೊಳ್ಪು (ಝ) (6) ಮೆಂದಱಿಪೆಯುಂ ಮಾಣ್ದಪೂರ್ದೇಂಜೀವನೆ (ಕ,ಝ) (7) ಇಂತಿನಿತು (ಕ,ಚ) ನೀಂನಚ್ಚುವೊಳ್ಪಾದುವೆಲ್ಲಂ (ಕ,ಚ,ಝ) (8) ಅದನರ್ಥಿ (ಙ್ತು) ಯೊಳ್ಕೆಯ್ಕೊಂಡು ನೆಗಳದೆಯುಂ ರಸರಸಾಯನ (ಕ,ಚ,ಝ) (9) ದೆಯುಮಿರ್ಪರ್ ತಾಮುಱಿವ(ಯ)ರ್ ಮತ್ತಮೋರೊರ್ವರೆಂತಪ್ಪ(ಕ,ಚ,ಝ) (10) ಪ್ಪವೆಲ್ಲಂ (ಕ,ಚ,ಝ) ನಿಮ್ಮಾಮುಚ್ಚುವೊಳ್ಪಾದುವೆಲ್ಲಂ (ಚ) (11) ವೇಡದ (ಝ,ಚ) (12) ನಕ್ಕುಂ (13) ದಮೇ (ಕ,ಝ,ಚ) (14) ದ ಫಲಮಿಲ್ಲದೆ ಸುಖಮಿರಲ್ (ಚ) (15) ಕೂಡಿಬರ್ಕುಂ (ಕ,ಝ)

ಶಾ|| ಇಂದ್ರತ್ವಂ ಬಲ[1] ದೇವಥಾದಿ ಖಚರೇಂದ್ರೋತ್ವತ್ತಿ ಷಟ್ಖಂಡಭೂ |
ಪೇಂದ್ರತ್ವಂ ನಿರುಜತ್ವಮಂತೆ [2] ವಿಜಿಗೀಷುತ್ವಂ ತಪೋ[3] ಯೋಗ ಯೋ ||
ಗೀಂದ್ರತ್ವಂ ಬಹುಶಾಸ್ತ್ರ[4] ಪಾರಗಗುಣಂ ತ್ರೈಲೋಕ್ಯಸಂಪೂಜ್ಯ ಜೈ |
ನೇಂದ್ರಶ್ರೀಪದಮೆಂಬಿನಿತ್ತುಮೊಗೆಗುಂ ಸದ್ಧರ್ಮದಿಂ ಜೀವನೇ || ೧೨ ||

ವ|| ಇಂತಪ್ಪ ಪದ[5] ವಿಯಂ ಮಾಳ್ಪ [6] ಧರ್ಮಮನೆಂತುಂ ಕೆಯ್ಕೊ[7] ಳ್ವುದು, ಅದೆಂತೆನೆ :— [8] ಪಯನಪ್ಪ ಪಸುವಂ ತಣಿಪಿ ನಯದಿಂ ಕಱೆದು ಪಾಲಂ ಕೊಳ್ವಂತೆ ಭವ್ಯನುಂ ಗುಣವಂತರಪ್ಪಾಚಾರ್ಯರಂ ವಿನಯದಿಂ ಪೊರ್ದಿ ಕೇಳ್ದು ಧರ್ಮಮಂ ಬ್ರತಮಂ ಕೆಯ್ಕೊಳ್ವುದು. ಅಂತು [9] ಕೊಂಡ ಪಾಲನೊಲೆಯ ಮೇ[10] ಲಿಟ್ಟು ಕಿಡಲೀಯದೆ ಕಾಸಿಯಾಱಿಸುವಂತೆ ಶ್ರಾವಕ[11] ಧರ್ಮಮಂ ಕೆಯ್ಕೊಂಡ ಬಱಿಕ್ಕೆ ದೀಕ್ಷೆಯೊಳ್ ಮೆಯ್ಯಂ ತಗುಳ್ಚಿ ವಿಷಯ ಕಷಾಯಂ[12] ಗಳಡಗುವಂತು ತಪಂಗೆಯ್ದು ಚಿತ್ತಮನಾಱಿಸುವುದು. [13] ಆಕಾಯ್ದಾಱಿದ ಪಾಲೊ[14] ಳ್ ತುಪ್ಪಮಾಗದೆಂದು [15] ಪೆಪ್ಪನೆಱೆದು ಬಯ್ತಿಟ್ಟು ಮಱುದೆವಸಂ ಕಡೆವ ಮಡಕೆಯೊಳ್ ಸುರಿವಂತೆ ಸಂಯತನು ವಿಪಾಭವದೊಳ್ ಮುಕ್ತಿಯಾಗದೆಂದು ಮನವಿಕ್ಕಿರದೆ ಶುಭಪರಿಣಾಮದೊಳ್ ಮುಡಿಪಿ ದೇವಲೋಕದೊಳ್ ಪುಟ್ಟಿ ಮಗುಳ್ದು ಬಂದೀ ಮನುಷ್ಯರೊಳುತ್ತಮನಾಗಿ ಪುಟ್ಟುಗುಂ. ಅಂತಾ ಮಡಕೆಯೊಳ್ ಸುರಿದ [16] ಮೊಸರೊಳ್ ಕಡೆಗೋಲನಿಕ್ಕಿ ಸುತ್ತಿರ್ದ ನೇಣೆನೆರಡುಂ ಕಡೆಯುಂ ಪಿಡಿದು ಕಡೆಯೆ ಬೆಣ್ಣೆಯಪ್ಪಂತೆ ಮನುಷ್ಯೋತ್ತಮನಾಗಿ ಪುಟ್ಟಿದಾತಂ ಮಹಾವ್ರತಮಂ ಕೆಯ್ಕೊಂಡು ತಪಮುಂ ಚಾರಿತ್ರಮುಮೆಂಬೆರಡರೊಳಮುತ್ತರೋತ್ತರಂ ನೆಗಲ್ದು ಋದ್ಧಿಪ್ರಾಪ್ತನಪ್ಪುದಾ ಬೆಣ್ಣೆಯಂ ಪದದೊಳ್ ಕಾಸಿದಾಗಳ್ ನೊರೆಯುಂ ಗಸಟುಂ ಪತ್ತುವಿಟ್ಟು [17] ಪೋಗೆ ತಿಳಿದು ಕಂಪುಮಿಂಪುಮುಳ್ಳ ತುಪ್ಪಮಪ್ಪಂತೆ ಋದ್ಧಿಪ್ರಾಪ್ತನಾದ ಮುನಿಯುಂ ತನ್ನ ಶುಕ್ಲಧ್ಯಾನ[18] ದೊಳ್ ಶುಭಾಶುಭಕರ್ಮಂಗಳುಂ ಪಱಿಪಟ್ಟು ಪೋಗಿರೆ ಜ್ಞಾ[19] ನಾದಿಗುಣಂಗಳೊಳ್ ಕೂಡಿ ಪರಮಾತ್ಮನಕ್ಕುಮಿಂತು—

ಕಂ|| ಪಡೆ[20] ವರ್ ಸುಖಮಂ ಧರ್ಮಮ |
ನೊಡರಿಸೆ ಪಾಪದೊಳೆ ದುಃಖಮೆಂಬುದ[21] ನಿದನಿಂ ||
ತೆಡೆವಿಡದೆ ಲೋಕಮಱಿವುದು |
ಬಿಡದದನಾ(ಮಾ)ಮಱಿಪೆ ಕೇಳಿರೆಮ್ಮೊಳ್ ಛಲಮೇ || ೧೩ ||

(1) ದೇವತಾದಿ (ಕ,ಜ) (2) ಗಿಜನಿಷುತ್ವಂ (ಖ,ಛ) (3) ಯೋಗಿಯೂ| ಪೇಂದ್ರತ್ವಂ (ಕ,ಝ,ಜ) ಯೋಗಯುತೇಂದ್ರತ್ವ (ಚ,ಖ) (4) ಸಾಗರಗುಣಂ (ಝ,ಛ) (5) ವಿಗಳಂ (ಕ,ಝ,ಚ) (6) ಸದ್ಧರ್ಮ (ಕ,ಚ) (7) ಳ್ವುದೆಂಮೊಡೆ (ಕ.ಝ) (8) ಪಯನಪ್ಪಾವಂ (ಝ) (9) ಕೊಂಡಾ (ಕ,ಚ) (10) ಲಿಟ್ಟರೆಕಾಸಿ (ಕ,ಝ,ಚ) (11) ವ್ರತಮಂ (ಕ,ಚ,ಛ) (12) ಗಳುಡುಗು (ಝ, ಛ) (13) ಆಂತಾಕಾ (ಕ, ಚ) (14) ಳೀಗಳ್ (ಛ) ಳಂತೆ (ಕ,ಚ) (15) ಮನಮಿಕ್ಕಿ ಹೆಪ್ಪನಿಟ್ಟು ನಿಲವಿನೊಳ್ ಬಯ್ತಿಟ್ಟು (ಕ, ಝ, ಚ, ಛ) (16) ಪಾಬೊಳ್ (ಛ) ಮಡಕೆಯೊಳ್ ಕಡೆಗೋಲ (ಕ,ಚ) (17) ಪೋಗೆ ನಿರ್ಮಲಮಪ್ಪ ತುಪ್ಪಮಪ್ಪಂತೆ ಜ್ಞಾನಾದಿ (ಕ,ಚ) (18) ದೊಳ್ ಕೂಡಿದಾಗಳ್ (ಝ) ಪತ್ತುವಿಟ್ಟುಪೋಗೆ (ಝ) (19) ನಾದ್ಯನಂತಗುಣ (ಛ) (20) ಪಂ (ಕ,ಝ) ವಸುಖಂ ಧರ್ಮದಿ ನೀ (ಝ) (21) ನಿರದಿಂ (ಕ,ಝ,ಚ)

ವ|| ಪಿತ್ತವ್ಯಾಧಿಯುಳ್ಳಾತಂ ಪಾಲೊಳ್ ಸವಿಯುಳ್ಳುದನಱಿದು ಮರ್ದೆಂದು ಕುಡಿಸುವಾಗಳ್ [1]ರುಚಿಗೆಟ್ಟೊಲ್ಲದೆ ಮಾಣ್ಬಂ. ನೀಮುಂ ಧರ್ಮದೊಳ್ ಸುಖಮುಪ್ಪುದನಱಿದು ಮಱಿವರ್ ಕಲ್ಪಿಸುವಾಗಳ್ ಮನಂಗೆಟ್ಟೊಲ್ಲದೆ ಮಾಣ್ಬಿರಿ. ಆ ಪಿತ್ತವ್ಯಾಧಿಯುಳ್ಳಾತಂಗೆ [2]ಬೆಜ್ಜರೊಳ್ ಫಲಮೋ ? ನಿಮಗಮಱಿವುಳ್ಳರೊಳ್ ಫಲಮೋ ? ಬೇಡ ! ನೀಮೆಂತುಂ ಧರ್ಮದೊಳ್ ನೆಗಱ್ವುದು—

ಚಂ|| ನೆರೆಪುವು[3]ದೊಪ್ಪೆ ಪುಣ್ಯಮನದುಳ್ಳೊಡೆ ಬರ್ಪುಪಸರ್ಗ[4]ಮೆಲ್ಲಮುಂ |
ಬರಲಣಮಿಾಗುಮೇ ಬಿಡದೆ [5]ಪೋಗು ಮನಂಗೊಳೆ ಕಾಗು ಚಿಲ್ಪಿನಿಂ ||
ದಿರಿಸುಗುಮೊಳ್ಪಿತಂ ಬರಿಸುಗುಂ [6]ರವಿ ಬೆಟ್ಟದನಾರ್ಗಮೇಕೆ ! ತಾ |
ವರೆಯುನಲಚರ್ಗುಂ ಸುಕೃತಮುಳ್ಳರನಾರ್ ಕಿಡಿಸಲ್ ಸಮರ್ಥರೋ || ೧೪ ||

ವ|| ಈ ಜಗದೊಳುಳ್ಳ ಸಚರಾಚರ ಜೀವಂಗಳೆಲ್ಲಮಂ ನೋಯಿಸುವಾದಿತ್ಯನ ಕಿರಣಂ[7]ಗಳ ಬೆಂಕೆ ತಾವರೆಯಂ ನೋಯಿಸಲಾರ್ತುದಿಲ್ಲ. ಅಂತುಟಪಱ ಪುಣ್ಯಸಾಮ[8]ರ್ಥ್ಯಮಿರ್ಪು (ಮಪ್ಪ) ದಱಿಂ. ಸುಕೃತಮುಳ್ಳರನಾರುಂ ಕಿಡಿಸಲ್ಬಾರದೆಂಬುದನಱಿದು ಧರ್ಮದೊಳ್ ನೆಗಱ್ವುದು—

ಕಂ|| ಭ್ರಾಂತೇಂ ಸುಖಿಗಂ ದುಃಖಿಗ |
ಮೆಂತುಂ ಧರ್ಮದೊಳೆ ನೆಗಱೆವೇಱ್ವುದು ಸುಖಮು ||
ತ್ಯಂತಂ [9]ಪೆರ್ಚಲ್ ಕಡುದುಃ |
ಖಂ[10]ತನಗಂ ಪೊರ್ದ[11]ದಿರಲೆ ವೇಱ್ವುದಱಿಂದಂ || ೧೫ ||

ವ|| ಒಡೆಯಂ ದ್ರವ್ಯಮಂ ಕಾಯಲೆವೇಱ್ವುದು. ಬಡವಂ ತನ್ನೆಡಱಿಂ [12]ನೀಗಲೆವೇಱ್ವುದು. ಅದಱಿಂ [13]ನೀಮಿರ್ವರುಂ ಬುದ್ಧಿಯೊಡೆಯರಾಗಲೆವೇಱ್ವುದು. ಅಂತೆ ಸುಖಿ[14]ಯು ಮನಸ್ಸು ಸುಖಮನೆ ಪೆರ್ಚಿಸಲ್ವೇಱ್ವುದು. ದುಃಖಿಯುಂ ಮೇಗೆ ದುಃಖಮು[15]ನಾಗಲೀಯದಿರವೇಱ್ವುದು. [16]ಅಂತಿರ್ವರುಂ ಧರ್ಮಮಂ ನೆ[17]ಗಱವೇಱ್ವುದು. ಏಕೆ ತಡೆದಿಪಿ(ಪ)ರ್ಱ್—

(1) ರುಚಿಗೆ (ಛ,ಝ) (2) ಬೆಜ್ಜಿನೊಳ್ (ಝ, ಚ) (3) ದೊಪ್ಪಿ (ಕ,ಚ) (4) ಮೇನುಮಂ (ಕ,ಚ,ಛ) ಮೊಂದುಮಂ (ಝ) (5) ಸೋಗು (ಸೋಗುಂ ಎಂದಿರಬಹುದು) (ಛ,ಝ) (6) ಕರ (ಝ) (7) ಗಳೆಂಬ ಬೆಂಕೆನೀರತಾವ (ಕ,ಝ) (8) ರ್ಥ್ಯದಿಂ (ಕ,ಛ) ರ್ಥ್ಯಮೆಂತಂತೆ (ಝ) (9) ಪೆರ್ಚಮೊಡಂ (ಕ) ಪೆರ್ಚಿಸಲ ಮದು (ಚ) ಪೆರ್ಚಲುಕಡು (ಝ) (10) ತನ್ನಂ (ಕ) (11) ದಮವೆ (ಕ) ದಿಸಲಿ (ಛ) ದಿರಲು (ಝ) (12) ನೀಗಲೆವೇ (ಕ,ಚ) (13) ದಿರ್ವರುಂ(ಕ,ಚ) (14) ಯುಂ ಮತ್ತೆಂ ಸುಖಮನೆ (ಕ) (15) ನಾಗದಿರ(ಕ) ನಾಗಲರಿಯ(ಚ) (16) ಅಂತೆರಡು ತಂಡಮುಂ (ಕ,ಝ,ಚ) (17) ಗೆಯ್ಯಲ್ವೇಱ್ವುದೇಕೆ ತಡೆ(ಯು)ದಿರ್ಪಿರ್ರೈ(ಕ)

ಚಂ|| ಎನಿತೆನಿತಗ್ಗಳಂ ನೆಗ[1]ೞ್ದುಮುತ್ತಮಧರ್ಮದೊಳಾತ್ಮಶುದ್ಧಿಯಿಂ |
ದನಿತನಿತೀ ಜಗತ್ತ್ರಯದೊಳಗ್ಗಳಮಕ್ಕು[2]ಮನೂನ ಭಾವದಿಂ ||
ದೆನುತಿರೆ[3] ನಂಬದಿರ್ಪರವು ಕಾಣದ ಶಂಕೆಯಿನಾದು[4]ದಪ್ಪುದೀ |
[5]ವಿನುತಗುಣಾಢ್ಯರಂ ವಿನಯ[6]ದಿಲ್ಲಿಯೆ ಪೂಜಿಸಿ [7]ಕಂಡು ನಂಬಿರೇ || ೧೬ ||

ವ|| ಧರ್ಮದೊಳ್ ಫಲಮುಳ್ಳುದಂ ಕಾಣಲಾಗದೆಂಬಾಶಂಕೆಯು[8]ಳ್ಳೊ(ಡಪ್ಪೊ)ಡೆಂತುಂ ಮಱೆಯ ಬರವಂ [9]ತೆಂಗಾಳಿ ಬೀಸಲಱಿವಂತೆ ಧರ್ಮದ ಫಲಮನಿಲ್ಲಿಯೆ ಧರ್ಮಾರ್ಥಿಗಳಂ ಲೋಕಂ ಪೂಜಿಸುವುದ[10]ಱಿನನುಮಾನದೊಳಂ ಪ್ರತ್ಯಕ್ಷಫಲಮುಂಟೆಂಬುದಂ[11] ನಿಶ್ಚೈಸುವುದು—

ಕಂ|| ಒಡಮೆ ಪುರಾಕೃತಪುಣ್ಯದಿ |
ನೆಡಱುಂ ದುಷ್ಕೃತದಿನಕ್ಕು [12]ಮದಱಿಂದೆಡಱಂ ||
ಕಿಡಿಸುವ [13]ಪುಣ್ಯದ ಪೆರ್ಚಂ |
ಪಡೆವ[14]ಗುರ್ಪದೇಶಮಲ್ತೆ ಸ್ಯೈ[15]ಪುಂ ಕೇಡುಂ || ೧೭ ||

ವ|| ಆರಂಬದ ಫಲಮುಂಟೆಂಬುದಂ ಪಡೆದ ಧಾನ್ಯರಾಶಿ ಪೇೞ್ವಂತೆ ಧರ್ಮದ ಫಲಮನೆ[16]ಯ್ದಿದೀ ಸುಪತ್ತೆ ಪೇೞ್ದಪ್ಪು[17]ದದಱಿನೊಳ್ ನೀಂ ಬಗೆದು ನೋಡಿ ನೆಗೞ್ವುದೆಂಬೀ ಯೋಜೆಯ ನೀನೆಗೞ್ತೆಯುಮಂ [18]ಪೆಱುಱುೞಿಯ(ವು)ಕ್ಕು ಮೆಂದು[19] ಭ್ರಾಂತಿಸದಿರು—

ಚಂ|| ಪರಮತದತ್ತ ಪೊಕ್ಕಱಿವನೊಕ್ಕು [20]ವಿಶುದ್ಧತಪೋಗ್ನಿಯಿಂದೆ ಬೆಂ |
ದರೆಗರಿ[21]ದಿರ್ದಲಾಗಿ ಕಡುವೆಂದೊಡೆ ಬೂದಿಯುಮಾಗಿ ಮಾದು(ಣ್ದು)ದೇ ||
ವಿಂದೊ ಜಿನೋಪದೇಶಸುಚರಿತ್ರಮಹಾಗ್ನಿಯೊಳೊಂದಿದೊಂದು(ದಿ) ಭಾ |
ಸುರತರಮಾಗಿ ಕಿರ್ಚಿಱದ ಮಾಣಿಕದಂತಿರೆ ಶುದ್ಧಮಾಗಿರೇ || ೧೮ ||

ವ|| ಮಾಣಿಕಚಟ್ಟಂ ಮಾಣಿಕಮನಗ್ನಿಕಾರ್ಯದಿಂ ಶುದ್ಧಂ[22]ಮಾಡುಗುಂ [23]ಪೆಱವು ಮಾಡುಗುಮೆ? ಜಿನೇಂದ್ರ ಧರ್ಮಮೆ ಕರ್ಮಬಂಧನಮಪ್ಪ ಜೀವನಂ ಶುದ್ಧಮಂ ಮಾಡುಗುಂ. ಪೆಱವು ಧರ್ಮಂಗಳ್ ಮಾ[24]ಡಲಕ್ಕುಮೆ?

---

(1) ಗೞಲುತ್ತಮ (ಕ,ಚ) (2) ಮುದಾತ್ಮಚಿಂತೆಯಿಂ (ಚ) (3) ಕೇಳದಿ (ಝ, ಛ) (4) ವಪ್ಪೊಡಂ (ಕ,ಝ) (5) ನಿನತು (ಚ,ಛ) (6) ದಿಂದಮೆ (ಝ,ಛ) (7) ನೀಮೆಕಾಣಿರೇ (ಕ,ಝ) (8) ಯುಂಟಕ್ಕುಮಪ್ಪೊಡೆಂತುಂ ತಿಂಗಳಮಱೆ (ಕ) ಡಂತೀಗಳ್ಮಱೆ (ಚ,ಜ) (9) ತೆಣ್ಪಾಳಿ ಬೀಸಿದಾಗಳಱಿ (ಕ,ಖ,ಗ) ಳನೀ (ಛ,ಜ) (10) ದಱಿನಿಲ್ಲಿಯೆ ಕಾಣಲ್ಬಂದುದಿಂತನುಮಾನದೊಳಂ ಪ್ರತ್ಯಕ್ಷದೊಳಂ (ಕ,ಖ,ಝ) (11) ನಿಶ್ಚೈಸಿ ನಂಬುವು(ಬೂ)ದು (ಕ,ಚ) (12) ಮೆಂದಿಂತೊಡಱಂ (ಝ) (13) ಯಲ್ಕುಪ (ಚ,ಛ) (14) ಗಡ ರಕ್ಷಿಸುವ ಧರ್ಮದ (ಛ) (15) ಸ್ಯೆಂಸು ಕೇಡಂ (ಝ) (16) ನೀಗಳಿನ (17) ದೆಂದು ಪೇೞ್ವನಿತಱಿನೊಳೆಂತು (ಗ,ಛ) (18) ಪೆರನುಳಿಯಕ್ಕು (ಕ,ಚ) (19) ನೀಮೆತ್ತಾನುಂ (ಕ, ಚ) (20) ವಿರುದ್ಧ (ಕ) (21) ದಿರ್ದುಪೋಗಿ (ಕ) 2) ಮಾಡುವಂತೆ (ಚ) (23) ಪೆಱರ್ ಮಾಡಲಱಿವರೆ ? (ಚ) (24) ಲಾರ್ಕುಮೆ (ಚ)

ಕಂ|| ಪುಟ್ಟಿಂ [1]ಸ್ಥಿತಿಯುಂ ಕೇಡುಂ |
ನೆಟ್ಟನೆ [2]ವೊಡನೊಂದೆ ವಸ್ತು ನೆಗಲ್ವುದೆಂ ||
[3]ದಟ್ಟುಂಬರಿಗೊಳೆ [4]ನಂಬಿಯೆ |
ಕೆಟ್ಟು[5]ದದಿ(ಱು)ಂ ಸಾಲ್ಗುಮುಱಿಯಿಮನ್ಯರ ಮತಮಂ || ೧೯ ||

ವ|| ಒಂದೆ ವಸ್ತುವಿನೊಳೊಂದು ಪರ್ಯಾಯಮುತ್ಪತ್ತಿಯಾದಾಗಳೊಂದು ಪರ್ಯಾಯಂ ನಾಶಮಕ್ಕುಂ. ಅಪುಟ್ಟಿದ ಪರ್ಯಾ[6]ಯಂ ನಿಲ್ವ ಕಾಲಂ ಸ್ಥಿತಿಯಕ್ಕುಂ. ಇತೊಂದಱೊಳುತ್ಪತ್ತಿ ಸ್ಥಿತಿ ಪ್ರಳಯಂಗಳ್ ನೆಗಲ್ಗುಮೆಂದಿಂತು [7]ವಿಚಾರಾಸಹಮಪ್ಪ ಧರ್ಮಮಂ ಕೇಳ್ದು ಕೆಟ್ಟ ಕೇಡಿನ್ನುಂ ಸಾಲದೆ ?—

ಉ|| ಅನ್ಯಮತಂಗಳೇವುವವು ಪೊಲ್ಲವು ಸಲ್ಲವು ನಿಲ್ಲವೆಂದು ನೀಂ |
ಮಾನ್ಯಲಸಜ್ಜಿನೇಂದ್ರಮತದೊಳ್ ನುತದೊಳ್ ಹಿತದೊಳ್ ತಗುಳ್ದು ಸಾ ||
ಮಾನ್ಯ ದಯಾ[8]ಮಯಪ್ರಸರದೊಳ್ ಜಿನಧರ್ಮ[9]ದೊಳಲ್ತಿವಟ್ಟು ದು |
ರ್ಮಾನ್ಯ[10]ಗತಿಪ್ರಕಾರಿಯನಘಾರಿಯನೋಡಿಸು ಭವ್ಯಜೀವನೇ || ೨೦ ||

ವ|| ಆನೆ[11]ಗಂಡಡಿಯನಱಿಸುವಂತೆ [12]ದಯಾಮೂಲಮಪ್ಪ ಜಿನೇಂದ್ರಧರ್ಮಮಂ ಕಂಡು [13]ಪೆಱದಂ ನೀನಱಿಸದಿರು. [14]ಮತ್ತಮೆಂತಾನುಮಿಾಗಡಿನ ಸುಖಮಿರ್ಪುದಂ ಧರ್ಮಂ [15]ಬರಿಸುವುದೆಂದು ನಂಬುವುದು [16]ಬೆರ್ಚಲ್ವೇಡಾ !—

ಕಂ|| ಅನುಭವಿಪ ಸುಖದಿನಾಗದು |
ಘನದುರಿತಂ ಧರ್ಮಮಱಿದೊಡಕ್ಕುಂ ಪೆಱತೇ ||
ನಿನಿದು(ತು)ಣ[17]ಲಕ್ಕಮೆಯಕ್ಕುಮೆ |
[18]ತನುವಿಂಗೆ ವಿರುದ್ಧಮುಂಡೊಡಲ್ಕಮೆ ಯಕ್ಕುಂ || ೨೧ ||

ವ|| ಇನಿ[19]ದು(ತು)ಂಡೊಡಲ್ಕಮೆಯಕ್ಕುಮೆ ?. ವಿರುದ್ಧಾಹಾರಮನಧಿಕ [20]ಮುಂಡೊಡಲ್ಕಮೆಯಕ್ಕುಂ(ಮೆಂಬುದುಂಟೆ ?) ಪೆಱವು ಜೀವಂಗಳಂನೋಯಿಸದೆ ಸುಖಮನನುಭವಿಸೆ ಪಾಪಮಕ್ಕುಮೆಂಬುದುಂಟೆ ? ಧರ್ಮಮನಱಿದೊಡಕ್ಕುಂ. ಎಂದಲ್ಲದೆ ಧರ್ಮಧರನಪ್ಪುದು. ಧರ್ಮದಿನಲ್ಲದ ಪುಣ್ಯಮಾಗದು. ಪುಣ್ಯ[21]ಮಿಲ್ಲದಂಗೆನಿತುದ್ಯೋಗಂಗೆಯ್ದೊಡಂ ಏವುದೊ ?—

---

(1) ಸಾವುಂ (ಛ) (2) ವೊಂದೊಂದೆ ವಸ್ತುಗಳ್ (ಚ,ಝ) ನೆಟ್ಟನಿರ್ದೊಡಲೊಳಗೆ ವಸ್ತುಗಳು ನೆಗಟ್ದುವೆಂ। ದಟ್ಟುಂಬಿ (ಜ) (3) ದುಟ್ಟುಂಬರಿ (ಕ) (4) ನಂಬದೆ (ಕ,ಚ) (5) ದಂದೆ (ಚ,ಛ) ದೊಂದೆ (ಜ) ದಱಿಂ (ಝ) (6) ಯದೆ ನಿಲೆಕಾಯುಸ್ಥಿತಿಯಕ್ಕುಮಿನ್ನೊಂದಱೊಳುತ್ಪತ್ತಿ (ಝ) ಮಾಯೆರಡು ಪರ್ಯಾಯಂಗಳಾಧಾರಮಪ್ಪ ವಸ್ತುವಿನಿರವುಮಾ ಪುಟ್ಟನಿಲ್ವಕಾಲಂ (ಚ) (7) ವಿಚಾರಪರರಪ್ಪರ್ (ಕ) (8) ದಮ (ಕ,ಚ) (9) ದೊಳರ್ಥಿವಟ್ಟು (ಕ,ಚ) ನಿಜಧರ್ಮದೊಳಾರ್ಮದೊಳಟ್ತಿ (ಝ) (10) ಮತಿವ್ರತಕಾರಿಯ (ಕ,ಚ) ಮತಿಪ್ರತಾರಿ (ಚ) ಕಾರ್ಯನನಘಾರ್ಯನ (ಝ) (11) ಡಂಗಡಿಯನಱಿ (ಝ) (12) ಸತ್ಯಾಧಿಷ್ಠಿತಮುಂದಯಾ (ಕ,ಜ) ದೃಢತ್ವದಯಾ (ಝ) (13) ಪೆರಗಂ (ಕ, ಚ) ಪೆಱತಂ (ಝ) (14) ಮತ್ತಂಮತ್ತೇನು ಮಿಾಗ (ಚ) ಮತ್ತೆಮೆತ್ತಾನುಂ (ಕ,ಚ) (15) ಬಾರಿಸುಗುಮೆಂಬುದಂ (ಕ,ಚ) (16) ಬೆರ್ಚುವೈಗಡಾ (ಕ,ಚ) ಬೆರ್ಚಲ್ ಬೇಡಗಡಾ (ಝ) ಬೆರ್ಚದಿರು (ಜ). (17) ಲಕ್ಕುಮೆಯಕ್ಕುಮೆ (ಕ,ಚ) ಪೆಱನಿನ್ನು ನಕ್ಕಮೆಮಾಟ್ಕುಮೆ (ಜ) ಣಲಡಕಮೆಯಕ್ಕುಮೆ (ಝ) (18) ತೆನು (ನ) ಗೆ ವಿರುದ್ಧಾನ್ನಮುಂ (ಚ) (19) ದನುಂಡೊ....ಯಕ್ಕು (ಝ) (20) ಮಾಗುಂಡೊಡ (ಝ) (21) ಮಿಲ್ಲದತೆಂತುದ್ಯೋಗಂ....ಫಲಮಿಲ್ಲ (ಕ,ಚ) ಮಿಲ್ಲದನೆನಿತು (ಝ)

ಮ|| ಕುಡಿಯಲ್ ನೀರ್ಗಗುಱುತ್ತುವೊರ್ವನಡಿಯೊಳ್ [1]ಪರ್ವಿರ್ದ ಕಲ್ಗಂಡೊಡಂ(ಡದಂ) |
ಬಿಡದೆಲ್ಲಂದದೊಳಂ ತಗುಳ್ದೊಡೆದು ಪಾತಾಳಂಬರಂ ತೋಡಿದಂ ||
ಗಡಿಯೊಳ್ ಪುಟ್ಟಿದುದುಪ್ಪುನೀರ್ ಕಿಱಿದದುಂ ಪೂತಿಕ್ರಿಮಿಚ್ಛನ್ನ[2]ಮಾ |
ಗಡೆ ಬತ್ತಿತ್ತದು ಪುಣ್ಯಮಿಲ್ಲದ ನರಂಗುದ್ಯೋಗದಿಂ[3]ದಕ್ಕುಮೇ || ೨೨ ||

ವ || ಆಯುವಿಲ್ಲದವಂಗೆ ಬೆಜ್ಜುಗೆಯ್ದೊಡಂ, ಪುಣ್ಯಮಿಲ್ಲ[4]ದವನುದ್ಯೋಗಂಗೆಯ್ದೊಡಂ ಆತನ ಬೆಜ್ಜನೊಳಮಾತನುದ್ಯೋಗದೊಳಂ ಫಲಮಿಲ್ಲಂ—

ಕಂ|| ಏನೀ ಬೆಸನದ ಮೋಹಂ |
ಸಾನಂದದೆ ಧರ್ಮಮೆಂಬುದೊಂದಾರವೆಯಂ ||
ನೀನಿಟ್ಟು ಕಾದು ಸುಖಸಂ |
ತಾನಫಲಂಗಳನೆ [5]ಪಡೆದು ಸೇವಿಸಲಾಗಾ || ೨೩ ||

ವ|| ಒಂದು ಪಣ್ಣ ಸವಿಯಂ ಕಂಡಾತಂ ಪಿರಿದಪ್ಪಾರವೆಯನಿಟ್ಟು ಕಾದು [6]ಪಣ್ಗಳಂ ಸೇವಿಸುವಂತೆ ಕಿಱಿದಪ್ಪ ಬೆಸಕ್ಕಾಸೆವಡುವರ್ ಪಿರಿದಪ್ಪ ಧರ್ಮದೊಳ್ ನೆಗೞ್ದು ಮೇಗ[7]ತ್ಯಂತ ಸುಖಮನನುಭವಿಸು[8]ವುದೀ ಕಜ್ಜಮನೆ ಬಗೆದು ಮನುಜಂ ಮೆಯ್ಯಂ ದ್ರವ್ಯಮುಮಂ ಧರ್ಮದೊಳ್ ತವಿಸುವುದು—

ಮ|| ಮಿಡಿಯಂ ಮಾಡಿ ಬೞಿಕ್ಕೆ ಪೂವಿನ ಕಟಿಲ್ದೊಂದಂದಮುಂ [9]ಕಾಯಲಿ |
ಟ್ಟೆಡೆಯೊಳ್ ಪಾಲಿರೆ(ಡೆ)ನೀರ ತಪ್ಪ ತವಿಲುಂ ಸಂಶುದ್ಧ ಸುಕ್ಷೇತ್ರಮ ||
ಪ್ಪೆಡೆಯೊಳ್ ಬಿತ್ತಿದ ಬೀಜದೊಂದು ತವಿಲುಂ ಪುಣ್ಯಾಸ್ರವಂ ಮಾಡಿ ತ |
ಪ್ಪೊಡಲುಂ ತಕ್ಕೆಡೆ[10]ಗೀಯೆ ತಪ್ಪ ಧನಮುಂ ಪೇೞ್ ತಪ್ಪುವೇ ಜೀವನೇ || ೨೪ ||

ವ|| ಪ್ರಿಯದೊಳ್ ಮಾಱುವ [11]ಭಂಡದ ತವಿಲಿಂಗೆ ಪರದನಾಱದೊಡಂ ಧರ್ಮದೊಳ್ ಕುಡುವ ಸ್ವಲ್ಪದ್ರವ್ಯದ ತವಿಲ್ಗೆ ಅವುಳ್ಕನಾಱದೊಡಂ ಪಿರಿದಪ್ಪ ಸುಖಮುಸೀವ ಧರ್ಮಕ್ಕೆ ತವುವ [12]ಮೆಯ್ಗಂ ಅಱುವುಳ್ಕಾತನಾಱದೂಡಮಾತಂಗೆ ಲಾಭಮಾಗದೀತಂಗೆ ಪುಣ್ಯಮಾಗದು— ಆದಱಿಂ[13] ಧರ್ಮಕ್ಕೆ [14]ತಪ್ಪುದರ್ಕೆ ಅಳ್ಕದಿರು(ರಿಂ)—

---

(1) ಬಿಟ್ಟಿರ್ದ (ಜ) (2) ಮಾದುದು ಬೀತಿತ್ತುದು (ಚ) (3) ಬರ್ಕುಮೇ (ಕ, ಚ) (4) ದಂಗುಜ್ಜುಗಂಗೆಯ್ದೊಡಂ (ಕ, ಚ) (5) ಕೊಯ್ದು (ಕ, ಚ) (6) ಪಣ್ಪಲಂಗಳಂ (ಕ, ಚ) (7) ತ್ಯಂತಮಪ್ಪನಂತಸುಖ (ಕ, ಚ) (8) ಪೆ(ವ) ನೆಂಬೀ (ಕ) ಪೆನೆಂಬೀ (ಜ) (9) ಕಾಸಲಿರ್ದೆಡೆ (ಕ, ಚ) (10) ಗಿತ್ತು (ಕ, ಚ) (11) ಭಂಡಮಂ ಕೊಳ್ವ ಸ್ವಲ್ಪ ದ್ರವ್ಯದತವಿ (ಕ, ಚ) (12) ಕುಡುವ ಸ್ವಲ್ಪದ್ರವ್ಯಕಂ ತಪಕ್ಕೆ ತವುವಮೆಯ್ಯುಂ (ಝ) ಮೆಯ್ಯುಂ ಧನಕ್ಕಂ (ಕ, ಚ) (13) ಅೞುವುಳ್ಕಂ ಧರ್ಮ (ಕ, ಚ) (14) ತವುವುದರ್ಕಳ್ಕದಿರಿಂ (ಕ, ಚ)

ಕಂ|| ಈಗಡಿನ ಸುಖಂ ಧರ್ಮದಿ |
ನೋಗಡಿಸುಗುಮೆಂದು ಬೆರ್ಚಿ ಮೊಗಮಂ ತಿರಿಪ ||
ಲ್ಲಾಗದು ಧರ್ಮಮೆ ಸುಖದೊಂ |
ದಾಗರಮಾಗಿರ್ದವದ[1] ಱಿನಂಜಲ್ ಜೀವಾ || ೨೫ ||

ವ|| ಖಂಡಶರ್ಕರೆ ಮುದ್ದಾದಂತೆ ಧರ್ಮವಿಾಗಳುವೊಳ್ಳಿತ್ತು [2] ಮೇಗೆಯುವೊಳ್ಳಿತ್ತು ನಿಷ್ಕಾರಣಂ ಕುಸಿಯು[3]ದಿರು—

ಶಾ|| ದಾನಂಗೆಯ್ಯೆ ಸುಪಾತ್ರದಲ್ಲಿಗೆ ಧನಂ ಪೋ[4]ದುದದೇಂ ಪೋದುದೇ |
ಜ್ಞಾನಂ ತಳ್ತಿರೆ ಯೌವನಂ [5]ತಪದೊಳಂ ಪೋದಂದದೇಂ ಪೋದುದೇ ||
ಧ್ಯಾನಂ ನಿಶ್ಚಳಮಾಗೆ ಜೀವನೊಡಲಿಂ ಪೋದಂದದೇಂ ಪೋದುದೇ |
ನೀನಿಂತಪ್ಪುವನಿಂತಗಲ್ಚುವೆಡೆಯೊಳ್ ಮಾಣ್ದಿರ್ಪುದೇ ಜೀವನೇ || ೨೬ ||

ವ|| ನಿಧಾನಂ[6] ಕೊಳ್ವೆಡೆಯೊಳ್ ಬಲಿಗೆಯ್ವ ಬೀಯಕ್ಕುಱದೊಡಂ ದಯಾಮೂಲಮಪ್ಪ ಧರ್ಮಂ ದೊರೆಕೊಳ್ವೆಡೆಯೊಳ್ ಮೆಯ್ಯ ಕಸವರದ ತವಿಲಿಂಗಮಾಱದೊಡಂ ಆತಂಗೆ ನಿಧಾನಮು ವಿಾತಂಗೆ ಪುಣ [illegible]ತು ಸಾಗ್ಗಂ ?—

ಕಂ|| ವರಧರ್ಮಮೆಂಬ ಕೆಱೆಯೊಳ್ |
ನಿರುಪಮ ಗುಣರತ್ನಮೆಂಬ ನೀರುಳ್ಳುದ[8] ನೋ ||
ತಿರಮೊಡೆದು ಪಾಱಗೆಟ್ಟೊಡೆ |
ಮರುಳೇ ಸುಖಮೆಂಬ ಬೆಳಸ[9] ನಱಸಲ್ ಬಗೆವಾ || ೨೭ ||

ವ|| ಗಱ[illegible]ಯ ಪಾಱಯನಱದು ಬೆಳೆವೆನೆಂಬನುಂ, [10]ಧರ್ಮದ ಪಾಱಯನಱದು ಸುಖಮಂ ಪಡೆವೆನೆಂಬನುಂ ಬೇಳಪ್ಪರ್. ಬುದ್ಧಿಯೊಡೆಯನಾಗನವಱನೆಡೆಯುಡುಗದೆ [11]ಧರ್ಮ ಧರನಪ್ಪುದು—

(1) ಱ ನೀಂ ತಿಳಿಜೀವಾ (ಕ, ಚ) ಱನಂಜದೆ ಜೀವಾ (ಝ) (2) ಮೇಗಣ್ಣಂ (ಕ, ಚ) (3) ದಿರಿಂ (ಕ, ಚ) (4) ದಂಮ ಪೋಯ್ತೇಶ್ರುತಂ (ಕ, ಚ) (5) ತಪದಿ (ದಿ) ನೊಳ್ ವೋದಂದು ವೋಯ್ತೇಶುಭ (ಕ, ಚ) (6) ಗೆಯ್ವೆಡೆ (ಚ) (7) ಮೇಕೆ (ಕ, ಚ) (8) ರೊ। ಳ್ಪರಿದೊಡೆಮ (ಕ, ಚ) ಳ್ಪರಿಯದೆ ಪಾಳ್ಗೆಟ್ಟೊಡೆನೀಂ (ಚ) ಱೊಳ್ ಸೈ।ತಿತದೊ (ಘ) (9) ನಱಸಿದೊಡುಂಟೇ (ಚ) (10) ಧರ್ಮಧರಪ್ಪುದು (ಚ) (ಗ್ರಂಥಪಾತಂ ಗ್ರಂಥನಿಂರಂತರ) (11) ಧರ್ಮಜರಪ್ಪುದು (ಚ)

ಮ|| ವರಧರ್ಮಾನ್ವಿತನಕ್ಕುಮೊರ್ಮೆ ಬೞಿಕ(ಯ)ಂ ಮತ್ತೊರ್ಮೆ ಪಾಪಕ್ರಿಯಾ |
ಪರನಾಗಿರ್ಕುಮದೆಂತುಟೆಂಬ ! ಮದಹಸ್ತಿಸ್ನಾನಮೆಂತಂ[1]ತೆ ದಲ್ ||
ಕುರುಡಂ ನೇಣ್ಗೊಸೆ[2]ದಂತೆ ದಲ್ ಕಿಡುಗುಮಂದೊಂದೊಳ್ಪು ಧರ್ಮಂ ನಿರಂ |
ತರಮಂ[3]ತೆಯ್ದುದೊಡೊಳ್ಪನೀಗುಮೆ ಮದೋನ್ಮತ್ತಂಗೆ ಗೇಹಾ[4]ಶ್ರಮಂ || ೨೮ ||

ವ|| ಪರ[5]ದಂ ಕೊಟ್ಟುಕೊಂಡ ಭಂಡಮುಂ ಮೊದಲ್ಗೆ ಸಮನಪ್ಪೊಂ[6]ಡಾವುದು ಲಾಭಂ ?. ಗೃಹಸ್ಥಂ [7]ನೆಗೞ್ದ ಧರ್ಮಮುಂ ಪಾಪಮುಂ ಸಮನ[8]ಪ್ಪುದಱಿನಾವುದಗ್ಗಳಿಕೆ ? ಪಾಪಮು[9]ನೆ ಪುಗಲೀಯದೆ ಧರ್ಮಮನೆ ಪೆರ್ಚಿಸುವುದೆ ಬುದ್ಧಿ—

ಕಂ|| ಬಗೆಯೊಳಗೆ [10]ಪುಟ್ಟ ಧರ್ಮದ |
ನೆಗ[11]ೞ್ತಿವಿಡಿದಂತನೆಯ್ದೆ ಬಗೆವಂತಾದಂ ||
ದಗಲದೆ [12]ಶುದ್ಧ(ಕ್ಲ)ಧ್ಯಾನದೊ |
ಳೊಗೆದೊಪ್ಪಿರೆ ಸಫಲಮಕ್ಕುಮಂತಿರೆ ನೆಗೞಿಂ || ೨೯ ||

ವ|| ಅವಾವುವೆಂದೊಡೆ :—ಆಜ್ಞಾವಿಚಯಮುಪಾಕವಿಚಯಂ ವಿಪಾಕವಿಚಯಂ ಸಂಸ್ಥಾನ ವಿಚಯಂ ಎಂಬ ಧರ್ಮಧ್ಯಾನದ [13]ನಾಲ್ಕುಂತೆಱನಂ ನಿಶ್ಚಳಮಾಗಿ [14]ನಿನ್ನೊಳೆ ನಿಱಿಸುವುದು. ನಿಱಿಸಿದೊಡೆಂತುಂ ತುದಿಯೊಳ್ ಪರಮಸುಖಿಯಾಗಿರ್ಪೆ, ಜೀವಾ ನಿನಗೆ ಯತಿಧರ್ಮದಗ್ಗಳಿಕೆಯು [15]ನೇವೇೞ್ವುದೋ ?—ದಾನಂ ಪೂಜೆ ಶೀಲ ಮುಪವಾಸಮೆಂಬ ನಾಲ್ಕುಂತೆಱದ ಶ್ರಾವಕಧರ್ಮದೊಳ್ ಸ್ವಲ್ಪಮಪ್ಪ ನೆಗೞ್ತಿಯಿಂ ಪಿರಿದಪ್ಪ ಫಲಗಳಂ ಪಡೆದವರ [16]ಕತೆಯಂ [17]ಕೇಳ ! ಅದೆಂತೆಂಬಾ !—



---

(1) ತವೋಲ್ (ಕ, ಚ) ತೆನಲ್ (ಜ) (2) ವಂತೆವೋ (ವ) ಲ್ (ಕ, ಚ) (3) ತೆಯ್ದಿದೊ (ಕ, ಚ) (4) ಸ್ರ(ಶ್ರ)ಯಂ (ಚ) (5) ದನ (ಕ, ಚ) (6) ನಪ್ಪುದಾವ (ಕ, ಚ) (7) ಮಾಡುವ (ಚ) (8) ಪ್ಪೊಡಾವುದ ಱಿವಿನಗ್ಗಳಿತ (ಕ, ಚ) (9) ನೆನಸುಂ (ಕ, ಚ) ನಿನಿಸುಂ (ಚ) (10) ಪುಟ್ಟೆ (ಚ) (11) ಯಬಿಡದಂತ (ಕ, ಚ) (12) ಶುದ್ಧದಾನಧರ್ಮಮುಂ ಪಾಪಮುಂ ಸಮನಪ್ರಧಾನದೊ (ಚ) (13) ನಾಲ್ಕುಂ ತೆಱದ (ಕ, ಚ) (14) ತನ್ನೊಳೆ (ಕ, ಚ) (15) ನೇನೆಗೞ್ವುದು (ಝ) ನೇಗೆಯ್ವುದು (ಚ) (16) ಕಥೆಯುನಪ್ಪೊಡಂ (ಕ, ಚ) (17) ಕೇಳಿಮದೆಂತೆನೆ (ಕ, ಚ)

## — ನಿದರ್ಶನ ಕಥೆ —

### ಸೋಮಿಲನ ಕಥೆ — (ದಾನದ ಫಲಂ) [೧]

ಕಂ|| ವರಸಿಂಧುನಗರದೊಳ್ ವ್ರತ |
ನಿರತಂ ತಾಪಸತಪಸ್ವಿ [1]ಸೋಮಿಲನೆಂಬಂ ||
ಸ್ಥಿರಧೈರ್ಯಂ ಭೈಕ್ಷಾ[2]ರ್ಥದೆ |
ತಿರಿದು ಯಥಾಲಾಭದಿಂದೆ ಪುಗುಟ್ವಂ ನಿಚ್ಚಂ || ೩೦ ||

ವ|| ಒಂದು ದಿವಸಂ ಭೈಕ್ಷಕ್ಕೆ ಪೋ(ಪ)ದಲ್ಲಿ [3]ಬಱಿಯ ತವುಡಂ ಪಡೆದು ಬಂದದಂ [4]ಪುರಿದು ಸಣ್ಣನಾಗಿ ಪಿಟ್ಟುಗುಟ್ಟಿ ತನಗಂ ತನ್ನ ಗೃಹಚಾರಿಣಿಗಮಭ್ಯಾಗತಂ[5]ಗಂ ಮೂಱುಂಡೆಯಂ ಮಾಡಿಟ್ಟು ಶುಚೀಭೂತನಾಗಿರ್ದು ಮಧ್ಯಾಹ್ನಕಾಲದೊಳತಿಥಿಯ ಬರವಂ ಪಾರುತ್ತಿರ್ಪನ್ನೆಗಂ ಒರ್ವ [6]ಋಷಿಯರ್ ಚರಿಗೆವಂದೊಡೆ ಕಂಡು—

ಶ್ಲೋಕ || ಶತಂಬ್ರಾಹ್ಮಣಮೂರ್ಖೇಭ್ಯಃ ಪರಮೋ[7]ಕೋಽಗ್ನಿಹೋತ್ರಿಕಃ |
ಅಗ್ನಿಹೋತ್ರಿ (ಕ) ಸಹಸ್ರೇಭ್ಯೋ ಪರಮೇಕೋ [8]ಜಿತೇಂದ್ರಿಯಃ |
ಜಿತೇಂದ್ರಿಯಸಮಂ ಪಾತ್ರಂ ನ ಭೂತೋ ನ ಭವಿಷ್ಯತಿ || ೩೧ ||

ವ|| [9]ಎಂಬ ಸೂತ್ರಮಂ ನೆನೆದು ಅತಿಥಿಯ[10]ನತಿಪ್ರೀತಿಯಿಂ ನಿಲಿಸಿ ಪೆಂಡಿತಿಯಿಂ [11]ಕಾಲಂ ಕರ್ಚಿಸಿ, ಮನೆ[12]ಯೊಳಿರಿಸಿ ವಿಶಿಷ್ಟಕ್ರಿಯಾಭಾವದಿಂದಭ್ಯಾಗತಂಗೆಂದಿರ್ದುಂಡೆಯಂ [13]ತಂದಿಕ್ಕಿದಾಗಳ್ [14]ಮೆದ್ದಾಗಳದು ನೆಱೆಯ[15]ದನೆ ಮತ್ತೊಂದುಂಡೆಯಂ ತಂದಿಕ್ಕಿ ಭಕ್ತಿಯುಂ ಶ್ರದ್ಧೆಯುಂ ತಿಣ್ಣನಾಗೆ ರಾಗದಿಂದಾ ತಾಪಸನ ಕ್ಷುಧಾಶ್ರಮಮಿಂತಲ್ಲದೆ ಪೋಗದೆಂದು [16]ಮೂಱನೆಯುಂಡೆಯುಮಂ ತಂದಿಕ್ಕಿ ತಣಿಪಿ [17]ವಿನಯದಿಂ ಕೆಯ್ಗೆಱೆದು ಕಳಿಪಿದಾಗಳ್ "ಅಕ್ಷಯಂ ದಾನಮಕ್ಕೆ" ಎಂದು [18]ಭಟಾರರ್ ಪರಸಿ [19]ಪೋದಾಗಳಾತನ ಮನೆಯೊಳ್ ಪಂಚಾಶ್ಚರ್ಯಸಮೇತಂ ಸುವರ್ಣವೃಷ್ಟಿಯುಂ ಕಱೆದತ್ತಾ ತಾಪಸಂ ತವುಡಿ[20]ನುಂಡೆಯ ದಾನದ ಫಲದಿಂ [21]ದಂತಪ್ಪೈಶ್ವರ್ಯಮನೆಯ್ದಿದನೆಂಬುದಂ ಬಗೆವುದು ಮತ್ತಂ.

---

(1) ಸೋಇಯಿಲ (ಚ) ಸೋವಿಲ (ಕ, ಚ) (2) ರ್ಥದಿ (ಕ, ಚ) (3) ಬಱುದವುಡಂ(ಝ) ಱಿರಿದಾಡಂ(ಚ) (4) ಪಿರಿದು (ಕ) (5) ಗಮೆಂದು (ಚ) ಮೆಂದಿಂತು (ಝ) (6) ಮಹಾರುಷಿಯರ್ (ಕ, ಚ) (7) ಕೋವೇ: ಪಾರಗಃ||ವೇದಪಾರಗ (ಕ, ಚ) (8) ಗ್ನಿಹೋತ್ರಿಯಃ (ಝ) ಯಜ್ಞಹೋತ್ರಿಯಃ (ಚ) ಅಗ್ನಿಹೋತ್ರಿಯ ಸಹಸ್ರೇಭ್ಯೋವರಮೇಕೋಜಿತೇಂದ್ರಿಯಃ | ಜಿತೇಂದ್ರಿಯಸಮಂ ಪಾತ್ರಂ (ಕ, ಚ) (9) ಎಂಬೀಶ್ಲೋಕಾರ್ಥಮಂ (ಕ, ಚ) (10) ನಱಿದತಿ (ಝ) (11) ಪಾದಮಂ ತೊಳೆದು (ಜ) (12) ಯೊಳ್ಕುಳ್ಳಿರಿಸಿ (ಜ) (13) ತಂದು ಕೈಯೊಳಿಕ್ಕಿದಾಗಳ್ (ಕ) (14) ಕೈಕೊಂಡಾಗಳ್ (ಕ, ಚ) (15) ದೆಂಬುದಂ ತಾನೆ ಬಗೆದು (ಕ, ಚ) ದೆಂಬುದ ನಱಿದು (ಝ) (16) ತನಗೆಂದಿರ್ದುಂಡೆಯುಮಂ (ಜ) (17) ಕಾಯ್ದಾಱದನೀರಂತಂದು ಕುಡಿಯಲೆಂದೆ ಱೆದು (ಕ, ಚ) (18) ಯತಿಗಳ್ (ಝ) (19) ಪೋದರಾಗಳಾ (ಕ, ಚ) (20) ನುಂಡಲಿಗೆಯಂ (ಕ, ಚ) (21) ಪಿರಿದಪ್ಪೈ (ಕ, ಚ)

### ಧನಪತಿಯ ಕಥೆ — (ಪೂಜೆಯ ಫಲಂ) [೨]

ಕಂ|| ಅನುಪಮಮುತರ್ಕ್ಯಮತಿಶಯ |
ಮನಿಂದಿತಂ [1]ತಗರೆಯೆಂಬ ಪುರಮಾ ಪುರದೊಳ್ ||
ಜನವಿನುತ ವಣಿಗ್ಜನಪತಿ |
ಧನಪತಿಯೆಂಬೊಂ ಧನಾಢ್ಯನಮಿತಗುಣಾಢ್ಯಂ || ೩೨ ||

ವ|| ಆ ಪರದನೆರ್ಮೆಯ ಕಾವ ಗೋವನೊಂದುದೆವಸ[2]ಮೊಂದೆಡೆಯೊಳೆರ್ಮೆಯಂಮೇಯಿಸಲ್ ಪೋದಲ್ಲಿ ಒಂದು ಪಿರಿಯಕೊಳನಂ ಕಂಡಲ್ಲಿ ಎರ್ಮೆಗಳಂ ನೀರೂಡುತಿರ್ದು ಕೊಳನ ನಡವೆ ಸಹಸ್ರ ದಲಮಪ್ಪು[3]ದೊಂದುಪೂವಿರ್ದುದನಾ ಗೋವಂ ಕಂಡು ಕೊಳದ ನಡುವಣ್ಗೀಸಿ ಪೋಗಿ ಯಾ ಪೂವಂ ಕೊಯ್ದುಕೊಂಡು ಬರ್ಪಾಗಳಲ್ಲಿಯ ಜಲದೇವತೆ[4]ಯೆಂದಳ್ ''ನೀನೀ ಪೂವನಗ್ಗಳ ನುಪ್ಪ[5]ವಂಗೆ ಕುಡುವುದೆಂ''ದೊಡಾ ಧ್ವನಿಯನಾಲಿಸಿ ಕೇಳ್ದಿಲ್ಲಾ ದೆ[6]ಸೆಯೊಳಾರುಮಂ ಕಾಣ[7]ದೆ "ಅಂತೆ ಗೆಯ್ವೆ" ನೆಂದೆರ್ಮೆಯ[8]ನೂರ್ಗಟ್ಟಿಕೊಂಡು ಬಂದಿರ್ದು ಮನೆಯಂ ಪುಗಿಸಿ—

ಕಂ|| ಎನ[9]ಗೆಮ್ಮ ಸೆಟ್ಟಿ ವೆಗ್ಗಳ |
ನನುನಯದಾತಂಗೆ ಕುಡುವೆನೆಂಬಾ ಬಗೆಯಿಂ ||
ಮನೆಯಂ ಪೊಕ್ಕೊಯ್ಯನೆ ನೋ |
[10]ೞ್ಪಿನಮಾತನುಮರಸುಗಾಣಲೆಂದೊಸೆದಾಗಳ್ || ೩೩ ||

ವ|| ಪುಟ್ಟಿಗೆಯುಮಂ, ಪೂವುಮಂ [11]ತಳಿಗೆಯೊಳಿಟ್ಟುಕೊಂಡು ಪೋಪ್ಪುದಂ ಕಂ[12]ಡೀತ ನಿಂದರಸು ವೆಗ್ಗಳನೆಂದು ಸೆಟ್ಟಿಯ [13]ಬೞಿಯನೆ ಪೋಗಿ ನೋೞ್ಪನ್ನೆಗಂ ಸೆಟ್ಟಿ ತನ್ನ ತಂದ [14]ದರುಶನಮನರಸಂಗೆ [15]ಕೊಟ್ಟು ಪೊಡೆವಟ್ಟು ಕುಳ್ಳಿರ್ಪುದುಂ—

ಮ|| ಅರಸಂ [16]ಬಾ ಮುನಿನಾಥರೊರ್ವರಮಳಾನುಷ್ಠಾನಿಗಳ್ ಜ್ಞಾನಿಗಳ್ |
ಪರಮಾತ್ಮಾಲಯದೊಳ್ ಕಳಂಕರಹಿತರ್ ಬಂದಿರ್ದ[17]ರೆಂದಾ ಮುನೀ ||
ಶ್ವರರಂ ಬಂದಿಸಿ [18]ಬರ್ಪೆಮೆಂದು ಮುದದಿಂ ಪೋಗುತ್ತು[19]ಮಿರ್ದಾಗಳೀ |
ಧರಣೀಶಂಗವರಗ್ಗಳಿಕ್ಕೆ ಪಿರಿದಾಯ್ತೆಂ[20]ದಿಂತು ಗೋಪಾಲಕಂ || ೩೪ ||

ವ|| ಎಂದು ತನ್ನೊಳೆ ಬಗೆದವರೊಡನೆ ಪೋಗಿ ನೋೞ್ಪಾಗಳರಸಂ ಬಸದಿಯಂ ಬಲ ಗೊಂಡು ದೇವರ್ಗೆ ಪೊಡೆವಟ್ಟು ಬಂದಾ[21]ಮುನಿಪರ್ಗೆಱಗಿ ಪೊಡೆವಟ್ಟಿರ್ಪಿನಮಾ ಋಷಿಯರ್ ದೇವರ್ಗೆ ಪೊಡೆವಡುತಿರ್ದುದುಮನಂತೆ ನೋ[22]ಡುತ್ತಿರ್ದ್ದೆಲ್ಲರ್ಗಮೊಳಗಿರ್ದಾತನಗ್ಗಳನೆಂದು ನಿಶ್ಚೈಸಿ ಸಾರೆ ಪೋಗಿ 'ಪೂವಂ ನಿನಗಿತ್ತೆಂ, ಕೊಳ್, ದೇವಾ' ಎಂದು ದೇವರ ಮುಂದೆ ಪೂವ ನೀಡಾಡಿ ಪೋದನಂತಾ ಗೋವನೊಂದು ಪೂವಂ ದೇವರ ಮುಂ[23]ದಿಕ್ಕಿಪೋದ ಪೂಜೆಯ ಪಲದಿಂದಾ ಪೊೞಲನಾಳ್ವರಸಂಗೆ [24]ಕಱಿಕಂಠ ನೆಂಬ ಮಗನಾಗಿ ಪುಟ್ಟಿ ಮಹಾಮಂಡಲಿಕನಾಗಿ ರಾಜ್ಯಂಗೆಯ್ವನೆಂಬುದನಪ್ಪೊಡಂ ನಂಬಿ ಪೂಜಾಧರ್ಮದೊಳೞ್ತಿಗನಪ್ಪುದು—

---

(1) ಮಗಧೆ (ತಮಿೞಿನಲ್ಲಿ — ತೀಂಗಿಲ್ಲತಗರೈನಗರ್ ಎಂದಿದೆ) (2) ಮಡವಿಯೊಳೆಮ್ಮೆಯಂ ಕಾಯಲ್ (ಝ) (3) ದೊಂದು ತಾವರೆಯ (ಕ, ಚ) (4) ಇದು ಇಲ್ಲ (ಕ, ಚ) (5) ವರ್ಗೆ (ಝ) (6) ಸೆಯಂನೋಡಿ ಯಾರುಮಂ (ಕ, ಚ) (7) ಇದು ದೇವರ ವಚನಮಾಗಲೆವೇೞ್ಕುಮಂತೆಗೆಯ್ವೆ (ಝ) ಕರಮೊಳ್ಳಿತ್ತಂತೆಗೆಯ್ವೆ (ಕ, ಚ) (8) ನೂರ್ಗೆತಂದುಮನೆಯಂ ಪುಗಿಸಿ(ಕ, ಚ) (9) ಗೆನ್ನ ಸೆಟ್ಟಿಯಗ್ಗಳ (ಕ, ಚ) (10) ೞ್ಪಿನಸೆಟ್ಟಿ (ಕ, ಚ) (11) ಪರ್ಯಾಣಮೊಳಿಟ್ಟು (ಜ) (12) ಡೀತಂಗರಸನಗ್ಗಳ (ಕ, ಜ) (13) ಬೞಿವೞಿಯನೆ (ಕ, ಜ) (14) ಕಾಣಿಕೆಯಂ (15) ಮುಂದಿಟ್ಟು (ಝ) (16) ತಾಂ (17) ರಂತಾಂ (ಜ) (18) ಬರ್ಪೆವೆ (ಕ) (19) ಮಿಂತೀಗ (ಝ) (20) ಸಂದು (ಝ) (21) ಋಷಿಯರ್ಗೆ (ಕ, ಚ) (22) ದಂಕಂಡವರ್ಗೆಲ್ಲ (ಜ) (23) ಮುಂದೆ ತಂದಿಕ್ಕಿ (ಕ, ಚ, ಝ) (24) ಕರೆಕಂದುವೆಂಬ (ಜ)

ಉದ್ದಾಯನನ (ಪ್ರಭಾವತಿ) ಕಥೆ — (ಶೀಲದ ಫಲಂ) [೩]

ಕಂ|| [1]ರೋರುಗಪುರಪತಿ ರಿಪುಸಂ |
ಹಾರಕ[2]ನುದ್ದಾಯನಾಂಕನೃಪನಖಿಳಗುಣಾ ||
ಧಾರನುದಾರನನಂಗಾ |
ಕಾರಂ [3]ದುಶ್ಚರಿತದೂರ ನಚಳಿತಧೀರಂ || ೩೫ ||

ವ|| ಆತನರಸಿ ಪ್ರಭಾವತಿಯೆಂಬೊಳಾಕೆ[4]ಯನಾ ಪೊೞಲೊಳಿರಿಸಿ ರಿಪುವರ್ಗಸಾಧನೆಯ ಕಾರಣಮಾಗೆ ಪರದೇಶಕ್ಕುದ್ದಾಯನಮಹಾರಾಜಂ ಪೋದಿಂ ಬೞಿಯಂ ಆಕೆಯ ರೂಪಲಾವಣ್ಯ ಹಾವಭಾವವಿಳಾಸವಿಭ್ರಮಂಗಳೊಳ್ಪಂ ಕೇಳ್ದು ಚಂಡಪ್ರದ್ಯೋತನೆಂಬರಸಂ ಆಕೆಯನೆೞೆದು ಕೊಳ್ವೆನೆಂದು ಮಹಾಬಳಪರಾಕ್ರಮನಾಗಿ ಮೇಲೆತ್ತಿವಂದು ಪೊೞಲಂ ಮೂವಳಸಾಗಿ ಮುತ್ತಿ ಕೊಂಡಿರ್ದು ತನ್ನ ಪೆರ್ಗಡೆಗಳಂ[5]ಡಾಳೆಯರಪ್ಪ ಸಬ್ಬವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ [6]"ತನ್ನನೆಂತುಂ ಕೊಂಡು ಪೋದಪೆಂ ಸಮಕಟ್ಟಿನೊಳಿರ್ಪುದೆಂದು ಪೇೞ್ದು ಬನ್ನಿಂ" ಎಂದಟ್ಟೆ ದೊಡವರ್ ಬಂದು ಭಯಸ್ಥರಾಗಿ ಕಾಪಿನವರುಮಂ, ಪ್ರಭುಗಳುಮನೊಡಂಬಡಿಸಿ ಪೊೞಲಂ ಪೊಕ್ಕು ಪ್ರಭಾವತೀಮಹಾದೇವಿಯುಂ ಕಂಡು ತಮ್ಮರಸನ ರೂಪಂ ಶ್ರೀಯುಮಂ ಕಲಿತನಮು[7]ಮ ಮೆನಿತಾನುಂ ತೆಱದಿಂ ಪೊಗೞ್ದುವಿಂ ಪೆಱತಂ ಬಗೆಯಲ್ವೇಡೆಮ್ಮೊಡನೆ ಬರ್ಪ ಸಮಕಟ್ಟ[8]ನೆ ಬಗೆವುದೆಂದೊಡಾಕೆ ಯಿಂತೆಂದಳ್—

ಕಂ|| ಎನ್ನಾಣ್ಮನ[9]ಲ್ಲದಂ ಪೆಱ |
[10]ನೆನ್ನಂ ಕೊಂಡುಯ್ವನಾದೊಡೆಂತುಂ ಪೋಗೆಂ ||
ಸನ್ನುತಶೀಲಮನೞಿವೆನೆ |
[11]ಪೊನ್ನಂ ಬೆನ್ನೀರೊಳಿಕ್ಕಿ ಕಿಡಿಸುವ ತೆಱದಿಂ || ೩೬ ||

ವ|| ಎಂದೊಡಾ ಪೆರ್ಗಡೆಗಳಿಂತೆಂದರ್—

ಕಂ|| ಶೀಲದ [12]ಫಲಮೇಂ ಶ್ರೀಯೊಳ್ |
ಮೇಲಪ್ಪನಿತೆ ಪಲಮುದುವು [13]ಮಿಂ ಮಱುಭವದೊಳ್ ||
ಕಾಲಕ್ಷೇಪಮ[14]ದಾವುದೊ |
ಲೀಲೆಯಿನೀ ಭವದೊ[15]ಳಪ್ಪ ಸಿರಿಯಂದು ಪೊಲ್ಲಾ || ೩೭ ||

---

(1) ತಮಿಳಿನಲ್ಲಿ ಶಾಕಪುರಮೆನ್ನುಂನಗರತ್ತು ಎಂದಿದೆ (2) ನೋದ್ದಾಯ (ಕ, ಚ) (3) ಸಚ್ಚರಿತದಾರನ ಚಳಿತ ಧೈರ್ಯಂ (ಕ, ಚ) (4) ಯ ರೂಪನಾಪೊೞ (ಚ) (5) ತಾಳೆಯರಪ್ಪ (ಝ) ಬುದ್ಧಿವಂತರಪ್ಪ ಸಾಕಾಳಂ ಕಾರನಂ (ಕ, ಚ) (6) ತನ್ನನೆಂತುಂ ಕೊಂಡಲ್ಲದೆ ಮಾಣೆಂ (ಕ, ಚ) (7) ಬುದ್ಧಿಯುಮಂ ಚದುರುಮಂ (8) ನೊಳಿರ್ಪುದೆಂದಟ್ಟಿದ (ಝ) (9) ಲ್ಲದೇಂ(ಚ) ದೊಂ (ಝ) (10) ನೆನಗಂ ಬಸನಾಗೆ ಮುಯ್ವುಡೆಂತುಂ(ಝ) (11) ಪೊನ್ನಂಬಂ ನೀರೊ (ಕ, ಚ) (12) ಫಲದಿಂ (ಕ, ಚ) (13) ಮುಂ (ಮಂ) (ಕ, ಚ) (14) ದೇವುದೊ (ಝ) (15) ಳಿರ್ಪ (ಕ, ಚ)

ವ|| ಎಂಬುದಂ ಕೇಳ್ದು ಪ್ರಭಾವತಿ[1] ಯಿಂತೆಂಗುಂ—

ಶಾ|| ಆಯುಂಗೆಟ್ಟು ಪ್ರತಿವ್ರತಿಕ್ಕೆ ಯಳವಂ ತಾಂ ಸುಟ್ಟು ದುರ್ಮೋಹದಿಂ |
ಬಾಯಂ ಬಿಟ್ಟು ಪರತ್ರಿಗೆಟ್ಟು ಪಟಿಯಂ ಮುಂದಿಟ್ಟು ತನ್ನಿಂ [2] ಗುಣಾ ||
ಮ್ನಾಯಂ ಪೋಗೆ ಕಳಂಕಮಾಗೆ [3] ಕುಲಮುಂ [4] ಪೋದಂದದೇನೊಳ್ಳಿತೇ |
ಶ್ರೀಯುಂ ರೂಪುಮದೇವುದಯ್ಯ! ಸಿರಿಗಂ ಶೀಲಕ್ಕಮೇನಂತರಂ || ೩೮ ||

ವ|| ಮತ್ತಂ—

ಕಂ|| ಮರಣಕ್ಕಂಜದೆ ಗುಣ[5] ಮಂ |
ಪರಿಹರಿಸದೆ ಶೀಲರತ್ನಮಂ ರಕ್ಷಿಸಿ ಸ ||
ತ್ತರೆ ಸಾವೇ ಕೇಳ್ ಶೀಲಮ |
ನುರವಣೆಯಂ ಬಿಟ್ಟ ಖಳರ ಬಾಟುಂ ಬಾಟೇ || ೩೯ ||

ವ|| ಎಂದೊಡಾ ಪೆರ್ಗಡೆಗಳಿಂತೆಂದರ್—

*ಕಂ|| ಆರ್ಕಾವೊಡುಯ್ಯ[6] ದೇಂ ಮಾ |
ಣ್ಪೆರ್ಕುಮೆ ಕೊಂಡುಯ್ಯುಮುದಱ [7] ನಟಿಮಿರವುಮುದ ||
"ಕ್ಕಿರ್ಕುಳಿಗೊಳ್ವಂಗೆರವಂ |
ಮಾರ್ಕೊಳ್ವದಿರೆಂ"ಬ ಲೋಕವಾದವನಱಿಯಾ || ೪೦ ||

ವ|| ಎನೆ ಪ್ರಭಾವತಿಯೆಂಗುಂ — ಎಟಿ[8] ದುಯ್ಯೆ ಗೆಲ್ಲಂ ಸೆಂಡಿನೊ[9] ಳಕ್ಕುಂ ಪೆಂಡಿರೊಳಕ್ಕುಮೆ? ಮತ್ತಂ—

ಮ|| ಕುಲವೆಣ್ಗೊರ್ವನೆ ಗಂಡನೊಂದುಭವದೊಳ್ ಮತ್ತೊರ್ವನಂ ಸೋಲ್ತು ನೋ |
ಡಲುಮಾಗೆಂದೊಡೆ ಕೂಡಲಕ್ಕುಮೆ? ಬಿಗುರ್ತೆ[10] ಯ್ತಂದೊಡಂ ಕೋಪದಿಂ ||
ಕೊಲಲಕ್ಕುಂ ಗೆಲಲಕ್ಕುಮಾಧರಣಿಯಂ ತಾನಾಳಲಕ್ಕುಂ ಕರಂ |
ಬಲಮಂ ನಚ್ಚಿದೊಡೆನ್ನ ಶೀಲದಳವಂ ಕೇಡಿಯ್ದಿಸಲ್ ಬರ್ಕುಮೇ || ೪೧ ||

ವ|| ಎನೆ ಪೆರ್ಗಡೆಗಳ್ ಮತ್ತಮಿಂತೆಂದರ್—

---

*ಆವರ್ಕಾವೊಡಮಿರದೆಳೆದು| ಯ್ಯೋವದೆ ಪುರಜನಮನುಜಿದೆ ತಱು(ದುಂ) ಕಳೆಗುಂ ಪೊಟಲಂ ||
ಪಾವಕನಿಂದಂ ಸುಡುಗುಂ| ನೀವುಟಿವುದು ಮರುಳ್ತನದ ಬಹುಮಾತುಗಳಂ || (ಕ, ಚ)

---

(1) ಮಹಾದೇವಿಯೆಂಗುಂ (ಝ) (2) ಗುಣಂ| ಮಾಯಂ (ಕ, ಚ) (3) ಕುಲದಿಂ (ಕ, ಚ) ಕುಲವೆಣ್ (ಝ) (4) ಪೋಗಲ್ಕದೇ (ಚ) ಪೋದಂದೊಡೇ (ಕ) (5) ಯಾದಾಗಳ್ (ಕ, ಚ) (6) ದಂ (ಕ, ಚ) (7) ನಟಿ ವಂದೇತ| ಕಿರ್ಕುಟಿ (ಝ) (8) ದುಯ್ವು (ಕ, ಚ) (9) ಳಕ್ಕಲ್ಲವೆ (ಝ) (10) ಯ್ತಂದು ತತ್ಕೋಪದಿಂ(ಝ).

ಕಂ|| ಎಂತುಮೆಱೆದೊಯ್ವ ಪ(ಪೆ)ಂ ನೀ |
[1] ನಿಂತೇನಂ ಬಗೆವೆ ಯೇನನೆಂಪವೆ[2] ಯದು ತಾ ||
ನೆಂತುಂ ಕೂಡದು ಕೆಮ್ಮನೆ |
ಸಂತಮೊಡಂಬಡುವು[3] ದುಱುವುದಱುವಾತುಗಳಂ || ೪೨ ||

ವ|| ನೀಮೆಮ್ಮರಸನನೊಲ್ಲದೊಡೆ ಪಲಂ[4] ಬರಂ ಕೊಲ್ಲದೆ ಸೈರಿಸಂ. ಆತನತ್ತ ನಿನ್ನ ಮನಂ ಪರಿಯದೊಡೆ ಯಿಲ್ಲಿ ನೆತ್ತರ ಪೊನಲ್ ಪರಿ[5]ಗುಂ. ಅದಱಿಂ ನಿನಗಾದ ಶೀಲಂ ಪಲರ್ಗಂತ್ಯ ಕಾಲಮುಂ ಮಾಡುಗುಂ. ಇನ್ನುಂ ನಿಮ್ಮಲ್ಲಿ ಬುದ್ಧಿಯೊಡೆಯರ‍್ಗನಾಳೋಚಿಸಿ ನೆಗಱಿಂ. [6] ಇಂದಿಂ ಗೆಡೆಯನಿತ್ತೆವು. ಎಂದು ಪೆರ್ಗಡೆಗಳ್ ಪೋದಾಗಳ್ ಪ್ರಭಾವತಿ [7] "ಇದರ್ಕಾನೆ ಬಲ್ಲೆಂ" ಈಯುಪಸರ್ಗಂ ಪಿಂಗುವಿನಂ ಆಹಾರಶರೀರನಿವೃತ್ತಿಯೆಂದು ಕಾಯೋತ್ಸರ್ಗದೊಳಿರ್ದಳ್. ಅನ್ನೆಗ[8] ಮೊರ್ವಂ ವ್ಯಂತರದೇವಂ ಆಕಾಶದೊಳ್ ಪೋಗಲಾ ವಿಮಾನಮಾ ಪೊಱಲ ಮೇಲೆ [9] ಬರ್ಪಾಗಳ್ [10] ತೊಟ್ಟನೆ ಕೀಲಿಸಿದಂತೆ ನಿಂದೊಡಾ ದೇವನವಧಿಜ್ಞಾನದೊಳಱಿ[11]ದು—

ಚಂ|| ಅತಿಶಯಶೀಲಸಂತೆಯನನಿಂದಿತಕಾಂತೆಯನೊರ್ವನಿಂತು ದು |
ಷ್ಕೃತಮತಿ ತನ್ನದೊಂದು ಬಲಗರ್ವದಿನುಯ್ಯಲೆ ಬಂದೋಡೀ ಪತಿ ||
ವ್ರತೆ ಗುಪಸರ್ಗಮಾ[12] ಯ್ತುದೆನಗಾಗದುಪೇಕ್ಷಿಸಲೆಂದು ನಿಂದುದ |
ಪ್ರತಿಮವಿಮಾನಮೆಂದು ಮುನಿಸಿಂ ಕರಮಾಸುರನಾದನಾ ಸುರಂ || ೪೩ ||

ವ|| [13] ಆಂತು ಮುಸಗಿ ವಿಮಾನಮನಿೞಿದು ಬಂದು ಚಂಡಪ್ರದ್ಯೋತನ ಪಡೆಯೆಲ್ಲಮ ನೊರ್ವೊದಲೆ ನೆಗೆಪಿಕೊಂಡು ಸಮುದ್ರದೊಳಿಕ್ಕಲ್ ಬಗೆದು ನೋಡಿ ಪಾಪ [14] ಚಿಂತೆಯನುೞಿ ದವನ ಪಡೆಯೆಲ್ಲಮನವನ ನಾಡತ್ತ ಲೀಡಾಡಿ ಬಂದಾ ಪ್ರಭಾವತಿ ಮಹಾಸತಿಯುಂ ಕಂಡು ಪೂಜಿಸಿ "ನಿಮ್ಮುಪಸರ್ಗಂ ಪಿಂಗಿದುದು ಕೆಯ್ಯನೆತ್ತಿಕೊಳ್ಳಿಂ" ಎಂದಾ ದೇವಂ ಪೇೞ್ದು ಪೋದಂ. ಆಕೆಯು ಶೀಲಮಾ ಭವದೊಳೆ [15] ಸಫಲಮಾದೊಡೆ ಕೆಯ್ಯನೆತ್ತಿಕೊಂಡು ಮಹೋತ್ಸಾಹದಿಂ [16] ಶಾಂತಿ ಪೂಜೆಗಳಂ ಮಾಡಿಸುತ್ತುಮಿರ್ದು ಕೆಲವುದೆವಸದಿಂ ತನ್ನ ಭರ್ತಾರಂ ಬಂದೊಡೆ ಕೂಡಿ ಸುಖಮಿರ್ದಳೆಂಬುದಂ ಕೇಳ್ದು ಅಱಿದು ಶೀಲವಂತ[17] ರಾಗಿಂ. ವ್ರತಪರೀಕ್ಷಣ[18] ಮಪ್ಪ ಶೀಲಮಂಕಾದೊರ್ಗರಿದುಂಟೆ ?—

---

(1) ನಿನ್ನೆಂತುಂ (ಝ) ನೀನೆಂತೆಮ್ಮ (ಜ) (2) ನದು ತಾನೀಗೆಂತುಂ (ಕ, ಚ) (3) ದುಱಿಯಿ ನೞಿ (ಕ, ಚ) ವೊಡುೞಿಯಿನೞಿ (ಝ) (4) ಬರನಾಶಂ (ಚ) (5) ಯದಿರದದೞಿ (6) ಇಂದಿನೊಂದು ದಿವಸಮುಂ ನಿಮಗೆಡೆ (ಕ, ಚ) (7) ಇದರ್ಕುಪಾಯಮನಾನೆ (ಝ) (8) ಮೊರ್ವವಾಸುದೇವನೆಂಬ (ಕ, ಚ) (9) ಪೋಪಾಗಳ್ (ಕ, ಚ) (10) ತೊಟ್ಟನೆವಿಮಾನಂ (ಕ, ಚ) (11) ದುನಿಂತು (ಝ) (12) ಯ್ತೆನಗದಾ ಗದು (ಕ, ಚ) (13) ಆಗಿಮುಸಗಿ (ಕ, ಚ) (14) ಪಾಪಚಿಂತೆಯಾಯ್ತು ಮುನಿಸೇಗೆಯ್ವುದೆಂದಾಬಗೆಯನುೞಿದ ವನಪಡೆ (ಝ) ಭೀರುತ್ಪದಿನವನಪಡೆಯೆಲ್ಲಮನವನನಾ (ಕ, ಚ) (15) ಫಲಮನಿತ್ತೊಡೆ (ಕ, ಚ) (16) ಜಿನ ಚೈತ್ಯಾಲಯಂಗಳ್ಗೆಶಾಂತಿ (ಕ, ಚ) (17) ರಪ್ಪುದು (ಕ, ಚ) (18) ಮುಂಶೀಲಮುಂತಪ್ಪಶೀಲಮುಂ (ಕ, ಚ)

ಧನದತ್ತನ ಕಥೆ — (ವ್ರತದ ಫಲಂ) [೪]

ಕಂ|| ವರವೀತಶೋಕೆಯೆಂಬುದು |
ಪುರಮದಱೊಳ್ ಕೀರ್ತಿವ[1]ಡೆದ ಪರದಂ ತ್ರಿಜಗ ||
ದ್ಗುರುಪದಯುಗಚಿತ್ತಂ ಭಾ |
ಸುರವಿತ್ತಂ ಪೆಸರೊಳೊಪ್ಪೆ ತಾಂ ಧನದತ್ತಂ || ೪೪ ||

ವ|| ಆತನ [2]ಸೆಟ್ಟಿತಿ ಪ್ರಭಾವತಿಯೆಂಬೊಳ್, ಆಯಿರ್ವರ್ಗಂ ಪುಟ್ಟಿ[3]ದ ಮಗಂ ನಾಗದತ್ತನೆಂಬಂ, ಈತನ ಪೆಂಡಿತಿ ನಾಗವಸು ಎಂಬಳ್. [4]ಆಯಿರ್ವರುಮನ್ಯೋನ್ಯಾಸಕ್ತಚಿತ್ತರಾಗಿ [5]ಸುಖಂ ಬಾೞುತ್ತುಮಿರೆ—

ಚಂ|| ಧನಮಿನಿತುಂ[6]ಟವುಂ ತವುಗುಮೆಂಬಭಿಸಂಕೆಯು ಚಿಂತೆ ಚಿತ್ತದ |
ತ್ತಿಸಿಸು[7]ಮದೆಯ್ದುದಪ್ರತಿಮ [8]ಚಾಗದ ಭೋಗದಳುರ್ಕೆ ಪೆಂಪುವೆ ||
ತ್ತಸವರತಂ ಪ್ರಭಾವಿಸುತುಮಿರ್ದನವದ್ಯ[9]ಮಹೋದ್ಯನೆಂಬುದೊಂ |
ದನಿತುಪೊಗೞ್ತೆ ತನ್ನೊಳೊಡ[10]ಗೂಡಿರೆ ವೈಶ್ಯಕುಮಾರನೊಪ್ಪಿದಂ || ೪೫ ||

ವ|| ಅಂತು ನಾಗದತ್ತನುದಾತ್ತಗುಣಸಂಪನ್ನ[11]ನಾಗಿರ್ಪಿನಮಾ ಪೊೞಲ್ಗೆ ಮುನಿ[12]ಗುಪ್ತಾಚಾರ್ಯರೆಂಬಾರ್ಯರ್ ಬಂದಿರ್ದೊಡೆ ವಂದನಾಭಕ್ತಿಗರಸನುಂ [13]ಪುರಜನಮುಂ [14]ಪೋಗೆ ನಾಗದತ್ತ[15]ನುಮೊಡನೆ ಪೋಗಿ ಬಂದಿಸಿ ಮುಂದೆ ಕುಳ್ಳಿರ್ದು ಧರ್ಮಶ್ರವಣಮುಂ ಕೇಳ್ದೆಲ್ಲರುಂ ಶ್ರೀಪಂಚಮಿಯ ನೋಂಪಿಯುಂ ಕೆಯ್ಕೊಳ್ವಾಗಳ್ ತಾನು[16]ಮೊಡನೆ ಕೆಯ್ಕೊಂಡೆನೆಂದು ಭಟ್ಟಾರರಂ ಬಂದಿಸಿ ಮನೆಗೆ ಬಂದಿರ್ದು ಫಾಲ್ಗುಣಮಾಸದ ಶುಕ್ಲಪಕ್ಷದ ಪಂಚಮಿಯುಂದುಪವಾಸಂಗೆಯ್ದು ಮುನ್ನೊಂದುಂ ಪಸಿದೊಂದುಗಲುಗೆಯುಮಿರ್ದಱಿಯದಾ ಗರ್ಭಸುಖಿ[17] ಪಗಲೆಲ್ಲಂ ದೇವತಾರ್ಚನಾಸ್ತವನಕ್ರಿಯೆಯಿಂದೆನಸುಂ ಸೈರಿಸಿರ್ದು ನೇಸಱ್ ಪಟ್ಟಾಗಳ್ ಪ್ರಾಣಸಂಕಟಮಾಗೆ—

---

(1) ನೆಗೞ್ದ (ಕ, ಚ) ಪಡೆಯೆ (ಝ) (2) ಪೆಂಡಿತಿ ಧನಶ್ರೀಯೆಂಬಳ್ (ಕ, ಚ) (3) ದಂ ನಾಗದತ್ತನೆಂಬ ಪುತ್ರನಾತನ (ಕ, ಚ) (4) ಅಂತವರಿರ್ವರು (ಕ, ಚ) (5) ಸುಖದಿಂದಮಿರೆ (ಕ, ಚ) (6) ಟದುಂ (ಕ, ಚ) (7) ಮನೆಯ್ದಿ (ಝ) (8) ರಾಗದ (ಕ, ಚ) (9) ಮಭೇದ್ಯ (ಕ, ಚ) (10) ನೊಂದಿದವೈಶ್ಯ (ಕ, ಚ) ನೊಂದಿದ ನಿಂದಿತವೈಶ್ಯನೊ (ಝ) ನೊಂದಿರೆ ನಂದಿರೆ (ಜ) (11) ನುಂ ಜಗನ್ಮಾನ್ಯನುಮಾಗಿ (ಕ, ಚ) (12) ಗುಪ್ತಾಚಾರ್ಯರ್ (ಕ, ಚ) (13) ಪ್ರಧಾನರುಂ ಪುರ (ಕ, ಚ) (14) ಪೋಗಿಪೊಡೆವಟ್ಟರ್ (ಕ, ಚ) (15) ನುಮವರೊಡನೆ (ಕ, ಚ) ಪೋಗಿ ಬಸದಿಯುಂ ಬಲಗೊಂಡು ದೇವರ್ಗೆ ದರ್ಶನಸ್ತುತಿಯುಂ ಪೇೞ್ದು ಭಟಾರರಂ (ಕ, ಚ) (16) ನುಮವರೊಡನೆಕೆಯ್ಕೊಗಿದಾನುಂ (ಕ, ಚ) (17) ಯಪ್ಪುದಱಿಂ (ಕ, ಚ)

ಕಂ|| ತಂದೆವಿರುಂ ತಾಯುಂ ಕರ |
ಮೊಂದಿದ ಬಂಧುಗಳುಮಿಷ್ಟವನಿತೆಯುಮೋವೋ ! ||
ಎಂದು ಪರಿತಂದು ಕೆಲದೊಳ್ |
[1] ನಿಂದು ಕರಂ ನೊಂದು ಬೆಂದು ಮಱುಗುತ್ತಿರ್ದರ್ || ೪೬ ||

ವ || [2] ಇರ್ದಿದರ್ಕೇಗೆಯ್ವೆಮಾವುದುಪಾಯಂ ? ಪೇೞಿಮೆನುತ್ತಿರೆ ತಂದೆ ಸಾರೆ ವಂದಿಂತೆಂದಂ—

ತ್ರಿಪದಿ|| ಎನಿತಾನುಕೋಟಿಯುಂ [3] ಮನೆದೀವಿ ಧನಮಿರ್ದು |
ದನಿತುಮಂ ದಾನಂಗುಡು ನೋಂಪಿ[4] ಯೊಂದಱೊ |
ಳೆನಿತ್ತಕ್ಕುಂ ಮಗನೆ ಬಿಸುಡಿದಂ || ೪೭ ||

ಧರೆಗೆಲ್ಲಂ ಚೋದ್ಯಮಾಗಿರೆ ಜಿನ ಮಹಿಮೆಯುಂ |
ಪಿರಿದನಾಂ ಮಾಡಿ ನಿನಗೀ[5] ವೆ(ನಾ)ನಿದೇ |
ವಿರಿದುಪವಾಸ ಬಿಸುಡಿದಂ || ೪೮ ||

ಕನಕದಿಂ ರತ್ನದಿಂ ಜಿನಭವನಂಗಳಂ |
ನಿನಗೆಮಾಡಿಸುವೆ ನುಪವಾಸವೊಂದಱೊ |
ಳೆನಿತನೇಕಱುವೆ [6] ಬಿಸುಡಿದಂ || ೪೯ ||

ವ|| ಎನೆ ನಾಗದತ್ತ ನಿಂತೆಂದಂ—

ತ್ರಿಪದಿ|| ಅತಿಶಯ ದಾನ[7] ಮುಂ (ಮೇಣ್) ನುತಪೂಜೆಯುಂ |
ಪ್ರತಿಯಿಲ್ಲದರ್ಹದ್ಭವನಮು [8] ಮೇವುದೋ |
ವ್ರತಭಂಗಂಗೆಯ್ವ ಮನುಜಂಗೆ || ೫೦ ||

ವ|| ಎಂದೊಡಾ ಮಾತಿಂಗೆ ತಂದೆ ಮಾಣ್ದುಸಿರದಿರೆ ತಾಯ್ ಮಱುಗಿ ಬಂದಿಂತೆಂದಳ್—

ತ್ರಿಪದಿ|| [9] ಪಲವಪ್ಪ ನೋಂಪಿಯುಂ ಸಲೆ ಮಹಾತಿಥಿ[10] ಗಳಂ |
ಪಲಕಾಲನೋಂತು ನಿನಗೀವೆನೊಂದಱಾ |
[11] ಫಲಮೆನಿಸುಂಟು ಬಿಸುಡಿದಂ || ೫೧ ||

---

(1) ನಿಂದಾಗಳ್ ಬಂದು ನೋಡಿ (ಕ,ಚ) (2) ಇರ್ದಿಲ್ಲಿಗಿನ್ನೇಗೆಯ್ವಂ (ಕ,ಚ) (3) ಮನೆಯ (ಕ,ಚ) (4) ಯೆಂದಾರೊಳೆನಿ (5) ವೆಂಮಗನಿದೇವಿರಿದೊಂದು (ಕ,ಚ) ದೇವಿರಿದುಪವಾಸ ನೋಂಪಿಯುಂಬಿಸು (ಝ) (6) ಮಗನೆ ನೀಂಬಿಸು (ಕ,ಚ) ಮೊಂದರಿಂದೆನಿತಕ್ಕು ಮಗನೇ (ಝ) (7) ಮುಮತಿಶಯ ಪೂಜೆ (ಕ,ಚ) ಮುಮತಿನುತಪೂ (ಜ) (8) ಮೇಗೆಯ್ದುಂ ಬ್ರತಮಿಲ್ಲದಿರ್ದಮನುಜಂಗೆ (ಕ, ಚ) ಭಂಗಮಾದ (ಝ) (9) ಪಲವುಪೆನೋರ್ಂಪಿ (ಝ) ಫಲವು ಪೆಣ್ ನೋಂಪಿ (ಕ, ಚ) (10) ಗಳೊಳ್ಪಲವುಮಂ (ಕ, ಚ) ಫಲಮೇನೊ (ಜ)

ತ್ರಿಪದಿ|| ಅಷ್ಟೋಪವಾಸ[1] ಮರ್ಧಾಷ್ಟಮಿಯೆಂಬಿವ |
ನಷ್ಟಮಿ[2] ಬಾವು ದಿವಸಮಂ ನೋಂತೀವೆ |
ಜ್ಯೇಷ್ಠಪುತ್ರಕನೆ ಬಿಸುಡಿದಂ || ೫೨ ||

ಸರ್ವಾನುಕೂಲಮಂ ಸರ್ವತೋಭದ್ರಮು |
ನೊರ್ವಳಿ ನೋಂತು ನಿನಗೀವೆನಿದುವೇನ |
ಪೂ[3]ರ್ವಮೇ ಮಗನೆ ಬಿಸುಡಿದಂ || ೫೩ ||

ಪರಮ ಚಾಂದ್ರಾಯಣಮುರಜಮಧ್ಯಾದಿಮು |
ದರಪಜ್ತಿಯೆಂದು ನೆಗಲ್ದು[4]ವಂ ನೋಂತೀವೆ |
ನಿರವೇಡ ಮಗನೆ ಬಿಸುಡಿದಂ || ೫೪ ||

ವ|| ಎಂದೊಡಬ್ಬಾ ಕೇಳಿಮೆಂದು ನಾಗದತ್ತನಿಂತೆಂದಂ—

ತ್ರಿಪದಿ|| ಎನಿತಾನುಂ ನೋಂಪಿಯುಂ ನಿನಗೀವೆನೆಂ[5]ದೊಡೀ |
ಮುನಿಯಿತ್ತ ವ್ರತಮನಱಿದೊಡೆ ನೀಮಿತ್ತು |
[6]ದೆನಗೇಕೆ ಮತ್ತೆ ಫಲಮುಕ್ಕುಂ || ೫೫ ||

ವ|| ಎಂದೊಡಬ್ಬೆಯುಂ[7]ಂಪೋಗೆ ಬಟಿಕ್ಕೆ ನಾಗವಸು ಬಂದಿಂತೆದಳ್ ||

ತ್ರಿಪದಿ|| ಏಂ ಪೇಟಿಮಱಿಯಿರೇ ನೋಂಪುದು(ರು)ಋಷಿಯರ |
ನಾಂಪುದುಮೆಸಗ ಬೆಸನೆಂದುಮದಱಿ ನೀ |
ನೋಂಪಿಯಂ ನಾನೆ ಸಲಿಸುವೆಂ || ೫೬ ||

ಊನಮಿಲ್ಲ[8]ದ ನಿಮ್ಮ ದಾನಕ್ಕೆ ಧರ್ಮಕ್ಕೆ |
ಯಾನಱ್ತಿಪಟ್ಟು ಬೆಸಕೆಯ್ವೆ [9]ನೆನ್ನ ನಿ |
ನ್ನೀ ನೋಂಪಿವಿಡಿದು ಕೆಡಿಪಿರೇ || ೫೭ ||

---

(1) ವನುಯಿಷ್ಟಾರ್ಥಸಿದ್ಧಿಯ (ಕ, ಚ) (2) ಮಿನಾವು (ಕ, ಚ) (3) ಪೂರ್ವಮಗನೆ (ಕ, ಚ) (4) ಬ್ದುವೆ ಲ್ಲವನೀವೆ (5) ನೆಂದಪಿರ್ (ಝು) ನೆಂದಪೆ(ಪ್ಪೈ) (ಕ, ಚ) (6) ದೆನಗೆ ಮತ್ತೇಕೆ (ಕ, ಚ) (7) ಯುಸಿರದಿರೆ (ಝು) ಯುಂಮಾಣ್ಡಬಟಿಕ್ಕೆ (ಕ, ಚ) ಯಾಮಾಣ್ಡುಸಿರದಿರೆ (ಜ) (8) ದಾನಿಮ್ಮದಾನಕ್ಕುಂ....ಕ್ಕಂ (ಕ, ಚ) (9) ನೆನಗಿಂ ನೋಂಪಿ (ಕ, ಚ)

ತ್ರಿಪದಿ|| ಓಂದುವರ ಕಡೆ[1] ಗಣೆಯಿಸದೊಂದು ಚಿತ್ತದೊ |
[2] ಳೊಂದಿದಂತಱಿದು ಬೆಸಕೆಯ್ವೆ ನೀನೋಂಪಿ |
ಯೊಂದಱಿಂದೆನ್ನ [3] ನಱಿವರೇ || ೫೮ ||

ಇನ್ನೆಗಂ ಕೂರ್ಮೆಯಿಂ ನಿನ್ನ ಮಚ್ಚನೆ ಮಚ್ಚಿ |
ದೆನ್ನ [4] ನಿಂತುಱಿಯೆ ಬಿಸುಟೊಂದುಪಾಪಮಂ |
[5] ನೀನ್ನೊಂತ ನೋಂಪಿ ಕಿಡಿಕುಮೇ || ೫೯ ||

ವ|| ಎನೆ ನಾಗದತ್ತ[6] ನಾ ಮಾತಂ ಕೇಳ್ದಿಂತೆಂದಂ—

ತ್ರಿಪದಿ|| ನಿನ್ನ ಕೇಡಿಂಗಲ್ಲೆನ್ನ[7] ನಿಂತೆಂದಪೆ |
ಸನ್ನುತವ್ರತಮನಱಿದೊ[8] ಡೆ ಕಿಡುವೆ [9] ನಿಂ |
ತೆನ್ನ ಕೇಡಿಂಗೆ ಬಯಸುವೋ || ೬೦ ||

ವ|| ಎಂಬುದಂ ಕೇಳ್ದು ಮಱುಮಾತಿಂಗಾಸೆಗಾಣದೆ ಮುಚ್ಚೆವೋಗಿ ಬಿಱ್ದಾಗಳಾಕೆ[10] ಯುಂ ಪಿಡಿದೊಂದುದೆಸೆಗುಯ್ದು[11] ತಣ್ಪುಗೆಯ್ಯುತ್ತಿರೆ ಬಂಧುಗ[12] ಳಪ್ಪವರೊಳಗೊರ್ವಂ ಕುಶಲನಪ್ಪಾತ ನಾಮನೆಯ ಮೇಲ(ಗ)ಂ ಛಿದ್ರಂಮಾಡಿ ಕನ್ನಡಿಯ[13] ನಮರ್ಚಿ ಬೆಳಗುವ ಮಾಣಿಕಂಗಳಂ ಬಳಸಿಯುಂ ಪತ್ತಿಸಿಟ್ಟು "ನೇಸರ್ಮೂಡಿತಿನ್ನೇ[14] ಕಿರ್ಪಿರ್, ಪಾಲ್ಗಂಜಿಯಂ ಕುಡಿವಿರೇಱ" ಮೆನೆ[15] ಪೊಱ್ತು ನಳವಿಯನಱಿದು "ಕೃತಕಮಿದುಮಿಾಗಳೆನ್ನ ಪ್ರಾಣಂ ಪೋದೊಡಂ ಪೋಕೆ ಆನಳಿಪುವೆನಲ್ಲೆಂ, ನೀಮು[16] ಲ್ಲಂ ಮಗುಱ್ದುಸಿರದಿರಿಂ, ಆರಾನುಂ ಸೈರಣೆಯುಳ್ಳವರ್ ವಂದೆನ್ನ ಕೆಲದೊಳಿರ್ದು ಅವಸಾಂತರಮನಱಿದು ಪಂಚನಮಸ್ಕಾರ[17] ಮನೋದುತ್ತುಮಿರಿಂ" ಎಂದು ಪೇಱ್ದು ತಾನುಂ ಪರಮಾತ್ಮ[18] ಧ್ಯಾನದೊಳ್ ಮುಡಿಪಿ ಸೌಧರ್ಮಕಲ್ಪದೊಳ್ ರತ್ನಮಯಮಪ್ಪ ವಿಮಾನದೊಳಗೆ ಪಾಸಿನ ಪೊರೆಯೊಳ್ ಪುಟ್ಟಿದೆರಡುಘಳಿಗೆಯೊಳ್ ನವಯೌವನನುಂ ಷೋಡಶಾಭರಣಭೂಷಿತನುಮಾಗಿ ದಿವ್ಯವಿಳಾಸದಿನಿರ್ದ[19] ನಲ್ಲಿ—

---

(1) ಗಣ್ಪದೊಂದು (ಕ,ಚ) ಗಾಣ್ಪುದೆಂದುದುಮಂ (ಜ) (2) ಪೊಂದಿತಂದಿರಿದು (ಕ,ಚ) (3) ಕಿಡಿಪಿರೇ (ಝ) (4) ನಿಂತಳಲೆ ಬಿಸುಟೊಂದು(ಕ,ಚ) ನಿಂತಱಿಲೆ ಬಿಸುಟೊಂದು (ಝ) (5) ನಿನ್ನೊಂದುನೋಂಪಿ (ಕ,ಚ) (6) ನಾಕೆಗಿಂತೆಂದಂ (ಕ,ಚ) ನಾಕೆಯುಮಾತಂ (ಝ) (7) ನ್ನನೇಕೆಂದಪ್ಪೆ (ಕ,ಚ) (8) ಡಾಂ ಕಿಡು (ಝ) (9) ನೆಂತೆನ್ನ (ಕ,ಚ) ನಂತೆನ್ನ(ಝ) (10) ಯನಲ್ಲಿಂದಗಲೆ ಕಳೆದುಯ್ದು(ಝ) (11) ಶೀತಳದ್ರವ್ಯಂಗಳಿಂ ತಣ್ಪು (ಕ,ಚ) (12) ಳೆಲ್ಲಂ ನೆರೆದಿರ್ದಲ್ಲಿಯೊರ್ವಂ (ಕ,ಚ) ಗಳೊಳೊರ್ವಂ (ಜ) (13) ನಡಗಿಸಿ ಬೆಳಗುಮಾಡುವ (ಕ,ಚ) (14) ಕಿರ್ಪ್ಪೆ (ಕ,ಚ) (15) ನಾಗದತ್ತನೆಂದಂ ಪೊಱ್ತು ನಳವಿಯನಱಿಯೆನೇ ನಿಮ್ಮ ಕೃತಕಮಿದು (ಕ,ಚ) ಕೃತ್ರಿಮಮಿದು (ಚ) (16) ಲ್ಲಮಗಲ್ದು (ಜ) (17) ಮನವಧಾರಿಸುತ್ತಿರ್ಪು (ಕ,ಚ) ವೇೞುತ್ತಿರ್ಪು (ಝ) (18) ಧ್ಯಾನಿಸುತ್ತುಂ ಪಂಚನಮಸ್ಕಾರಂಗಳನವಧಾರಿಸುತ್ತುಮರ್ಧರಾತ್ರಿಯೊಳ್ (ಕ,ಜ) (19) ದಿವ್ಯಗಂಧ ದಿವ್ಯಸ್ರಕ್‌ದಿವ್ಯವಸ್ತ್ರದಿವ್ಯಭೂಷಣನುಮಾಗಿ (ಝ)

ರಗಳೆ– ಎತ್ತಲುಂ ಜಯಜಯ ಸನಾದಮೆ – ಎತ್ತಲುಂ ಚಿತ್ತ[1]ಕ್ಕೆ ಸಂಹ್ಲಾದಮೆ || ೧ ||
ಎತ್ತ ನೋಡುವೊಡಮೊಸೆದಾಟಮೆ – ಎತ್ತ ಕೇಳ್ವೊಡಮೆಸೆವ [2]ಪಾಟಮೆ || ೨ ||
ಎತ್ತಲುಂ ತೀಡುವೊಡಮೊಳ್ಗಂದಮೆ – ಎತ್ತಲುಂ ಮಣಿಮಯ ಸುಬಂದಮೆ || ೩ ||
ಎಲ್ಲದೆಸೆಯುಂ ಕರಮೆ[3]ರಮ್ಯಮೆ –* (ಎಲ್ಲನೆಲನುಂ ಮನಕ್ಕೆ ರಮ್ಯಮೆ) || ೪ ||
ಎಲ್ಲಕಾಲಮುಮವರ್ಗೆ ಭೋಗಮೆ – ಎಲ್ಲ ಮಾಟಕ್ಕೆಯೊಳಮನುರಾಗಮೆ || ೫ ||
ಎಲ್ಲ[4]ರೋರೊರ್ವರೊಳ್ ಕೂರ್ಪರೇ – ಎಲ್ಲರುಂ ಸುಖದಿಂದಮಿರ್ಪರೇ || ೬ ||
ಆಗಳುಂ ವಿಪುಳಸಂಪ್ರೀತಿಯೆ – ಆಗಳುಂ ಬಹುವಿಧದ ಭೂತಿಯೆ || ೭ ||
ಆಗಳುಂ ಚಿತ್ತಸಂತೋಷಮೆ – ಆಗಳುಂ ಶೋಭನವಿಶೇಷಮೆ || ೮ ||
ಆಗಳುಂ ಮಣಿಮಯ ವಿಳಾಸಮೆ – † .................. || ೯ ||
ಆಗಳುಂ ಮಿತ್ರಸಂಯೋಗಮೆ – ಆಗಳುಂ ಕ್ರೀಡನೋದ್ಯೋಗಮೆ || ೧೦ ||
ಆಯುಮಿಕ್ಕಿರ್ದ ಕಲ್ಪಾಯುವೆ – ಶ್ರೀಯಾಯುಮುಳ್ಳನಂ ಸ್ಥಾ[5]ಯುವೆ || ೧೧ ||
||೬೧||

ಕಂ|| ಅನವರತ ಭೋಗದಿಂದಂ |
ತನುಪಮಮಾಗಿರ್ದ ಸಗ್ಗದೊಳ್ ಸುಖಮಂ ತಾ ||
ನನುಭವಿಸಿ ಬಂದು ಬಟಿಕಂ |
ಮನುಷ್ಯ[6]ಗತಿಯೊಳ್ ಪ್ರಸಿದ್ಧರಾಜಾನ್ವಯದೊಳ್ || ೬೨ || ‡

ವ|| ಅಂತು ಬಂದು ಜಯಂಧರಮಹಾರಾಜಂಗಂ ಶ್ರೀಪೃಥ್ವೀಪತಿಮಹಾದೇವಿಗಂ ನಾಗಕುಮಾರನೆಂಬ ಮಗನಾಗಿ ಪುಟ್ಟಿ ಮಹಾಮಂಡಳಿಕ ಶ್ರೀಯುಂ ತಾಳ್ದಿ ರಾಜ್ಯಂಗೆಯ್ದು ತುದಿಯೊಳ್ ದೀಕ್ಷೆಯಂ ಕೊಂಡು ಕರ್ಮಕ್ಷಯಂಗೆಯ್ದು ನಿಂತು—

---

(1) ತದಾಹ್ಲಾದಮೇ(ಜ) ಚಿತ್ತಸಂಹ್ಲಾಮಮೆ(ಕ,ಚ) (2) ಗೀತಮೇ(ಕ,ಚ) ಪಾಡಮೆ(ಜ) ಪಾಡಮೇ(ಝ) (3) ಸೌಖ್ಯಮೇ (4) ಲ್ಲಮೊಂದೊರ್ವರೊಳ್ (ಕ,ಚ) ಮೋರೊಂದರೊಳ್ (ಜ) (5) ಸ್ಥಾಯಿಯೆ (ಕ,ಚ) ಗತಿಯ ವಿಶಿಷ್ಟಮೆನಿಪರಾಜಾ (ಝ)

‡ ಇಲ್ಲಿಂದ ಮುಂದೆ (ಕ,ಚ) ಪ್ರತಿಗಳಲ್ಲಿ ನಾಗಕುಮಾರನ ಕಥೆಯಿದೆ. ' ಉಳಿದುವುಗಳಲ್ಲಿಲ್ಲ-ಆದರೆ ಈ ಪ್ರತಿಗಳಲ್ಲಿ ಕೊನೆಯ ಉಪಸಂಹಾರ ಪದ್ಯಗಳೂಕೂಡ ಈಕಥೆಯು ಮುಗಿದ ಬಳಿಕವೇ ಇರುವುದರಿಂದಲೂ, ನಿದರ್ಶನ ಕಥೆಯು ಸಂಪೂರ್ಣವಾಗಿಲ್ಲವಾದುದರಿಂದಲೂ ಈ ಕಥೆಯು ಗ್ರಂಥಶರೀರಕ್ಕೆ ಸೇರಿದುದೆಂದೇ ಊಹಿಸಬಹುದು, ಕೆಲವು ಪ್ರತಿಗಳಲ್ಲಿಲ್ಲದುದರಿಂದ ಕೊನೆಯಲ್ಲಿ ಪರಿಶಿಷ್ಟವಾಗಿ ಕೊಟ್ಟಿದೆ—"ನಾಗಕುಮಾರಚರಿತೆ" ಎಂಬ ಈ ಕಥೆಯು ಜೈನರಲ್ಲಿ ತುಂಬಾ ಬಳಕೆಯಲ್ಲಿದೆ "ಸಾಂಗತ್ಯ" ಛಂದಸ್ಸಿನಲ್ಲಿ ಈ ಕಥೆಯು ಪ್ರಸಿದ್ಧವಾಗಿದೆ. ಮಿಕ್ಕ ಪ್ರತಿಗಳಲ್ಲಿ ಈ ಕಥೆಯು—ಈ ಕಂದದ ಮುಂದಣ ಸಣ್ಣಗದ್ಯದಲ್ಲಿ ಅಡಕಮಾಡಲ್ಪಟ್ಟಿದೆ—

---

* ಇಲ್ಲಿ ಒಂದು ಪಾದವಿರಬೇಕು (ಗ್ರಂ.ನಿ.)

† ಇಲ್ಲಿ ಒಂದು ಪಾದವಿರಬೇಕು — ಗ್ರಂಥನಿರಂತರವಾಗಿದೆ ಸೂಚನೆಯೂ ಇಲ್ಲ (ಜ,ಝ)

ಚಂ|| ಪರಮಸುಖಂ ಮಲಕ್ಷಯದಿನುಗ್ರಸುಲಕ್ಷಯಮಾತ್ಮಶುದ್ಧಿಯಿಂ |
ನಿರುಪಮಿತಾತ್ಮಶುದ್ಧಿ ಸುಚರಿತ್ರದಿ[1] ನಿರ್ದ ಚರಿತ್ರದೋಜೆ ಭಾ ||
ಸುರತರ ಧರ್ಮದಿಂ ಮೊಗಗುಮೆಂದೊಡೆ ಧರ್ಮಮೆ ಮೂಲಮುತ್ತಮಾ |
ಚರಣೆಗಮಾತ್ಮಶುದ್ಧಿಗೆ(ಗ) ಮಲ(ಘ)ಕ್ಷಯಕಂ ಮ(ಸ್ಥಿ)ರಸೌಖ್ಯರಾಶಿಗಂ || ೬೩ ||

(ಕವಿ ವಿಷಯ) ಮತ್ತು (ಉಪಸಂಹಾರ)

ಮ|| [2] ನುತವೈಶ್ಯೋತ್ತಮ **ಬಂಧುವರ್ಮರಚಿತಂ** ಶ್ರೀ ಜೀವಸಂಬೋಧನೋ |
ನ್ನತನಾಮಪ್ರವಿರಾ[3] ಜಿತಂ ನೆಗಳ್ದನುಪ್ರೇಕ್ಷಾಧಿ[4]ಕಾರಾಭ್ಯುಪಾ ||
ಶ್ರಿತಮಂ ಭಾವಿಸೆ [5] ಬೋಧಿನಿಲ್ಕುಮುದಱಿಂ[6] ದಷ್ಟಾಘಸಂಬಂಧನ |
ಕ್ಷತಿಯಂ ನೆಟ್ಟನೆಮಾಡಿ ಗೆಲ್ದು ಪಡೆವರ್ ಸಂಶುದ್ಧಿಯಿಂ ಸಿದ್ಧಿಯಂ || ೬೪ ||

— ಗದ್ಯಂ —

ಇದು ಜಿನಶಾಸನ ಪ್ರಭಾಸನ ಶೀಲೋದಿತ ವಿದಿತ

**ಬಂಧುವರ್ಮ ನಿರ್ಮಿತಮಪ್ಪ**

## ಜೀವಸಂಬೋಧನಾ ಗ್ರಂಥಾವತಾರದೊಳ್

ಧರ್ಮಾನುಪ್ರೇಕ್ಷಾಭಿಧಾನಂ – ನಾಗದತ್ತಚರಿತಂ

ದ್ವಾದಶಾಧಿಕಾರಂ.

**—ಜೀವಸಂಬೋಧನಾ ಗ್ರಂಥಂ ಸಂಪೂರ್ಣಂ—**

ಮಂಗಳಮಹಾಶ್ರೀಶ್ರೀಶ್ರೀಶ್ರೀ.



ಕ, ಪ್ರತಿ

ಭವಾರ್ಣವೇ ಜಂತುಸಮೂಹಮೇನ–ಮಾಕರ್ಷಯಾಮಾಸ ಹಿ ಧರ್ಮಪೋತಾತ್ ||
ಮಜ್ಜನ್ತಮುದ್ದಿಶ್ಯ ಯ ಏನಸೋಽಪಿ – ತಂ ವೀರನಾಥಂ ಪ್ರಣಮಾಮಿ ಭಕ್ತ್ಯಾ ||

(1) ನಾಸುಚರಿತ್ರ (ಕ, ಚ) ತ್ರದೆ ಶುದ್ಧಚರಿತ್ರ (ಝ) (2) ಮನುವಂಶೋತ್ತಮ (ಪ್ರಾಸು ?) (ಚ) ನುತವಂಶೋತ್ತಮ (ಕ) (3) ಜಿಯಂ (ಕ, ಚ) (4) ದಿರಭುಪಾ (ಚ) (5) ಧರ್ಮ (ಕ, ಚ) (6) ದಷ್ಟಾಂಗಸಂ(ಚ) ದುಃಪಾಪ (ಕ, ಜ)

# ಪರಿಶಿಷ್ಟ ೧

## [ ನಾಗಕುಮಾರನ ಕಥೆ ]

( ಅನವರತ........ರಾಜಾ(ನ್ವ)ಲಯದೊಳ್—ಎಂಬ ಕಂದವಾದ ಬಳಿಕ )

ಮಗಧಮೆಂಬುದು ದೇಶಂ. ಆ ದೇಶಮೊಳಿಂದ್ರಪುರೋಪಮುಂಬೆತ್ತು ತೊಳಗಿ ಬೆಳಗುವ ಕನಕಪುರವರದೊಳ್ ಮಂಡಳಿಕಶ್ರೀಯನಾಂತೆಸೆವ ಜಯಂಧರಮಹಾರಾಜಂಗಂ ಸುಶೀಲವತಿಯಪ್ಪ ಪೃಥ್ವೀಮಹಾದೇವಿಗಂ ಸುಸ್ವಪ್ನಪೂರ್ವಕಮಾಗಿ ಸುಲಗ್ನದೊಳ್ ಸುಲಕ್ಷಣೋಪಲಕ್ಷಿತ ಚರಮದೇಹಧಾರಿಯಾಗಿ ಪುಟ್ಟಿ ವಿಕ್ರಮಂಧರನೆಂಬ ನಾಮಮಂ ಬೆತ್ತನಂತರದೊಳ್ ಬಾಳಕೇಳೀ ವಿಳಾಸದೊಳ್ ತಮ್ಮುಪವನಮಧ್ಯದೊಳಿರ್ಪಕೃತ್ರಿಮಚೈತ್ಯಾಲಯಕ್ಕಂಬೆಗಾಲಿಂದೆ ಬಂದು ವಜ್ರಮಯಮಪ್ಪ ಪಡಿಗಳ್ ಮುಟ್ಟಿದಂದನಿತಱೊಳೆ ಜಯಜಯನಿನಾದಂ ಬೆರಸು ತೆಱೆಯಲ್ ಘನಾವರಣಂ ಪೋಗೆ ಬೆಳಗುವ ಭಾಸ್ಕರಬಿಂಬದಂತಮಿತಚಂದ್ರಾದಿತ್ಯಪ್ರಭಾನಿರಸನಂಗೆಯ್ವ ಪಾದನಖವಿರಾಜಮಾನನುಂ, ನಿತ್ಯನಿರುಪಮನಿರಾನಂದ ನಿರ್ವಿಕಾರನಿರ್ಮಲನುಮಪ್ಪ ಜೈನೇಂದ್ರ ಮೂರ್ತಿಯಂ ಕಂಡು ಸಿಸುವಿನೊಡನಿರ್ಪ ದಾದಿಯರನ್ಯವ್ಯಾಪಾರಮಂ ಬಿಟ್ಟು ಸಾಷ್ಟಾಂಗ ವೆಱಗಿರ್ಪಿನಮಿತ್ತ ತತ್ಸಮೀಪವರ್ತಿಯಾಗಿರ್ಪ ವಿಷಕೂಪಮಂ ಸಾರೆವಂದು ಕೂಪದೊಳ್ ನಿರೀಕ್ಷಣಂಗೆಯ್ಯೆ ತೋರ್ಪ ತನ್ನ ಪ್ರತಿಬಿಂಬಮಂ ಕಂಡೊಳಕ್ಕೆ ಬೀೞ್ವ ಸಿಸುವಂ ನಾಗರಾಜಂ ಕಂಡು ಪೆಡೆಯೊಳಾಂತನಿತ್ತಲ್ ಸಿಸುವಂ ಕಾಣದ ವಾರ್ತೆಯಂ ಕೇಳ್ದು ಪೃಥ್ವೀಮತಿ ಮಹಾಕ್ಲೇಶದಿಂ ಬಂದು ಕೂಪನಿರೀಕ್ಷಣಂಗೆಯ್ದಲ್ಲಿ ಸಿಸುವಂ ಕಂಡು ವಾತ್ಸಲ್ಯದಿಂ [1] ನೆಲೆಗೊಡದ ವಿಷ ಮಯಮಪ್ಪ ಭಾವಿಯಂ ಧುಮ್ಮಿಕ್ಕೆ ಜಿನಪೂಜಾಧುರಂಧರೆಯಾಗಿ ಸುಶೀಲೆಯಪ್ಪುದಱಿಂ ಜಾನುದಘ್ನಮಾಗೆ ಈ ವಾರ್ತೆಯಂ ಜಯಂಧರ ಮಹಾರಾಜಂ ಕೇಳ್ದು(ಳಿ) ಪರಿಮಿತ ಪರಿಜನಂಬೆರಸು(ಗೂಡಿ) ಬಂದು ನಾಗರಾಜನಂ ಪ್ರಾರ್ಥಿಸಿ ಸಿಸುಮಂ ಸ್ತ್ರೀಯಂ ಕೊಂಡು ಬಂದು ಜಿನಪೂಜಾಮಹೋತ್ಸವಂಗೆಯ್ದು ಪುನರ್ನಮಸ್ಕಾರಂಗೆಯ್ದು ಮನೆಗೆ ಬಂದು ಕೃತಘ್ನತೆಯನುೞಿದು ಕೃತಜ್ಞತೆಯಂ ಕೆಯ್ಕೊಂಡು ನಾಗಕುಮಾರನೆಂದಭಿಧಾನಂಗೆಯ್ದು ಶಸ್ತ್ರಶಾಸ್ತ್ರಂಗಳೊಳ್ ಪ್ರವೀಣನಂ ಮಾಡೆಯಾ ಕುಮಾರನುಂ ಚರಮದೇಹಿಗಳಪ್ಪ ವ್ಯಾಲ ಮಹಾವ್ಯಾಲ ಅಚ್ಛೇದ್ಯ ಅಭೇದ್ಯರೆಂಬೀ ಸಕಲರುಂ ಬಂದು (ಸೇರೆ) ಕೂಡೆ ದಿಗ್ವಿಜಯಂಗೆಯ್ದುಮೆಣ್ಬಾಸಿರ್ವರ್ ರಾಜಪುತ್ರಿಯರಂ ಮದುವೆನಿಂದು ಯೆಣ್ಬಾಸಿರಮಕುಟಬದ್ಧರಂ ಬೆಸಕೆಯ್ಸುವ ಮಹಾಮಂಡಳಿಕಪದವಿಯನಾಂತು ಸುಖಸಂಕಥಾ ವಿನೋದದಿಂ ರಾಜ್ಯಭಾರಮನಾಂತು ನಿಜರಮಣೀಜನಮನೋಹರನುಂ, ಧಾರ್ಮಿಕಜನಂಗಳ್ಗೆ ಪರಮಭಾಂಧವನುಂ, ರಿಪುಮಹೀಪತಿ ಮಾನಗರ್ವಲತಾಲವಿತ್ರನುಂ ಮಿತ್ರಜನಸಂಘ ಸರೋರುಹ ಮಿತ್ರನುಂ, ಜಿನೇಂದ್ರ ಪಾದಪಯೋಜ ಪ್ರಣಾಮಾವೇಕ್ಷಣ ಪವಿತ್ರೀಕೃತನಿಜಗಾತ್ರನೇತ್ರನುಂ,-ಜಿ(ಜ)ನಶಾಸ್ತ್ರ ಪಾರಾವಾರಪಾರಂಗತನುಮಪ್ಪ ನಾಗಕುಮಾರನುಂ ಮಹಾಮಂಡಳಿಕಶ್ರೀಯಂ ಪಲಕಾಲಂಬರಮನುಭವಿಸುತ್ತಿರ್ದೊಂದುದೆವಸಂ ನಾನಾರತ್ನಖಚಿತಮಪ್ಪ ರತ್ನಸಾನುಸದೃಶಮಾಗಿ ಪೊಪ್ಪುವ ನಿಜಪ್ರಾಸಾದೋಪರಿಮಪ್ರದೇಶದೊಳ್ ಅಷ್ಟವಿಧ ಮಹಿಷೀಜನಪುರಸ್ಸರಮಾದ ಯೆಣ್ಬಾಸಿರ್ವರರಸಿಯರುಂ, ಅನೇಕ ಪರಿವಾರ ಸ್ತ್ರೀಯರುಂಬೆರಸು ಸಿಂಹಸನಾಸೀನನೊಡ್ಡೋಲಗಂಗೊಟ್ಟಿರ್ಪಿನಂ ನೋಡಿದರೆಲ್ಲರುಂ, ನಾಗೇಂದ್ರನುಂ, ನರೇಂದ್ರನುಂ ಸುರೇಂದ್ರನುಮಿವನೊಳ್

(1) ನೆಲೆಯನ್ನು ಕೊಡದಿರು ಎಂದರೆ ತಳಸಿಕ್ಕದಿರುವ (ತುಂಬಾ ಆಳವಾದ)

ಪಾಸಟೆ(ಯಿ)ಯಲ್ಲಿಂದು ಪೊಱಲಿ, ಇಂತು ಮಹಾಮಹಿಮೆವೆತ್ತಿರ್ದೆಡೆಯೊಳ್ ದಿಶಾವಲೋಕನಂ ಗೆಯ್ಯುತ್ತಿರ್ದಾಗಳಂತರಿಕ್ಷದೊಳ್ ಮಾಡ(ಟ)ಕೂಟ ತರುಗುಲ್ಮ ಮೃಗಪಶುಪಕ್ಷಿ ಮನುಷಾ ಕಾರಂಗಳಂ(ಮಂ) ಕೊಂಡು ತೋರ್ಪ ಮೇಘಾಡಂಬರಮಂ ಕಂಡು ವಿಸ್ಮಯಂಬಟ್ಟು ನೋಡು ತ್ತಿರ್ಪನ್ನೆಗಮದೃಶ್ಯಮಾಗಿ ಪೋಗೆ ಕಂಡು ಮನದೊಳಿಂತೆಂದಂ:—ತನುವುಂ ಕಳತ್ರಮುಂ (ಪುತ್ರರುಂ) ಬಂಧುಜನಂಗಳುಂ ಧನಮುಂ ವಿಭವಮುಂ ನೋಡಲ್ಕೆ* ಮಂಜು, ದರಿಯಮರಂ ಸುರಚಾಪಂ ನೀರಬೊಬ್ಬುಳಿಕೆ ಕಿಸುಸಂಜೆಯ ರಂಜನೆಯಂತೆ ಕಿಡಲಿರ್ಪುದಲ್ಲದೆ ಶಾಶ್ವತಮಲ್ತೆಂದುಂ ಮತ್ತಮಧ್ರುವಾದಿ ದ್ವಾದಶಾನುಪ್ರೇಕ್ಷಾಭಾವನಂಗೆಯ್ದು ತನ್ನ ಪಿರಿಯಮಗನಪ್ಪ ದೇವ ಕುಮಾರಂಗೆ ಪಟ್ಟಮಂ ಕಟ್ಟಿ ಪಲಂಬರರಸುಗಳ್ವೆರಸು ದೀಕ್ಷೆಯಂ ಕೆಯ್ಕೊಂಡು ಏಕವಿಹಾರಿಯಾಗಿ ಘಾತಿಕರ್ಮನಿರ್ಮೂಲನಂಗೆಯ್ಯಲೊಡನೆ ಕೇವಲ ಜ್ಞಾನೋದಯಮಾದಾಗಳದನಱಿದು(ಇಂದ್ರಂ ಕುಬೇರಂಗೆ ನಿರವಿಸೆ) ಇಂದ್ರನಾಜ್ಞೆಯಿಂ ಕುಬೇರಂ ಬಂದು ಗಂಧಕುಟಿಯಂ ನಿರ್ಮಿಸಲಾ ಗಂಧ ಕುಟಿಯ ಮಧ್ಯದೊಳ್ ವಿರಾಜಿಸುತಿರ್ಪ ಸಿಂಹ ಪೀಠಸ್ಥಿತ ಕಮಲಕರ್ಣಿಕಾಂತರಮಂ ನಾಲ್ವೆರಲ್ ಮುಟ್ಟದೆ [1]ಕುಳ್ಳಿರ್ದೊಪ್ಪುವ ದೇವಾದಿದೇವನಂ ಬಂದಿಸಲೆಂದು ಚತುರ್ನಿಕಾಯಾ[2]ಮರರರ್ಕಳುಂ ಮನುಷ್ಯೋತ್ತಮರುಂ ಬಂದು ಜಯಜಯನಿನಾದದೊಡನೆ ಕೂಡಿ ಸಾಷ್ಟಾಂಗ ಪ್ರಣಾಮಂಗೆಯ್ದು ಅಷ್ಟವಿಧಾರ್ಚನೆಯಿಂದರ್ಚಿಸಿ ಪುನಃಪ್ರಣಾಮಂಮಾಡಿ ತಂತಮ್ಮ ಯಥಾಯೋಗ್ಯಸ್ಥಾನದೊಳ್ ಕುಳ್ಳಿರೆ ದೇವಾಧೀಶಂ ಬಂದು ಸಾಷ್ಟಾಂಗಪ್ರಣಾಮದಿಂ ಪೊಡೆವಟ್ಟು ಮುಕುಳಿತಕರಕಮಲನಾಗಿ ಎಲೆ ಸ್ವಾಮಿ, ಪ್ರಾಣಿಗಳ ಸಹಜಪರಿಣಾಮಮುಮಂ ಸಾಗಾರಾನಗಾರ ಧರ್ಮಮುಮಂ ನಿರವಿಸ ವೇಡಿಕ್ಕೆಂದು ಬಿನ್ನಪಂಗೆಯ್ಯೆ ಸಹಜಾದ್ರ್ರಹೃದಯನುಂ, ನಿರ್ವ್ಯಾಜ ಪರಪುರುಷಾರ್ಥನಿರ್ವಾಹ ಕನುಂ, ಉಪಮಾತೀತನುಮಪ್ಪ ಜಿನೇಂದ್ರನುಂ ಎಲೆಭವ್ಯನೆ, ನಿನ್ನ ಪ್ರಶ್ನತ್ರಯಂ[3]ಗಳ್ಗೆ ಮೊದಲ್ ಪೇಳ್ವ (ಕೇಳ್ವ) ಮನುಷ್ಯಪರಿಣಾಮಮೆಂತೆಂದೊಡೆ :—

ಶ್ಲೋಕ || ಮೃತ್ಸಾರಿಣೀ ಮಹಿಷ ಹಂಸ ಶುಕ ಸ್ವಭಾವ—
ಮಾರ್ಜಾಲ(ರ)ಕಂಕ ಮಶ(ಸ)ಕಾಜ ಜಲೂಕಸಾಮ್ಯಾಃ ||
ಸಚ್ಛಿದ್ರಕುಂಭ ಪಶು ಸರ್ಪ ಶಿಲೋಪಮಾ[4]ನಾ—
ಸ್ತೇ ಶ್ರಾವಕಾ ಭುವಿ ಚತುರ್ದಶಧಾ ಭವಂತಿ || ೧ ||‡

ವ|| ಅದೆಂತೆಂದೊಡೆ—

ಚಂ|| ಉದಕದ ಸಂಗದಿಂದೆ ಮೃದುವಪ್ಪುದು ಮಣ್ ಬಿಸಲಿಂಗೆ ಬೆಟ್ಟಿತ |
ಪ್ಪುದು ನರರೊಳ್ ಕೆಲಂಬರದರಂದದೆ ಧಾರ್ಮಿಕರೊಳ್ ಸಮಂತು ಕೂ ||
ಡಿದೊಡತಿಧಾರ್ಮಿಕರ್ ಪಿರಿದುಪಾಪಿಗಳೊಳ್ ನೆಲಸಲ್ಕೆ ಪಾಪಸಂ |
ಪದರೆನಿಸಿರ್ಪರೀ ನೆಗಳ್ವ ದೋಷಮಿವರ್ಗಿನಿತುಂ ಸ್ವಭಾ[5]ವಜಂ || ೨ ||

(1) ಕುಳ್ಳಿತ್ತೊಪ್ಪುವ (ಕ) (2) ದೇವರ್ಕಳುಂ (3) ಗಳಿಗೆ (4) ನಾಂ (5) ವಿಕಂ

* ಇದು ಜೀವಸಂಬೋಧನೆಯ ಅಧ್ರುವಾನುಪ್ರೇಕ್ಷೆಯ ೨ ನೆಯ ಪದ್ಯದಲ್ಲಿ ಹೇಳಿರುವ ವಿಷಯವೇ ಆಗಿದೆ.

‡ ಈ ಪದ್ಯ ಮತ್ತು ಅರ್ಥ ಚಾವುಂಡರಾಯಪುರಾಣದಲ್ಲಿ ಬಂದಿದೆ.

ಉ|| ಸಾರಿಣಿ ಧಾರಿವಟ್ಟಲಿವು ಸಾರಸುವಸ್ತುವನೆಯ್ದೆ ಬಿಟ್ಟು ನಿ |
ಸ್ಸಾರಮನಾಂಪುವಾ ತೆಱದೆ ಮಾನವರೊಳ್ ಕೆಲಬರ್ ದಯಾನ್ವಿತಾ ||
ಚಾರದ ಧರ್ಮಮಂ ಪಿಡಿಯದೀ ಪಶುಯಾಗದ ಪಾಪಧರ್ಮಮಂ |
ಸಾರಮಿದೆಂದು ತಾಳ್ದು ಪರವರ್ಗಗಳ ದೋಷಗುಣಂ ಸ್ವಭಾ[1]ವಜಂ || ೩ ||

ಮ.ಸ್ರ|| ಕೊಳದೊಳ್ ನೀರುಣ್ಣದಡ್ಡಂಗೆಡೆದು ಕಲಕುತುಂ ಗಾತ್ರಮಂ ಪೊಯ್ದು ಜೀವಂ |
ಗಳನೊಂದಂ ನೀರುಣಲ್ ಪೊರ್ದಿಸದೆ ಮಲೆತು ಕೋಡಾಡಿಸುತ್ತಿರ್ಪ ಕೋಣಂ ||
ಗಳವೋಲ್‌ಮರ್ತ್ಯರ್ ಕೆಲರ್ ನಿರ್ಮಳ ಜಿನಮತದೊಳ್‌ಪುಟ್ಟಿ ಮತ್ತಂ ಕುಮಾರ್ಗಂ |
ಗಳ ಮಿಥ್ಯಾಶಾಸ್ತ್ರದಿಂ ಧಾರ್ಮಿಕರ ಮನಮಂನೆಂತುಂ ಕಲಂಕುತ್ತುಮಿರ್ಪರ್ || ೪ ||

ಕಂ|| ನೀರಂ ಪಾಲಂ ಬೆರಸಲ್ |
ನೀರಂ ಸಿತಪಕ್ಷನುೞಿದು ಪಾಲಂ ಕುಡಿವಂ ||
ತಾರಯ್ದೆ ಕೆಲರ್ ನರರಾ |
ಚಾರದ ಧರ್ಮಮನೆ ತಾಳ್ದ ಧರ್ಮಮನುೞಿವರ್ || ೫ ||

ಮ.ಸ್ರ|| ಗಿಳಿ ಯುಕ್ತಾಯು[2]ಕ್ತಮಂ ಮೇಣ್ ತಿಳಿಯಲಱಿವುದೇ ಮುನ್ನ ಮೆಂತೋದಿತಂತೆ |
ಗಳಪುತ್ತಿರ್ಕುಂ ಮನುಷ್ಯರ್ ಕೆಲಬರದಱವೋಲ್ ನಾಡೆಯುಂ ಸರ್ವಧರ್ಮಂ ||
ಗಳ ಸಾರಾಸಾರಮಂ ಬಲ್ಲರ ಬಗೆಯಱಿದಾರಯ್ದು ಕೇಳ್ವನ್ನರಲ್ಲಂ |
ತಿಳಿಯೊಳ್ ಮುಂ ಕೂರ್ತು ಕೆಯ್ಕೊಂಡುದಱೊಳೆ ಕಳೆವರ್ ಕಾಲಮಂ ದುರ್ವಿವೇಕರ್ || ೬ ||

ಮನೆಯೊಳ್ ಪಾಲುಂಡು ನಿಶ್ಚಿಂತದೆ ಬೆಳೆದು ಕರಂ ಸಾಧುವಾಗಿರ್ದು [3]ತಾವಿಂ |
ದೆನಸುಂ ಬೆಕ್ಕತ್ತಲಿತ್ತಲ್ ಮಿಡುಕದೆ ಪಲವುಂ ಪ್ರಾಣಿಯಂ ಕಾಣುತುಂ ನೆ ||
ಟ್ಟನೆ ನುಂಗುತ್ತಿರ್ಕುಮಂತೀ ನರರೊಳೆ ಕೆಲಬರ್ ಧರ್ಮಮಂ ಕೇಳುತುಂ ಸ |
ಜ್ಜನರೊಳ್ ಬೞ್ದಂ ಬೞಿಕ್ಕಂ ಬಿಡುವರೆ ಕೊಲೆಯುಂ ಕ್ರೂರಮುಂ ಕಷ್ಟಚಿತ್ತರ್ || ೭ ||

ಮ|| ತಲೆಯೊಳ್ ತೀವಿದ ಪೇನ ಸೀರ್ಮಲಮನೆಂತುಂ ಬಾರ್ಚಿ ತಾಂ ತಾಳ್ದಿಯಾ |
ತಲೆಯಂ ನಿರ್ಮಲಮಪ್ಪಿನಂ [4]ಪಣಿಗೆ ಮಾೞ್ಕುಂ ಮತ್ತಮಾ ಮಾೞ್ಕೆಯಿಂ ||
ಕೆಲಬರ್ ಮಾನವರಸ್ಮರಂ ವ್ರತಸುಶೀಲಾಚಾರಮಂ ಪೇೞ್ದು ನಿ |
ರ್ಮಲರಂ ಮಾಡುವರಾತ್ಮದೋಷದೞಿಮಂ ಮಾಡಲ್ಕದೇಂ ಬಲ್ಲರೇ || ೮ ||

ಚಂ|| ಎಱಗವು ಮಕ್ಷಿಕಂ ಕುಸುಮಧೂಪಜವಾದಿಸುಗಂಧವಸ್ತುವಿಂ |
ಗೆಱಗುವವೋಲಮೇಧ್ಯದ ಸುಗಂಧದ ಕೆಟ್ಟ ಪಡುಂಕೆಯತ್ತಲಾ ||
ತೆಱದೆ [5]ಸುಭವ್ಯರಂ ಋ(ರು)ಷಿಯರಂ ನೆಱೆ ಸಾರದೆ ಸಾರ್ವರೞ್ತಿ(ರ್ಥಿ)ಯಿಂ |
ಕುಱುಬನ(ರ)ಸಜ್ಜನ(ರ)ಂ ಖಲರನನ್ಯವಧೂರತರಂ ಕೆಲರ್ ನರರ್ || ೯ ||

---

(1) ವಿಕಂ (ಕ) (2) ಕ್ತಿಯಂ (ಕ) (3) ದಾವಿಂ (4) ಸಿವಿಗೆ (ಸಂಸ್ಕೃತ ಶ್ಲೋಕದಲ್ಲಿ ಕಂಕತಶಬ್ದಕ್ಕೆ ಕಂಕಶಬ್ದದಪ್ರಯೋಗವೇ ಇರುವುದು–ಕಂಕ = ಪಣಿಗೆ–ಬಾಚಣಿಗೆ) (5) ಸುಖಭವ್ಯರಂ (ಕ)

ಮ. ಸ್ರ|| ನಿಜದಿಂದಂ ಪಿಂಡುಗೂಡಿರ್ದೆಲೆತೃಣಗಣಮಂ ಮೇದು ಸತ್ಪಾನಮಂ ಪೀ |
ರ್ದಜಪೋತಂ ಲೀಲೆಯಿಂದಂ ನಲಿವವೊಲರೆಬರ್ ಮಾನವರ್ ಕೂರ್ಮೆಯಿಂದಂ ||
ಸುಜನವ್ರಾತಂಗಳಂ ಧಾರ್ಮಿಕರನಧಿಕರಂ ಕೂಡಿ ಸದ್ಧರ್ಮಮಂ ಕೇ |
ಳ್ದು ಜಸಂಬೆತ್ತಿರ್ದ ಧರ್ಮಾಮೃತದೊಳೆ ತಣಿವರ್ ಸಂತತಂ ಸ್ವೇಚ್ಛೆಯಿಂದಂ ||೧೦||

ಚಂ|| ಪಿಡಿಯದು ದೋಷಮಿಲ್ಲದತಿನಿರ್ಮಲಸುಪ್ಪೆಡೆಯಂ ಜಲೂಕನೋ |
ಗಡಿಸದೆ ಬಾವು ತದ್ಧ್ರು ತುಱುಯುಳ್ಳ ತ್ರಿದೋಷದ ತಾಣಮಂ ಕರಂ ||
ಪಿಡಿವುದು ಮರ್ತ್ಯರೊಳ್ ಕೆಲಬರಾತೆಱ[1]ದಿಂ ದಯೆ ದಾನಧರ್ಮಮಂ |
ಪಿಡಿಯದೆ ಸಂತತಂ ಪಿಡಿವರಪ್ರತಮಂ ಪುಸಿಯಂ ವಿಕರ್ಮಮಂ || ೧೧ ||

ಕಂ|| [2]ಒಡೆದ ಕೊಡದೊ(ನೊ)ಳಗೆ ನೀರ್ ಪೊ |
ಯ್ದೊಡದೆಂತುಂ ನಿಲ್ಲದಂತೆ ನರರೊಳ್ ಕೆಲಬರ್ ||
ಪಡೆವಾರ್ತಿಂ ನಿಲ್ವವೆ ತಾ |
ಳ್ದೊಡಮೇಂ ವ್ರತಗುಣಸುಶೀಲ ಚಾರುಚರಿತ್ರಂ || ೧೨ ||

ಮ. ಸ್ರ|| ಪಸುಪಿಂಡಿಂ ಮುಂತೆ ನೀರುಳ್ಳೆಡೆಗೆ ಪರಿದು ನೀರುಂಡು ಬಂದೇಱುಯೊಳ್ ನಿಂ |
ದು ಸಮಂ[3]ತೆಯ್ತರ್ಪ ಗೋವಂ ಕರೆದುದಕ(ಮು)ಮಂ ತೋಱುವಂತುತ್ತಮರ್ ಸಂ ||
ತಸದಿಂದಾಚಾರ್ಯರಿಂದಾಗಮಮನುನೊಲವಿನಿಂ ಕೇಳ್ದು ತಾಮೋದಿ(ಡಿ)ಯುಂ ಮಿ |
ತ್ರಸಮೂಹಕ್ಕೊಲ್ದು ಧರ್ಮಾಮೃತದೊಳೆ ತಣಿವಂ ಮಾಳ್ಪರಾನಂದದಿಂದಂ ||೧೩||

ಕಂ|| ಅನವರತಂ ಫಣಿ ಪಾಲಂ |
[4]ನೆಱೆ ಕುಡಿದುಂ ಬಿಡದು ವಿಷಮನಾ ತೆಱದೆ ಕೆಲರ್ ||
ಮನುಜರ್ ಭವ್ಯರೊಳಂ ಋಷಿ |
ಜನದೊಳ್ ಕಲ್ತೋದಿ ಕುಟಿಲವೃತ್ತಿಯನುೞಿಯರ್ || ೧೪ ||

ಪಲಕಾಲಂ ನೀರೊಳಗಿರೆ |
ಶಿಲೆ ಮೆಲ್ಲಿತ್ತಾಗ[5]ಲರಿದದಾ ತೆಱದೆ ನರರ್ ||
ಕೆಲಬರ್ ಸುದೃಷ್ಟಿಗಳೊಳಿರೆ |
ಬಳೆದುಂ ಪಾಪಮನೆ ತೊಱೆಯರೊ[6]ಳ್ಪಂ ಮೆಱೆಯರ್ || ೧೫ ||

ಚಿತ್ತರಿಪುದಿಂತು ಮನುಜರ |
ಚಿತ್ತಂ ಪದಿನಾಲ್ಕುಭೇದಮದು ನಾಲ್ಕುತೆಱಂ ||
ಬೆತ್ತಿರ್ಪುದೆಂತೆನಲ್ ಕೇ |
ಳುತ್ತಮ ಮಧ್ಯಮಕನಿಷ್ಠಮಧಿಕಕನಿಷ್ಠಂ || ೧೬ ||

---

(1) ದಿಂದಮೆ (ಕ) (2) ಪೊಡೆದ (ವಡೆದ) (3) ತೆಯಿತರ್ಪ (ಕ) (4) ಪ್ರಾಸುನಕಾರವಿರಬೇಕು—ಎರಡೂ ಪ್ರತಿಗಳಲ್ಲಿಯೂ ಒಂದೇ ಪಾಠವಿದೆ. ಫಣಿ ತಾಂ ಪಾಲನೆ ಕುಡಿದುಂ—ಎಂದು ತಿದ್ದಿಕೊಳ್ಳಬಹುದು. (5) ಲರಿಯದಾ (ಕ) (6) ಳ್ಪಂ

ವ|| ಎಂಬೀ ಪದಿನಾಲ್ಕುಱಿಳಾಡಿನ ಹಂಸೆಯ ಪಸುವಿನನ್ನರುತ್ತಮರ್, ಒಡೆದ ಕೊಡದ, ಶುಕದ, ಕಲ್ಲ, ಮಣ್ಣಿಂದದವರ್ ಮಧ್ಯಮರ್. ಕೋಣನ, ನೊಱ(ಣ)ವಿನ, ಸಾರಣಿಯನ್ನರ್ ಕನಿಷ್ಠರ್. ಉರಗನ, ಬೆಕ್ಕಿನ, ಹಣಿಗೆಯ, ಜಿಗುಟಿ³ಯನ್ನರ್ ಅಧಿಕಕನಿಷ್ಠರೆಂದು ನಿರೂಪಿಸೆ ಸುರಸಮಿತಿಯೊಡನೆ ಸುರೇಂದ್ರಂ ಕೇಳ್ದಾನಂದಂಬೆತ್ತು ಮುಕುಳಿತಕರಕಮಲನಾಗಿ ಸ್ವಾಮಿ, ಸಾಗಾರಾನಗಾರಮೆಂಬೀ ಧರ್ಮದ್ವಯಮುಮಂ ನಿಮ್ಮಡಿ, ಬೆಸ[1]ಸುವುದೆಂಬುದುಮಂ ನಿರೂಪಿಸಿದರದೆಂತೆನೆ—

ವ|| ಸಾಗಾರಧರ್ಮಮುಮಂ ದಾನಂ, ಪೂಜೆ, ಶೀಲಂ, ಉಪವಾಸಮೆಂದು ನಾಲ್ಕುತೆಱನಕ್ಕುಂ—ಮತ್ತಮಣುವ್ರತಮಯ್ದುತೆಱಂ—ಗುಣವ್ರತಂಮೂಱುವಿಧಂ. ಶಿಕ್ಷಾವ್ರತಂ ನಾಲ್ಕುತೆಱಂ—

ಉ|| ದೇವತೆಗೆಂದು ಮೋಣತಿಥಿಗೆಂದು *ಪಿತೃಗಳ ತುಷ್ಟಿಗೆಂದು ಮಂ |
ತ್ರಾವಳಿ ಯಂತ್ರತಂತ್ರ ರಸಸಿದ್ಧಿಗೆ ಬೇಳ್ವಿಗೆ ವಶ್ಯಕೆಂಮು ತಾ ||
ನೋವದಭೀತಿಯಿಂ ಮುಳಿಸಿ[2]ನಿಂ ಪೆಱರೋದಿಸಿದೋಜೆಯಿಂದೆ ಜೀ |
ವಾವಳಿಯುಂ ಕೊಲಲ್ ಬಯಸದಿರ್ಪುದಹಿಂಸೆಯೆನಿಪ್ಪಣುವ್ರತಂ || ೧೭ ||

ಕಂ|| ಮದದಿಂದು[3]ಕ್ಕೆವದಿಂ ಗ |
ರ್ವದಿನಳಿಪಿಂ ಭಯದಿನೇವದಿಂ ಮುಳಿಸಿಂ ಲೋ ||
ಭದಿನಿನಿತುಪುಸಿಯಬುನುಂ ನುಡಿ |
ಯದುದೆರಡನೆಯ[4]ಋತಮೆಂಬಣುವ್ರತಮಕ್ಕುಂ || ೧೮ ||

ಬಟ್ಟೆಯೊಳೂರೊಳ್ ಮನೆಯೊಳ್ |
ಕೆಟ್ಟಿಡೆ ಬಯ್ತಿಟ್ಟೊಡನ್ಯರರ್ಥಮನಳಿಪಿಂ ||
ಮುಟ್ಟದೊಡಸ್ತೇಯಮುನುದೆ |
ನೆಟ್ಟನೆ ಮೂಱನೆಯಣುವ್ರತಂ ತಿಳಿವುದಿದಂ || ೧೯ ||

ಪರವನಿತೆಯೊಳ್ ಬರೆ ಪರಿ |
ಹರಿಸಿ ಕುಲಾಂಗನೆಯೊಳೇಕಪತ್ನೀವ್ರತಮುಂ ||
ಧರಿಯಿಪುದು ಶೌಚಗುಣಮಿದು |
ಪರಿಕಿಸೆ ನಾಲ್ಕನೆ[5]ಯಣುವ್ರತಂ ತಾನೆನಿಕುಂ || ೨೦ ||

ಇನಿತು ಪಸುವಿನಿತು ಭಾಂಡಮು |
ಮಿನಿತಾಲಯಮಿನಿತು ಕುಪ್ಯಮಿನಿಬರ್ ತೊೞ್ತಿರ್ ||
ಧನಮಿನಿತು ಶಯನಮಿನಿತಾ |
ಸನಮಿನಿತಿನಿತಖಿಳಧಾನ್ಯಮಿನಿತುಂ ಕ್ಷೇತ್ರಂ || ೨೧ ||

---

(1) ಸೆಂಬು (2) ನೀಂ (3) ದುರ್ಕೆವ (4) ಯನೃತ (5) ಯಗುಣ

*ಪಿತೃಗಳ— ಇಲ್ಲಿ "ತೃ" ಗುರುವಾಗಿರಬೇಕು. ಪಿತರ್ಕಳ ಎಂದು ಕವಿಯ ಭಾವವಿರಬಹುದು.

ಕಂ|| ಎಂಬೀ ಪತ್ತುಂ ಪವಣಿಸಿ|
ಕೊಂಬುದು ಪರಿಮಿತಪರಿಗ್ರಹಂ ಪೆಸರಿಂದಂ ||
ನೀಂ ಬಗೆದು ನೋಡು ಸಕಲಗು |
ಣಾಂಬುಧಿಯೈದನೆಯಣುವ್ರತಂ ತಾನೆನಿಕುಂ || ೨೨ ||

ವ|| ಮತ್ತಂ ಗುಣವ್ರತಮೆಂತೆಂದೊಡೆ—

ಕಂ|| ಪದೆಪಿಂದಮಿನಿತು ಗಾವುದ |
ಮಿದಱಿಂದಂ ಪೋಗೆನಾವದೆಸೆಗಂ ನಾನೆಂ ||
ಬುದು [1] ದಿಗ್ವಿರತಿಯುಮೆಂಬುದು |
ಮೊದಲ ಗುಣವ್ರತಮದಂ ವಿಚಾರಿಸುಗೆ ಬುಧಂ || ೨೩ ||

ದೇಸಂಗಳೊಳಗೆ ಪುಗೆನೀ |
ದೇಸಮನಾನೆಂದು ನಾಡೆ ಕೆಯ್ಕೊಳ್ವುದು ತಾಂ ||
[2] ದೇಸವಿರತಿಯೆಂದೆಂಬುದು |
ಭಾಸುರದೆರಡನೆಯ ಗುಣವ್ರತಂ ತಾನೆನಿಕುಂ || ೨೪ ||

ಚಂ|| ಬಲೆ ಬಡಿ ನೇಣ್ ವಿಷಂ ಸುರಿಗೆ ಸೂ(ನಿ)ಲಿಗೆ [3] ಕತ್ತಿಗೆ ಬಿಲ್ಲು ಕಿರ್ಚು ಸಂ |
ಕಲೆ ಯಸಿ ಗೋರೆ ಹಾರೆ ಕು(ಗು)ಬು(ಳು)ಗುದ್ದಲಿಗಳ್ ಮೊದಲಾಗಿ ಜೀವಸಂ ||
ಕುಲಮನೆ ಕೊ[4]ಲ್ವುದಂ ಪೆಱರ್ಗೆ ತಾನೊಸೆದೀಯೆನೆನಿಪ್ಪುದೇ ಧರಾ |
ತಲದೊಳನರ್ಥದಂ[5]ಡವಿರತಿವ್ರತಮಂತ್ಯದ ಸದ್ಗುಣವ್ರತಂ || ೨೫ ||

ವ|| ಇನ್ನು ಶಿಕ್ಷಾವ್ರತಮೆಂತೆಂದೊಡೆ—

ಮ. ಸ್ರ|| ಕ್ರಮದಿಂ ನಾಲ್ಕುಂ ನಮಸ್ಕಾರದೊಳತುಳಷಡಾವಶ್ಯದಿಂದು ತ್ರಿಸಂಧ್ಯಾ |
ಸಮಯಂ ನಾನಾಸ್ತವಸ್ತೋತ್ರಮನತಿಮುದದಿಂ ಪೇೞ್ದು ಮಿಕ್ಕಾರ್ತಮಂ ರೌ ||
ದ್ರಮನೆಂತುಂ ಬಿಟ್ಟು ಭಾವಂ ಸ(ಶ)ಮಶುಭಯುಗದೊಳ್ ಮೂಡೆ(ಡಿ)ಸತ್ಯಾದಿಶೀಲೋ
ತ್ತಮಮೇ ಸಾಮಯ್ಕಮೆಂಬೀ ಪ್ರಥಮದೆಸೆನ ಶಿಕ್ಷಾವ್ರತಂ ತಾನೆನಿಕ್ಕುಂ || ೨೬ ||

ಕಂ|| ತಿಂಗಳ ನಾಲ್ಕುಂ ಪರ್ವದಿ |
ನಂಗಳೊಳಂ ಕ್ರಿಯೆ ಸಮನ್ವಿತಂ ಬಂದಿಸಿ ನೀ ||
ಸಂಗದುಪಾಸಂ ಪ್ರೋಸದ |
ಮೆಂಗುಮದೆರಡನೆಯ ಚಾರುಶಿಕ್ಷಾವ್ರತಮುಂ || ೨೭ ||

---

(1) ದಿಗ್ವ್ರತಿಯೆಂದೆಂಬುದು (ಕ) ದಿಙ್ನಿವೃತ್ತಿಯೆಂಬುದು (ಚ) (2) ದೇಶನಿವೃತ್ತಿಯೆನಿಪ್ಪುದು (ಚ) ದೇಶನಿವೃತಿಯೆನಿಪ್ಪುದು (ದೆಶಿ_ದೇಶಿ) (ಕ) (3) ಕತ್ತಿಯು (ಚ) (4) ಲ್ವುವಂ (ಚ) (5) ದಂಡದ ನಿವೃತ್ತಿಯದಂತ್ಯದ (ಚ)

ಕಂ|| ಗುಣಯುತಮುನಿಪರನೇೞುಂ |
ಗುಣದಿನಿದಿರ್ಗೊಂಡು ನಿಲಿಸಿದಿಂ ಬೞಿಕಂ ತಾ ||
ನುಣಲತಿಥಿಸಂವಿಭಾಗಮ |
ದೆಣಿಪೊಡೆ ಮೂಱನೆಯದೞಿಗೆ ಶಿಕ್ಷಾವ್ರತಮುಂ(ಮುಂ) || ೨೮ ||

ಸಕಲಪರಿಗ್ರಹಮಂ ತೊಱೆ |
ದಕಲಂಕವ್ರತಮನಾಂತು ತನುವಂ ಬಿಡೆ [1] ಭಾ ||
ವುಕಸಲ್ಲೇಖನಮೆಂದಱ |
ದು ಕೊಳ್ಗೆ ನಾಲ್ಕನೆಯ ಲಸಿತಶಿಕ್ಷಾವ್ರತಮುಂ || ೨೯ ||

ವ|| ಎಂದು ಪೇೞ್ದಿಪಟ್ಟಣುವ್ರತ, ಗುಣವ್ರತ, ಶಿಕ್ಷಾವ್ರತಂಗಳೆಂಬ ಪನ್ನೆರಡುಂವ್ರತಂಗಳಂ ಹೋೞಸ[ದ]ವ್ರತಮಂ ನಿರವದ್ಯಮಾಗೆ ನಡೆಸಲೆಂತಪ್ಪರೆನೆ—

ಮ|| ವಿಳಸದ್ದಾನಮನುನ್ನತಾಚರಣಮುಂ ಸಾಹಿತ್ಯಮುಂ ಸತ್ಯದ |
ಗ್ಗಳಮುಂ ಶೌಚಗುಣಂಗಳಂ ವಿನಯಮುಂ ಪಾಂಡಿತ್ಯಮುಂ ಮಾನಮುಂ ||
ಕುಲಮುಂ ನಿರ್ಮಳಕೀರ್ತಿಯುಂ ಪರಹಿತವ್ಯಾಪಾರಮುಂ ಧರ್ಮದಿಂ |
ದೊಲವಿಂ ನೀಂ ತಿಳಿ ಧಾತ್ರಿಯಂ ಬೆಳಗುಗುಂ ಸಮ್ಯಕ್ತ್ವರತ್ನಾಕರಂ || ೩೦ ||

ವ|| ಮತ್ತಮಾ ಅನಗಾರಧರ್ಮಮೆಂತೆನೆ—

(ಪ್ರಾಕೃತಂ) ವದ ಸಮಿದಿ [ಗುತ್ತಿ] ವೋದಮ್ಮ ಣಪೆಹೊ ಪರಿಸಹಜಯೊ ಯ |
ಚಾರಿಂತಂ ಬಹು ಭೇಯೋ ಣಾದಂಬಾ ಭಾವಸಂವದ(ರ)ವಿಶೇಸಾ ? || ೩೧ ||

ಟೀಕು|| ೧. ವದ(ವ್ರತ)=ಅಣುವ್ರತ ಗುಣವ್ರತ ಶಿಕ್ಷಾವ್ರತ ಮೆಂಬಿವಂ ಭೇದಿಸಲ್ ಪನ್ನಿರ್ತೆಱನಪ್ಪ (ದೇಶ) ವ್ರತಮುಂ—ಷಡ್ಜೀವನಿಕಾಯಂಗಳ್ಗಾವದೆಸೆಯಿಂ ಪೀಡೆಯಾಗದೆಂಬನು [2] ಕಂಪಾರೂಪ ಹಿಂಸಾವಿರತಿಯುಂ, ಪರಪ್ರಾಣಿಗಳ್ಗೆ ಬಾಧಾಹೇತುವಪ್ಪ ಸತ್ಯವಚನಮಂ ಪರಿಹರಿಸಿ ಸಮಾಚಾರೋಕ್ತ ಕ್ರಮೋಕ್ತಿ ರೂಪಾನೃತವಿರತಿಯುಂ, ಗ್ರಾಮಾದಿಗಳೊಳ್ ನಿಕ್ಷಿಪ್ತಪತಿತ ವಿಸ್ಮರಣಾದಿಯಿಂ ಪೆಱರೀಯದೆ ದೊರೆಕೊಂಡ ವಸ್ತುವಿನ ಪರಿಹರಣರೂಪಾಸ್ತೇಯವಿರತಿಯುಂ, ದೇವಮಾನವತಿರ್ಯಕ್ ಸ್ತ್ರೀಯರುಮನವರ್ಗಳ ಸಂಬಂಧಿಯಪ್ಪ ಚಿತ್ರ(ತ್ರಾ)ಕಾಷ್ಠಲೇಪ್ಯ (ಲೆಪ್ಪ) ಶಿಲಾಮಯಮಪ್ಪ ಪ್ರತಿಬಿಂಬಂಗಳುಮಂ ಕಂಡು ವಿಭಾವಕ್ಕೆ ಸಲ್ಲದವರಲ್ಲಿ ತಾಯುಂತಂಗೆ ಮಕ್ಕಳುಮೆಂಬ ಭಾವನಾರೂಪಾಬ್ರಹ್ಮವಿರತಿಯುಂ, ಯಥಾ ಯೋಗ್ಯವಿವಕ್ಷಾವಶದಿಂದನೇಕತೆಱನಪ್ಪ ಬಾಹ್ಯಪರಿಗ್ರಹಮುಂ, ಮಿಥ್ಯಾತ್ವಾದಿ ವಿಕಲ್ಪದಿಂ ಬಹುವಿಧಮಪ್ಪಾಭ್ಯಂತರ ಪರಿಗ್ರಹಮು ಮೆಂಬಿವಱ ನಿವೃತ್ತಿರೂಪಪರಿಗ್ರಹವಿರತಿಯುಂ, ಎಂದಿಂತಯ್ದು ತೆಱನಪ್ಪ ಮಹಾವ್ರತಮುಂ, ೨. ಸಮಿದಿ(ಸಮಿತಿ)=ಆತ್ಮಗುರುದೇವ ಕಾರ್ಯಕಾರಣಮಾಗಿ ಪ್ರಾಸುಕಮಪ್ಪ ಬಟ್ಟೆಯೊಳ್ ಪಗಲ್‌ನೊಗದ ಪ್ರಮಾಣದನಿತಂನೋಡಿ ದಯೆಯಿಂ ಪ್ರಾಣಿಗಳಂ ಪರಿಹರಿಸಿ ನಡೆವುದೆಂಬೀರ್ಯಾ

(1) ಭಾವಿಸೆಸಲ್ಲೆಖ (ಪ್ರಾಸದುಪ್ಪ) (2) ಕೃಪಾ (ಚ) ಬನಕೃಪಾ (ಕ)

ಸಮಿತಿಯುಂ, ಪರರ ಗುಣಮಂ ಕಿಡಿಸುವ ಅಸೂಯೆ ಪಿಸುಣ್ ಮೊದಲಾಗೆ ಪೆಱರ್ಗುಪರೋಧಮಂ ಮಾಳ್ಪ (ರ್ಪ) ನುಡಿಯುಮಂ, ಸರ್ವಜ್ಞಪ್ರಣೀತಮಪ್ಪಾಪ್ತಾಗಮಪದಾರ್ಥಂಗಳನೊಳ್ಳಿತ್ತಾಗಿ ಪೇಲ್ವಲ್ಲಿಯಂತಲ್ಲದಿಂತೆಂಬ ಬಕ್ಕುಡಿಯುಮಂ, ಪರಿಹರಿಸಿ ತನಗಂ ಪೆಱರ್ಗಂ ಹಿತಮಾಗಿಯಳವಿಯೊಳ್ ಕೂಡಿದಾಗಮೋ[1]ಕ್ತಯತಿ ಭಾಷಿತಂಗಳನೆ ನುಡಿವುದೆಂಬ ಭಾಷಾಸಮಿತಿಯುಂ, ನಾಲ್ವತ್ತಾಱು ದೋಷಂಗಳಂ (ಪರಿಹರಿಸಿ) ರಹರಹಪರಿಣಾಮದಿಂ ಯೋಗ್ಯದಾತಾರರಿಂ ವಿಧಿಪೂರ್ವಕಮಾಗಿ ಕುಡಲ್ಪಟ್ಟ ಶುದ್ಧಾಹಾರಮಂ ಸರಸವಿರಸವೆನ್ನದೆ ಹರ್ಷವಿಷಾದಮಂ ಬಿಟ್ಟು ಸಮರಸಭಾವದಿಂ[2]ದುಣ್ಬುದೆಂಬ ಏಷಣಾಸಮಿತಿಯುಂ, ಜ್ಞಾನಸಂಯಮಶೌಚೋಪಕರಣಂ ಮೊದಲಾದ ವಸ್ತುವನವಱರ್ಪೆಡೆಯುಮಂ ಬೆಳಗಿನೊಳ್ ನೋಡಿ ಸೂಕ್ಷ್ಮಪ್ರಾಣಿಗಳ್ಗಂ ಪೀಡೆಯಾಗದಂತಪ್ಪ ಮೃದುಪ್ರತಿಲೇಖದಿಂ ಪ್ರತಿಲೇಖಿಸಿ ಪ್ರಯತ್ನದಿಂ ಮಡಗುವುದು ಕೊಳ್ವುದೆಂಬಾದಾನನಿಕ್ಷೇಪಣಾಸಮಿತಿಯುಂ, ಪರರ್ಗುಪರೋಧಮಿಲ್ಲದೇಕಾಂತಮಪ್ಪ ಪ್ರಾಣಿಗಳಿಲ್ಲದ ತೆಱಪು ನೆಲದೊಳ್ ಕಾಯಮಲಂಮೊದಲಾದುವಂ ಪಿಂಗಿಸುವುದೆಂಬ ವ್ಯುತ್ಸರ್ಗಸಮಿತಿಯುಂ ಎಂದಿಂತಯ್ದು ತೆಱನಪ್ಪಸಮಿತಿಯುಂ, ೩. ಗುಂತಿ (ಗುತ್ತಿ) ಅಪ್ರಶಸ್ತದಲ್ಲಿಗೆ ಪರಿವ ಮನಮಂ ನಿಯಮಿಸಿಯವಂ ಕರ್ಮಕ್ಷಯಕ್ಕೆ ಕಾರಣಮಪ್ಪರ್ಹದಾದಿ ಪರಮೇಷ್ಠಿಗಳ ಗುಣಭಾವನೆಯೊಳಂ, ನಿತ್ಯನಿರಂಜನಚಿದಾನಂದೈಕ ರೂಪನಿಜಾತ್ಮ ಗುಣಭಾವನೆಯೊಳಂ, ನಿಲಿಸುವುದೆಂಬ ಮನೋಗುಪ್ತಿಯುಂ, ವಿಕಥಾದ್ಯಪ್ರಶಸ್ತಕಥನಮಂ ತೊಱೆವುದು ಮೋಣ್ ಮಸಂಗೊಳ್ವುದು ಎಂಬ ವಚನಗುಪ್ತಿಯುಂ, ನಡೆವ ಕುಳ್ಳಿರ್ಪ ಪಟ್ಟಿರ್ಪೆಡೆಯೊಳಗೆ ಮೆಯ್ ಕೆಯ್‌ಕಾಲ್ಗಳಂ ತೂಗುವ ತೊನೆವ ಬೀಸುವ [3]ಪರಿಯೆ ನೀಡುವುದು ಮೊದಲಾದ ಪರಿಸ್ಪಂದಾತ್ಮಕಮಪ್ಪ ಶರೀರವ್ಯಾಪಾರಮಂ ಪರಿಹರಿಸುವುದೆಂಬ ಕಾಯಗುಪ್ತಿಯುಂ ಎಂದಿಂತು ಮೂಱುಂತೆಱನಪ್ಪ ಗುಪ್ತಿಯುಂ–೪ವೋಧಮ್ಮ (ಧರ್ಮಂ) ಕ್ರೂರರುಮಜ್ಞಾನಿಗಳುಮಪ್ಪ ದುರ್ಜನರ ಬಯ್ಗುಳುಂ ಪೊಯ್ಗುಳುಂ ಮೊದಲಾದಾತ್ಮಪೀಡೆಯಂ–

ಸ್ವಧರ್ಮಪೀಡಾಮವಿಚಿಂತ್ಯ ಯೋಽಯಂ—ಮುತ್ಪಾಪಶುದ್ಧ್ಯರ್ಥಮಿಹ ಪ್ರವೃತ್ತಃ ||
ನಚೇತ್ ಕ್ಷಮಾಮಪ್ಯಹಮತ್ರ ಕುರ್ಯಾತ್[ಮನಃ]ಕೃತಘ್ನೋ ಏವದ ಕೇದೃಶೋಽನ್ಯಾ
|| ೩೨ ||

ಎಂಬೀಪ್ರಕೃಷ್ಟಭಾವನೆಯಿಂ ಸೈರಿಸುವುದೆಂಬುತ್ತಮಕ್ಷಮೆಯುಂ, ವಿಜ್ಞಾನೈಶ್ವರ್ಯಜ್ಞಾನಕುಲಬಲ ತಪೋರೂಪಜಾತಿಯೆಂದಿವಱೊಳಪ್ಪ ಮದಮಂ ಪಿಂಗಿಸಿ ಸಹಜವೃತ್ತಿಯಿಂ ನಿರಹಂಕಾರಮಾಗಿ ನೆಗಲ್ವುದೆಂಬುತ್ತಮಮಾರ್ದವಮುಂ. ಮನೋವಾಕ್ಕಾಯಂಗಳೊಳಪ್ಪ ಕುಟಿಲತೆಯಂ ಪತ್ತುವಿಟ್ಟು "ಋಜುಹೃದಯಮಧಿವಸನ್ತಿ ಗುಣಾಃ" ಎಂದು ಋಜುತ್ವದೊಳ್ ಕೂಡಿ ನೆಗಲ್ವುದೆಂಬುತ್ತಮಾರ್ಜವಮುಂ, ತನಗೆ ಪ್ರಾಪ್ತಿಯಾದಾ ಶರೀರಂ ಮೊದಲಾದ ಬಾಹ್ಯವಸ್ತುಗಳೊಳ್ ಲೋಭಮಿಲ್ಲಮೆಂಬುತ್ತಮಶೌಚಮುಂ, ರತ್ನತ್ರಯವಂತರಪ್ಪ ಗುಣಾಧಿಕರೊಳ್ ಸದ್ವಿನಯಯುಕ್ತ ಸಂಯಮ ಸತ್ಯವಚನಂ ನುಡಿವುದೆಂಬುತ್ತಮಸತ್ಯಮುಂ, ಪೃಥಿವ್ಯಪ್ ತೇಜೋವಾಯುವನಸ್ಪತಿತ್ರಸಕಾಯಂಗಳೆಂಬೀ ಷಡ್ಜೀವನಿಕಾಯಂಗಳೊಳಪ್ಪ ಬಾಧೆಯಂ ಮನೋವಾಕ್ಕಾಯದಿಂ ಮಾಡದುದುಂ, ಮಾಡಿಸದುದುಂ, ಮಾಡುವರನೊಡಂಬಡದುದಂ, ಸ್ಪರ್ಶರಸನಘ್ರಾಣ ಚಕ್ಷುಶ್ಶ್ರೋತ್ರಂಗಳೆಂಬಯ್ದಿಂದ್ರಿಯಂಗಳಿಷ್ಟಾನಿಷ್ಟ ವಿಷಯಂಗಳೊಳ್ ರಾಗದ್ವೇಷಂಗಳಂ ಮಾಡದುದುಂ, ದೃಷ್ಟಶ್ರುತಾನುಭೂತಂಗಳಪ್ಪ ಸ್ರಕ್ಚಂದನವನಿತಾದಿ ವಸ್ತುಗಳೊಳ್(ಮ)ನಮಂ ಪರಿಯಲೀಯದುದುಂ,

---

(1) ಕ್ರಿಯತಿಭಾಷಿಗಳನೆ (ಕ) (2) ದುಂಬು (ಕ) (3) ಪರಿಪಿ (ಚ)

ವ್ಯವಹಾರನಿಶ್ಚಯ ಮೋಕ್ಷಮಾರ್ಗದೊಳ್ ನಿಲಿಸುವುದುಮೆಂದಿಂತು ಪ್ರಾಣೇಂದ್ರಿಯಸಂಬಂಧದಿಂ ದಪ್ಪ ಪನ್ನೆರಡುಂತೆರದ ಸಂಯಮಮುಂ, ಅನಶನಾದಿದ್ವಾದಶವಿಧಮಪ್ಪ ನೆಗೞ್ತೆಗಳೊಳವರವರ ಪೇೞ್ಕೆಯ ಕ್ರಮದಿಂ ಶಕ್ತಿಯನತಿಕ್ರಮಿಸದೆ ಪರಮೋತ್ಸಾದಿಂ ನೆಗೞ್ವುದೆಂಬುತ್ತಮತಪಮುಂ, ಶರೀರಾದಿ ಬಾಹ್ಯಪರಿಗ್ರಹಂಗಳುಮುಂ, ರಾಗಾದಿಸಕಳ (ಅಂತರಪರಿಗ್ರಹಮುಮಂ) ವಿಭಾವಂಗ ಳುಮಂ ನಿರವಶೇಷಂ ತೊಱೆವುದೆಂಬುತ್ತಮತ್ಯಾಗಮುಂ, (ಇಂತು) ತೊಱೆದಪರಿಗ್ರಹಂಗ ಳೊಳ್ ಮತ್ತೆ ಮನಮೆಳಸದನಾದ್ಯನಿಧನಮಪ್ಪ ನಿಜಶುದ್ಧಾತ್ಮಸ್ವರೂಪದೊಳ್ ಮನಮಂ ನಿಲಿಸು ವುದೆಂಬುತ್ತಮಾಕಿಂಚಿನ್ಯಮುಂ, ಪೆಱಗೆ ಪೇೞ್ದ ನಾಲ್ಕುಂತೆಱದ ಸ್ತ್ರೀಯರೊಳ್ ಮನೋವಚ ಕಾಯಂಗಳಿಂದೆ ಬ್ರಹ್ಮಮಂ ಮಾಡದುದುಂ, ಮಾಡಿಸದುದುಂ, ಮಾಡುವರೊ(ಲೊ)ಳೊಡಂಬಡ ದುದುಮೆಂಬುತ್ತಮ ಬ್ರಹ್ಮಚರ್ಯಮುಂ ಎಂದಿಂತು ದಶಲಾಕ್ಷಣಿಕಮಪ್ಪ ಧರ್ಮಮುಂ, ದ್ವಾದಶಾ ನುಪ್ರೇಕ್ಷಾಭಾವನೆಯುಂ, ದ್ವಾವಿಶಂತಿಪರೀಷಹಾನ್ವಯವಿಜಯಮುಂ, ಮೊದಲಾದನಗಾರ ಧರ್ಮ ಮುಮಂ ನಿರೂಪಿಸೆ ಕೇಳ್ದು, ತಿರ್ಯಙ್ಮನುಷ್ಯದೇವ ಸಮೂಹಮೆಲ್ಲಂ ನಲಿಯೆ ದೇವೇಂದ್ರಂ ನಲಿದು ನರ್ತಿಸಲೀಪ್ರಕಾರದಿಂ ಅಂಗವಂಗಕಳಿಂಗ ಕಾಶ್ಮೀರ ಪ್ರಭೃತಿ ಸಮಸ್ತದೇಶಂಗಳೊಳಿರ್ಪ ಭವ್ಯಸಮೂಹಮಂ. ಸದ್ಧರ್ಮಾಮೃತ (ವರ್ಷ) ದಿಂ (ತಣಿಪಿ) ಸಂತೃಪ್ತಿಪಡಿಸುತ್ತುಂ ಪಲಕಾ ಲಂಬರಂ ವಿಹಾರಿಸಿ ಬೞಿಯಮಘಾತಿಕರ್ಮಂಗಳಂ [1] ನಿರ್ಮೂಲನಂಗೆಯ್ದನಂತಸುಖದೊಳ್ ಪ್ರಾಪ್ತರಾದರ್.

ಎಲೆ ಜೀವಗಳಿರಾ ! ಅಂತಪ್ಪಮಹಾನುಭಾವರಪ್ಪ ಚಕ್ರವರ್ತ್ಯಾದಿ ಮಹಾಮಂಡಳಿಕರುಂ ಪಿರಿದಪ್ಪ ವೈಭವಮಂ ಬಿಸುಟು ಸದ್ಧರ್ಮಮಂ ಶರಣ್ಬೊಕ್ಕರ್, ನೀಮುಂ ಸದ್ಧರ್ಮಮನಪ್ಪು ಗೆಯ್ದೊಡನ್ನರಪ್ಪಿರದೞಿಂ ಧರ್ಮದೊಳ್ ಪರೀಕ್ಷಿಸಿ ಧರ್ಮಮಂ ನಂಬುವುದು ಅದೆಂತೆನೆ—

ಕಂ|| ದೇವರ್ ಗುರು ಧರ್ಮಮಿದೆಂ |
ದೋವದೆ ಪೆಸರಿಟ್ಟೊಡದನೆ ನಂಬದಿರೆಂದುಂ ||
ದೇವರ್ ಗುರುಧರ್ಮಮುಮಂ |
ಭಾವಿಸಿ ನಂಬುವುದು ನೀಂ ಪರೀಕ್ಷಿಸಿ ಬೞಿಕಂ || || ೩೩ ||

ಮ|| ನಿರುತಂ ದೇವರೆನಿಪ್ಪುದೊಂದು ಪೆಸರಂ ತಾಳ್ದಿರ್ದೊಡಂ ದೇವರ |
ಪ್ಪರೆ ನಿರ್ದೋಷಿ ಜಿನೇಂದ್ರನಲ್ಲದುೞಿದರ್ ಪಾಲೆಂಬ ವಿಖ್ಯಾತಿವೆ ||
ತ್ತಿರೆ ಪಾಲಪ್ಪುದೆ ಯೆಕ್ಕೆ ಕಳ್ಳಿಗಳ ಪಾಲ್ ಗೋಕ್ಷೀರಮೆಂಬಂತೆ ದಲ್ |
ವರರಾಜಾಖ್ಯೆಯದಾಗೆ ಕಕ್ಕೆಯುಮರಂ ಭೂಪಾಲನಾದಪ್ಪುದೇ || || ೩೪ ||

ವ|| ಅದಱಿಂ ದೇವರಂ, ಶ್ರುತಮಂ, ತಪಮಂ, ಧರ್ಮಮಂ ಪರೀಕ್ಷಿಸುವುದದೆಂತೆನೆ :—

ಸಂ|| ಯಥಾ ಚತುರ್ಭಿಃ ಕನಕಂ ಪರೀಕ್ಷ್ಯತೇ |
ನಿಘರ್ಷಣ ಚ್ಛೇದನ ತಾಪ ತಾಡನೈಃ ||
ತಥೈವ ಧರ್ಮಂ ವಿದುಷಾ ಪರೀಕ್ಷ್ಯತೇ |
ಶ್ರುತೇನ ದೇವೇನ ತಪೋದಯಾಗುಣೈಃ || || ೩೫ ||

(1) ನಿರ್ನಾಶನಗೆಯ್ದು

ಅರ್ಥ || ಎಂತು ಸುವರ್ಣಮನೊರೆದುಂ, ಕಡಿದುಂ, ಕಾಸಿಯುಂ, ಪೊಯ್ದುಂ ನೋಡಿ ಪರೀಕ್ಷಾವಂತರ್ ಪರೀಕ್ಷಿಸಿಕೊಳ್ವರಂತೆ ದೇವರಂ, ಶ್ರುತಮುಂ, ತಪಮುಂ, ಧರ್ಮಮುಂ ಪರೀಕ್ಷಿಸಿ (ಕೊಳ್ವುದು)-ನಿರ್ದೋಷಿಯೆ ದೇವಂ, ಅದೆಂತೆನೆ :—

[1]ಮ.ಸ್ರ|| ಜರೆ ಖೇದಂ ಮೃತ್ಯು ಮೋಹಂ ಕ್ಷುಧೆ ತೃಷೆ ಜನನಂ ವಿಸ್ಮಯಂ ಚಿಂತೆ ರೋಗಂ |
ಹರುಷಂ ಸ್ವೇದಂ ವಿಷಾದಂ ರತಿ ಮುಳಿಸು ಮದಂ ಭೀತಿ ನಿದ್ರಾದಿ ದೋಷೋ ||
ತ್ಕರದಿಂದಂ ಪಿಂಗಿದಂ ಶಾಶ್ವತಗುಣನಿಳಯಂ ಸರ್ವಲೋಕೈಕವಂದ್ಯಂ |
ನಿರವದ್ಯಂ ನಿತ್ಯರೂಪಂ ನಿರುಪಮಮಹಿಮಂ ನಿರ್ಮಲಂ ನಿಷ್ಕಳಂಕಂ || ೩೭ ||

ವ|| ಇಂತು ಸಕಳದೋಷದಿಂ ಪಿಂಗಿರ್ದನಪ್ಪುದಱಿಂ ನಿರ್ದೋಷಿ ಪರಮಾತ್ಮನುಂ ಭವನಾಮರವ್ಯಂತರಜ್ಯೋತಿಷ್ಕಕಲ್ಪವಾಸಿಗಳೆಂಬ ಶತೇಂದ್ರಕೃತಪೂಜೆಗರ್ಹನಪ್ಪುದಱಿಂದ ರ್ಹನುಂ, ಮೂಱುಂಲೋಕದ ವಸ್ತುಸ್ವರೂಪಮುಂ ಕರತಲಾಮಲಕಮಾಗಿ ಕಾಣ್ಬ ಕೇವಲ ಜ್ಞಾನಮೆಂಬ ತೃತೀಯಲೋಚನಮನುಳ್ಳನಾಗಿಯುಂ ತ್ರಿಣೇತ್ರನುಂ, ಕರ್ಮಂಗಳಂ ನಿರ್ಮೂಳ ನಂಗೆಯ್ವನಪ್ಪುದಱಿಂ ಜಿನನುಂ, ಸ್ಮರವಿಕಾರವಿಧ್ವಂಸಿಯಪ್ಪುದಱಿಂ ಸ್ಮರವಿಜೇಯನುಂ, ಜಾತಿಜರಾಮರಣಮೆಂಬ ತ್ರಿಪುರಮಂ ಕಿಡಿಸಿದುದಱಿಂ ತ್ರಿಪುರಹರನುಂ, ಸಹಸ್ರದಳ ಕಮಲೋ ಪರಿಸ್ಥಿತನಪ್ಪುದಱಿಂ ಕಮಲಾಸನನುಂ, ಧರ್ಮತೀರ್ಥಕರ್ತಾರನಪ್ಪುದಱಿಂ ತೀರ್ಥಂಕರ ಪರಮದೇವನುಂ, ಸಕಳವಸ್ತುಪದಾರ್ಥಂಗಳನೊರ್ಮೊದಲಱಿವುದಱಿಂ ಸರ್ವಜ್ಞನುಮೆಂಬೀ ಪಲವನ್ವರ್ಥನಾಮಂಗಳಿಂ ವಿರಾಜಿಸುತಿರ್ಪನಂತುಮಲ್ಲದೆಯುಂ—

ಮ.ಸ್ರ|| ನಿರವದ್ಯಂ ನಿಷ್ಕಲಂಕಂ ನಿರುಪಮಮಹಿಮಂ ನಿರ್ಮಲಂ ನಿರ್ವಿಕಲ್ಪಂ |
ನಿರಪೇಕ್ಷಂ ನಿಷ್ಪ್ರಪಂಚಂ ನಿಜಗುಣನಿಲಯಂ ನಿಶ್ಚಲಂ ನಿತ್ಯರೂಪಂ ||
ನಿರಘಂ ನಿರ್ಮತ್ಸರಂ ನಿರ್ಜರಪತಿನು(ನ)ತ ಪಾದದ್ವಯಂ ನಿರ್ವಿವಾದಂ |
[2]ನಿರುಜಂ ನಿಸ್ಸಿಕ್ತ್ಯಯುಕ್ತಂ ನಿರವಧಿವಿಭವಂ ನಿರ್ಭಯಂ ವೀತರಾಗಂ || ೩೭ ||

ವ|| ಇಂತು ಸಕಲದೋಷದಿಂ ಪಿಂಗಿದ ಪರಂಜ್ಯೋತಿಸ್ವರೂಪನಪ್ಪ ವೀತರಾಗನೇ ದೇವ ನೆಂಬುದಱಿಂದಾದೇವನೇ ಆಪ್ತಂ ಎಂದು ನಂಬುವುದು. ಮಿಕ್ಕಿನ ನಿರ್ದಯರಂ, ನಿರ್ಗುಣರಂ, ನಿರ್ಭಾಗ್ಯರಂ, ನಿರ್ಬೋಧರಂ, (ನಿಸ್ಪೃಹರಂ) ದೇವರೆಂದು ನಂಬದೆ ಜಿನರಂ ದೇವರೆಂದು ನಂಬುವುದೇ ಸಮ್ಯಕ್ತ್ವಂ—

ಕಂ|| ಅಱಿವಂದದಿಂದೆ ದೇವರ |
ತೆಱನಂ ನಾಂ ಪೇೞ್ದೆ ನಿನ್ನ ಶ್ರುತಮೆಂಬುದನೀ ||
ತೆಱನೆಂದು ಪೇೞ್ವೆನಾನೆ |
ನ್ನಱಿವಂದದೆ ಕೇಳಿಮೆಂದು ಪೇೞಲ್ ತೆಗುಳ್ದಂ || ೩೮ ||

(1) ಈ ಪದ್ಯದ ಅರ್ಥವುಳ್ಳ ಸಂಸ್ಕೃತಶ್ಲೋಕವು ಪುಟ 185 ರಲ್ಲಿ ಉದಾಹರಿಸಿದೆ. (2) ಅರ್ಥ ನೇಮಿ ಪುರಾಣದಲ್ಲೂ ನಿರುಜ ಎಂದು ಪ್ರಾಸಸ್ಥಳದಲ್ಲಿ ಪ್ರಯೋಗವು ಕಂಡುಬರುವುದು, ಸಂಸ್ಕೃತ ವ್ಯಾಕರಣ ನಿಯಮ ದಂತೆ " ನೀರುಜ" ಎಂದಿರಬೇಕು.

ವ|| ಆದೆಂತೆನೆ :–ಮುಂ ಪೇೞ್ದಖಿಲದೋಷರಹಿತವೀತರಾಗಪ್ರಣೀತಮುಂ, ಇಂದ್ರಾದಿಗಳ್ಗ ಲಂಘ್ಯಮಾದುದುಂ, ಪ್ರತ್ಯಕ್ಷಾನುಮಾನವಿರೋಧಾದಿದೋಷದೂರಮುಂ. ತತ್ತ್ವೋಪದೇಶ ಕರಣ ಸಮರ್ಥಮುಂ, ಸಕಲವಿನೇಯಜನಹಿತಮುಂ. ಕುಮಾರ್ಗನಿರಾಕರಣಧುರಂಧರಮುಂ, ಶಾಸ್ತ್ರಮೆಂಬುದು.

ತಪೋಲಕ್ಷಣಮೆಂತೆನೆ :—ವಿಷಯಾಭಿಲಾಷಮಂ ಮುಟ್ಟದುದುಂ, ಕೃಷ್ಯಾದಿ ವ್ಯಾಪಾರದ ಸೋಂಕಿಲ್ಲದುದುಂ, ಬಾಹ್ಯಾಭ್ಯಂತರ ಪರಿಗ್ರಹ ಸ್ಪರ್ಶಮಿಲ್ಲದುದುಂ, ಜ್ಞಾನಧ್ಯಾನ ಸಮನ್ವಿತ ಮುಮಾದುದೇ ತಪಮೆಂಬುದು. ಆದೆಂತೆನೆ :—

ಕಂ|| ಪೆಣ್ಣಿಂಗಂ ಪೊನ್ನಿಂಗಂ |
ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ ||
ಬಣ್ಣಿಸೆ ಚಂಚಲನಾಗದೆ |
ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ || ೩೯ ||

ಶಾ|| ಪಾಲೊಳ್ ಮೊಕ್ಕಳಮಾಗಿ ಪೊಯ್ಯೆ ಜಲಮುಂ ಪೆಪ್ಪಕ್ಕುಮಂತಲ್ಲದಾ |
ಪಾಲುಂತುಂ ರುಚಿಯಾಗದೆಂತೆ ಕೆಲಬರ್ ಮಿಥ್ಯಾರ್ಥಮುಃಖಂಗಳೊಳ್ ||
ಕಾಲೂಱಿರ್ದ ತಪಂಗಳೊಳ್ ನೆಗೞ್ದೊಡಂ ದುಷ್ಕರ್ಮರೆಂತಾದೊಡಂ |
ಭೂಲೋಕನ್ನೆರಮಪ್ಪ ಸತ್ತಪದೊಳಂ ಪೊಂದಿರ್ದರಂ ಪೋಲ್ವರೇ || ४೦ ||

ವ|| ಧರ್ಮಸ್ವರೂಪಮಂ ಪೇೞ್ವಿನದೆಂತೆನೆ :—ಸಮ್ಯಗ್ದರ್ಶನ ಜ್ಞಾನಚಾರಿತ್ರದೊಳ್ ಕೂಡಿ ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹ ನಿವೃತ್ತಿಯಂಮಾಡಿ ದಾನಪೂಜಾಶೀಲೋಪವಾಸಮೆಂಬಿವ ಱೊಳ್ ಕೂಡಿದುದೆ ಸದ್ಧರ್ಮ[1]ಮೆನಿಕುಂ.

ಮ.ಸ್ರ|| ವ್ರತಮಂ ಕೆಯ್ಕೊಂಡು ಮೂಢತ್ರಯಮನುೞಿದು ನಾನಾಗುಣಾನ್ವೀತಶೋಭಾ |
ನ್ವಿತಮಪ್ಪಾಚಾರದಿಂದಂ ನಡೆದು ವಿಮಲ ರತ್ನತ್ರಯಾನೀಕಮಂ ಸ ||
ನ್ನುತಮಾಗಲ್ ಪೆತ್ತು [2]ದೇವಾಧಿಪಪದವಿಗಳೊಳ್ ಬರ್ದ್ದು ಕೈವಲ್ಯಲಕ್ಷ್ಮೀ |
ಪತಿಯಾದರ್ ಜೈನಮಂ ನಂಬಿದರೆನಲಿದು ಬೆಟ್ಟಿಚ್ಚಗೋಲ್‌ತಪ್ಪಿತುಂಟೇ || ४೧ ||

ವ|| ಜಿನಧರ್ಮಮೆಂಬ ನೀರಿಂ ಕರ್ಮಮೆಂಬ ಕಿಚ್ಚಂ ನಂದಿಸದೆ, ಜಿನಾಗಮಮೆಂಬ ಗ್ರಹವಾದಿಯಿಂ ದುಷ್ಕರ್ಮಮೆಂಬ ಗ್ರಹಮನೆಬ್ಬಟ್ಟದೆ, ವ್ರತಮೆಂಬ ಪಱಗೋಲಿಂದಶುಭಮೆಂಬ ತೊಱೆಯಂ ಪಾಯದೆ, ಜಿನಪಕ್ಷಪಾತಮೆಂಬ ಸಿಡಿಲಿಂ ಪುಣ್ಯವಿರೋಧಿಯಾಗಿರ್ಪ ಮರನನುರಿಪದೆ, ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ, ಜಿನಾಭಿಷೇಕಮೆಂಬ ಕೂರ ಲಗಿನಿಂ ಕರ್ಮವೈರಿಯೆಂಬೊಡ್ಡಂ ತಡಿಯದೆ, ಜಿನಕಥಾಪ್ರೀತಿಯೆಂಬ ಸಿಂಹದಿಂ ದೋಷಮೆಂಬ ಗಜಮಂ ಸೀೞದೆ, ಜಿನಧರ್ಮಪ್ರಿಯಮೆಂಬ ವಜ್ರದಿಂ ಮಾಯೆಯೆಂಬ ಬೆಟ್ಟಮನೊಡೆಯದೆ, ಜಿನಪೂಜಾನಂದಮೆಂಬ ದಾವಾಳನಿಂ ಮಾನಮೆಂಬಡವಿಯಂ ಕಡಿಯದೆ, ಜಿನರೂಪದರ್ಶನ ಹರ್ಷಮೆಂಬ ಬಿಸಿಲಿಂ ದೋಷಮೆಂಬ ಶೀತಮಂ ಕಿಡಿಸದೆ, ಜಿನಲಕ್ಷಣ ನಿರೀಕ್ಷಣಮೆಂಬ

(1) ಮೆಂಬುದಕ್ಕುಂ (ಕ) (2) ನು(ಮು)ಱಿಯದೆ

ಚಂದ್ರನಿಂದಂತರಾಯಮೆಂಬ ತಾವರೆಯಂ ಮುಗಿಸದೆ. ಜಿನಭಕ್ತಿಯೆಂಬ ಸೊಡರಿಂ ದರ್ಶನಾವರಣಮೆಂಬ ಕಲ್ತ್ತಲೆಯಂ ಪಿಂಗಿಸದೆ, ಜಿನತತ್ವವಿಚಾರಮೆಂಬಱಿಸಿಂ ಜ್ಞಾನಾವರಣಮೆಂಬಾಟವಿಕರ ನೆರವಿಯನೋಡಿಸದೆ, ಜಿನಪಾದಸ್ನೇಹಮೆಂಬ ದಂಡಿಂ ವೇದನೀಯಮೆಂಬ ಗಡಿಯನಾಯಕರನೋಡಿಸದೆ, ಜಿನಚರಣಾವಲಂಬವೆಂಬಕೋಂಟೆಯಿಂ ಮಿಥ್ಯಾತ್ವಮೆಂಬ ಸೂಱೆಗಾರನಂ ಕಾದಿ ಗೆಲ್ಲದೆ, ಜಿನಸ್ತವನ ರುಚಿಯೆಂಬ ಮೇಘಗರ್ಜನೆಯಿಂ ನರಕಗತಿಯೆಂಬ ಹಂಸೆಯನೋಡಿಸದೆ ಜಿನತತ್ವಕಾಂಕ್ಷೆಯೆಂಬ ಬಾಣದಿಂ ತಿರಕಗತಿಯೆಂಬ ಕಾಗೆಯನೋಡಿಸದೆ, ಜಿನಾರಾಧನೆಯೆಂಬ ಹಿಮದಿಂ ಮನುಷ್ಯಗತಿಯೆಂಬ ಬಾಳಸಹಕಾರಮುಂ ಕಿಡಿಸದೆ, ಜಿನರನೆರವಿಯೆಂಬ ಬಾಣದಿಂ ಮನುಷ್ಯಗತಿಯೆಂಬ ನಿಗಳಮುಂ ಭೇದಿಸದೆ, ನೆರೆಮನೆಯವರಂ ಪಾವಂ ಪಿಡಿಯಿಮೆಂಬಂತೆ, ನೆರೆಗೆಯ್ಯವರಂ ಬಿತ್ತಿಕೊಡಿಮೆಂಬಂತೆ, ಸವತಿಯ ಮಗನಂ ಬೇಡಿಕೊಂಬಂತೆ, ಬಟ್ಟೆವೋಪರಂ ಪುಲಿಯಂ ಇಱಿಯಿಮೆಂಬಂತೆ, ತಿರಿಯಬಂದವರಂ ಕೂಟನಡಿ(ಯೆ)ಮೆಂಬಂತೆ ಬಿರ್ದುಬಂದವಳಂ ಪೆಂಡಿತಿಯಾಗೆಂಬಂತೆ. ಲೋಗ(ಕ)ರಂ ಮನೆಯಂ ಕಾಯ್ದಿರಿಮೆಂಬಂತೆ ನಿರ್ಬುದ್ಧಿಯಿಂ ಪೆಱವನೆ ನಗೆಂದಿರ್ದೊಡಂ ಶಾಶ್ವತಸುಖಂ ದೊರೆಕೊಳ್ಳದು, ಮುನ್ನಂ ತನ್ನ ಮಾಡಿದ ಕರ್ಮದುದಯದಿಂದೆಯ್ದಿದ ಸಾವುಮಂ ನೋವುಮಂ ಪೆಱರಂ ಪರ್ಚಿ ಕೊಳಿಮೆಂದೊಡೆ ಪರ್ಚಿಕೊಳ್ವರೆ? ಸದ್ಧರ್ಮಮಂ ಪೊರ್ದಿ ಸುಖದಿನಿರ್ಪೊಡಂ ಕುಧರ್ಮಮಂ ಪೊರ್ದಿ ದುಃಖಂಬಡುವೊಡಂ ತಾನೆಯಲ್ಲದೆ ಪೆಱರೊರ್ವರುಂ ಸಹಾಯಮಾಗರ್—

ಹರಿಣೀ|| ರುಜೆಗಳೊದವಿಂ ದುಃಖವ್ರಾತಂಗಳಿಂ ಪೆಱರೊತ್ತಿನಿಂ |
ಪ್ರಜೆಯ ಭಯದಿಂ ಪೊಂಗಿಂ ಶೀತೋಷ್ಣದಿಂ ನೆಲಪಾಯಿನಿಂ ||
ಕುಜನನೆರವಿಂ ಸ್ತ್ರೀಯಿಂದತ್ಯಂತ ಮಿತ್ರರಗಲ್ಕೆಯಿಂ |
ವೃಜಿನದೊದವಿಂ ದುಃಖಂ ಸಾರ್ಗುಂ ಮನುಷ್ಯರನೆಲ್ಲಿಯುಂ || ೪೨ ||

ಅರಿ[ಯ]ಭಯದಿಂ ಧಾತ್ರೀನಾಥರ್ಕಳೊಂದತಿಬಾಧೆಯಿಂ |
ಸುರತದಳಿಪಿಂ ಮುನ್ನಂಕೊಂಡುಂಡ ಸಾಲದ ಚಿಂತೆಯಿಂ ||
ಒರನ ತೇಜವಿಂ ನಂಟರ್ ಪುತ್ರರ ಸಹಾಯಕರ ನೋವಿನಿಂ? |
ದುರಿತದೊದವಿಂ ದುಃಖಂ ಸಾರ್ಗುಂ ಮನುಷ್ಯರನೆಲ್ಲಿಯುಂ || ೪೩ ||

ಕಂ|| ದುರಿತಂ ಕಿಡದನ್ನೆವರಂ |
ಪರಮಜಿನಾಗಮಮನಱಿಯದನ್ನೆವರಂ ನಿ ||
ಷ್ಠುರಮಪ್ಪ ದುಃಖಚಯಮುಂ |
ಮರಣಮುಮಾಪ ಭವದೊಳಂ ಪಿಂಗುಗುಮೇ || ೪೪ ||

ಸಂ|| ಸಂಸ್ಥಾನಂ ಯದನಿತ್ಯತಾऽಶರಣತಾ ಸಂಸಾರ ಏಕಾಕಿತಾऽ |
ನ್ಯತ್ವಂ ಚಾಶುಚಿತಾಸ್ರ(ಶ್ರ)ವಂ ಸುನಯತಃ ಸ್ಯಾತ್ ಸಂವರೋ ನಿರ್ಜರಃ ||
ಲೋಕೋ ಬೋಧ್ಯತಿದುಲಭತ್ವಮುಪರೋ [1] ಧರ್ಮಸ್ತ್ವದಿತ್ಯನ್ವಿತೋ ||
ಭೇದೈಸ್ತೈಃ ವಿಚಯೋऽಸ್ಯ ಚಿಂತನಮನುಪ್ರೇಕ್ಷಾಃ ಸ್ಮೃತಾ ದ್ವಾದಶ || ೪೫ ||

---

(1) ಧರ್ಮಸ್ತ್ವರಿತ್ಯಂಚಿತಂ (ಚ)

ಟೀಕು|| ಯತ್ ಆವುದೊಂದು, [ಸಂಸ್ಥಾನಂ] ಸಂಸ್ಥಾನಮೆಂಬುದು, ಅನಿತ್ಯತಾ–ಅನಿತ್ಯತೆಯುಂ, ಅಶರಣತಾ–ಅಶರಣತ್ವಮುಂ, ಸಂಸಾರ-ಸಂಸಾರಮುಂ, ಏಕಾಕಿತಾ–ಏಕಾಕಿತ್ವಮುಂ, ಅನ್ಯತ್ವಂ-ಅನ್ಯತ್ವವುಂ, ಅಶುಚಿತಾ-ಅಶುಚಿತ್ವಮುಂ, ಆಸ್ರವ–ಆಸ್ರವಮುಂ, ಸಂವರ–ಸಂವರಮುಂ, ನಿರ್ಜರಾ–ನಿರ್ಜರೆಯುಂ, ಲೋಕ–ಲೋಕಮುಂ, ಬೋಧ್ಯತಿದುರ್ಲಭತ್ವಂ–ಬೋಧ್ಯತಿದುರ್ಲಭತ್ವಮುಂ, ಅಪರಃ–ಉತ್ತಮಮಪ್ಪ (ನವಿದ್ಯತೇ + ಪರೋಯಸ್ಮಾತ್‌ಸ–ಎಂದುನಞ್ ಬಹುವ್ರೀಹಿ) ಧರ್ಮಃ–ಧರ್ಮಮೆಂಬುದು. ಇತಿ–ಇಂತು, ತತ್–ಅದು, ಸುನಯತಃ–ಒಳ್ಳಿಹನೈಗಮದತ್ತಣಿಂ, ಭೇದೈಃ–ಭೇದಂಗಳಿಂದಂ, ಅನ್ವಿತಂ–ಕೂಡಿದುದು, ಸ್ಯಾತ್–ಆಕ್ಕುಂ, ವಿಚಯಃ–ವಿಚಯಮೆಂಬುದು, ಅಸ್ಯ–ಇದಱ, ಚಿಂತನಂ-ಚಿಂತೆ (ಧ್ಯಾನಂ) ದ್ವಾದಶ–ಪನ್ನೆರಡು, ಅನುಪ್ರೇಕ್ಷಾ–ಅನುಪ್ರೇಕ್ಷೆಗಳೆಂದು, ಸ್ಮೃತಾಃ–ಅಱಿಯಲ್ಪಟ್ಟುವು—

ದುಃಖಗ್ರಾಹಸಮಾಕೀರ್ಣೇ ಸಂಸಾರೇ ಕ್ಷಾರಸಾಗರೇ ||
ಧರ್ಮಪೋತಂ ಪರಂ ಪ್ರಾಹುಃ ಕರಣಾರ್ಥಂ ಮನೀಷಿಣಾಂ || ೪೬ ||

ತಾ|| ಎಲೆ ಜೀವನೆ, ಸಹಜ ಶಾರೀರಮಾನಸಾಗಂತುಕ ದುಃಖಂಗಳೆಂಬ ನೆಗಲ್ಗಳಿಂಡಿನಿಂ ದಿಡಿಕಿಱಿದಿರ್ದ ಸಂಸಾರಮೆಂಬ ಕ್ಷಾರವಾರಿಧಿಯಂ ದಾಂಟುವಾಸನ್ನಭವ್ಯ ಜನಂ[1]ಗಳ್ಗೆಲ್ಲಂ ಅಧ್ರುವಮಶರಣಂ ಸಂಸಾರೈಕತ್ವಾನ್ಯತ್ವಾ ಶುಚಿತಾಸ್ರವಸಂವರ ನಿರ್ಜರ ಲೋಕ ಬೋಧಿದುರ್ಲಭ ಧರ್ಮಮೆ ಪ್ರಧಾನಮಪ್ಪ ತರಣೋಪಾಯಮಾದ ಪಡಗೆಂದು ಕರಮುಱಿದಾರ್ತು ನೆಗಲ್ವರ್ ಕರ್ಮಂಗಳೆಂಬ ನೆಗಲ್ಗಳಿಂಡಂ ನಿರ್ಮೂಲಂಗೆಯ್ದು ಸಂಸಾರಸಮುದ್ರಮಂ ದಾಂಟಿ ತದುತ್ತರಪಟ[ಲ] ಸಮೀಪವರ್ತಿಯಾದ ನಿತ್ಯನಿರ್ಮಳ [2]ನಿರುಪಮಾನಂದ ನಿಜಾವಾಸಮಾದ ಕೈವಲ್ಯದೊಳ್ ಕೂಡಿ ಸುಖಮಿರ್ಪರ್—

ಇಷ್ಟಾದ ಬೞಿಕ ಹಿಂದಣ ಆಶ್ವಾಸಾಂತದಲ್ಲಿರುವ ಉಪಸಂಹಾರದ ಈ ಮೂರುಪದ್ಯಗಳೂ ಇಲ್ಲಿವೆ, ಬಳಿಕ ಆಶ್ವಾಸಾಂತ್ಯ ಗದ್ಯವಿದೆ—

(1) ಚಂ|| ಪರಮಸುಖಂ
(2) ಮ|| ಘನವಂಶೋತ್ತಮ....
(3) ಭವಾರ್ಣವೇ ಜಂತು—

(೨–೩ ಪ್ರತಿಗಳಲ್ಲಿ ಈ ನಾಗಕುಮಾರನ ಕಥೆಯಿರುವುದು)



(1) ಗಳ್ಗೆ (ಕ) (2) ನಿಜಾರಪಾನಂದ (ಚ)

# ಪರಿಶಿಷ್ಟ ೨

## ಪದ್ಯಗಳ ಅಕಾರಾದ್ಯನುಕ್ರಮಣಿಕೆ

## ....ಪರಿಶಿಷ್ಟದಲ್ಲಿ....

# ಪರಿಶಿಷ್ಟ ೩

## ಕಂದವೃತ್ತ ಮೊದಲಾದುವುಗಳ ಹೆಸರು ಮತ್ತು ಸಂಖ್ಯೆ ಇವುಗಳನ್ನು ತೋರಿಸುವ ಪಟ್ಟಿಕೆ—

| | ವೃತ್ತಗಳ ಹೆಸರುಗಳು | ಅಧಿಕಾರ ಸಂಖ್ಯೆ | | | | | | | | | | | | |
|---|---|---|---|---|---|---|---|---|---|---|---|---|---|---|
| | | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ಒಟ್ಟು ಸಂಖ್ಯೆ |
| 1 | ಶಾರ್ದೂಲ ವಿಕ್ರೀಡಿತಂ | 4 | 1 | 1 | 4 | .... | 3 | 2 | 1 | 2 | 1 | 2 | 4 | 25 |
| 2 | ಉತ್ಪಲಮಾಲೆ | 7 | 5 | 9 | 4 | 6 | 4 | 5 | 3 | 5 | 3 | 10 | 2 | 63 |
| 3 | ಮತ್ತೇಭ ವಿಕ್ರೀಡಿತಂ | 4 | 4 | 5 | 4 | 4 | 8 | 4 | 5 | 5 | 6 | 7 | 9 | 65 |
| 4 | ಚಂಪಕಮಾಲೆ | 10 | 2 | 6 | 3 | 7 | 6 | 5 | 6 | 4 | 4 | 5 | 6 | 64 |
| 5 | ಮಲ್ಲಿಕಾಮಾಲೆ | 1 | .... | .... | .... | .... | 1 | .... | .... | .... | .... | .... | .... | 2 |
| 6 | ಪಿರಿಯಕ್ಕರಂ | 1 | .... | .... | .... | .... | .... | .... | .... | .... | .... | .... | .... | 1 |
| 7 | ತರಳಂ | .... | .... | .... | .... | .... | .... | .... | .... | .... | .... | 1 | .... | 1 |
| 8 | ಕಂದಂಗಳ್ | 31 | 20 | 28 | 15 | 21 | 45 | 17 | 19 | 17 | 33 | 37 | 27 | 310 |
| 9 | ರಗಳೆಗಳ್ | 1 | 1 | 1 | 1 | 1 | 1 | 1 | 1 | 1 | 1 | 1 | 1 | 12 |
| 10 | ತ್ರಿಪದಿಗಳ್ | .... | .... | .... | .... | .... | .... | .... | .... | .... | .... | .... | 14 | 14 |
| 11 | ಸಂ. ವೃತ್ತಂಗಳ್ | .... | .... | .... | .... | .... | 1× | .... | .... | .... | .... | .... | 1 | 1 |
| | ಒಟ್ಟು ವೃತ್ತಗಳು | 59 | 33 | 50 | 31 | 39 | 68 | 34 | 35 | 34 | 48 | 63 | 64 | 558 |

# ಪರಿಶಿಷ್ಟ ಳ

[ ತಮಿಳಿನೊಡನೆ ಹೋಲಿಕೆ ]

(ತಮಿಳಿನ ಒಂದೆರಡು ಗದ್ಯಪದ್ಯಗಳ ಮತ್ತು ಮುಂಡಕೌಶಿಕನ ಕಥೆಯ ಪರಿವರ್ತನವನ್ನು ಇಲ್ಲಿ ಹೋಲಿಕೆಗಾಗಿ ಕೊಟ್ಟಿದೆ. ತಮಿಳಿನ ವಾಕ್ಯಶೈಲಿಯನ್ನೂ ಶಬ್ದಗಳನ್ನೂ ಅನುಸರಿಸಿ ಕನ್ನಡ ವಿಭಕ್ತಿಗಳನ್ನು ಮಾತ್ರ ಸೇರಿಸಿದೆ)

## ಅಶರಣಮೆಂಬ ಅನುಪ್ರೇಕ್ಷೆಯಲ್ಲಿ ನಾಲ್ಕನೆ ಪದ್ಯಕ್ಕೆ ಸೇರಿದ ಗದ್ಯ — [ ತಮಿಳ್ ]

(ಕನ್ನಡವಾಕ್ಯ—ಪು. 30 – 4 ಪ.—ನೋಡುವುದು)

(ತ) ನಡುಕ್ಕಾನನತ್ತುಳ್ಳೆ ಎತ್ತನಿಟ್ಟು ಮಯಕ್ಕಮೋ ಶೆಯ್ಯು ಪುರುನ್ನು ಮೇಲ್ ಕೊಂಡಾಲುಂ, ಸಂಸಾರತ್ತಿನ್ ನಡುವೆ ಮೋಹಂ ತೊಡರ್ನ್ದಾಲುಂ ಕಾಪ್ಪುಂ ಶರಣುಂ ಅರುಕನಡಿಯಲ್ಲದು ಪಿಱತಾನತುಂಡೋ ? ಅನ್ರಿಯುಂ—

(ಕ.ಅನು) ನಡುಕಾನನದಲ್ಲಿ......ಇಟ್ಟು ಮೈಪುರವೆಯನ್ನು ಗೆಯ್ಯುವ ಮದ್ದನ್ ಮೇಲೆ ಕೊಂಡರೂ, ಸಂಸಾರದ ನಡುವೆ ಮೋಹವು ತೊಡರ್ದರೂ ಕಾಪೂ, ಶರಣೂ (ಇಲ್ಲಿಯವರೆಗೂ ಕನ್ನಡದ ಅನುಕರಣದಂತಿದೆ – ಮುಂದೆ ಎರಡರಲ್ಲೂ ವಿಷಯ ಭಿನ್ನವಾಗಿದೆ) ಅರುಹಂತನ ಅಡಿಗಳಲ್ಲದೆ ಬೇರಾವುದಾದರುಂಟೋ ? ಅಲ್ಲದೆಯುಂ—

(ತ) ಮಂತಿರಮು ಮಾಣ್ಡಮಣಿಕಳು ಮಾಮರುನ್ತುಂ |
ತಂತಿರಮುಂ ತಾಂ ಕಾಕ್ಕುಂ ತನ್ಮೈಯವೋ – ವೆಂತೀಕ್ಕು
ಪ್ಪುಪಯಿರೈ ಚ್ಚೂಟಿಪ್ಪೋವಾ ಪುದುವೇಲಿ ಪೋಱ್‌ಕಾವಲ್
ತುನ್ಪಮದು ಕಾಕ್ಕುಮೋ ಶೊಲ್ಲು (91)

ಪಶು ಪ್ಪುಕಾಪುಱುಕ್ಕು ಕಾಕ್ಕುಂ ತನ್ಮೈಯವಾಕಿಯ ವೇಲಿ ಎರಿಮುಕತ್ತು ನಿಲ್ಲಾವಾಱು ಪೋಲ ವೇದನೀಯಕರ್ಮಂಗಳುಕ್ಕು ಪ್ರತೀಕಾರಂಶೆಯ್ಯುಂ ಮಂತ್ರಂಗಳುಂ ತಂತ್ರಂಗಳುಂ ಯಮರಾಜನ್ನೈಕಾಕ್ಕವಲ್ಲವೋ ? ಕಾಕ್ಕುಮೆನ್ನುಂ ಆಶೈಯಿನಾಱ್(ಲ್) ಶೆಯ್ಯಪ್ಪಟ್ಟ ಉಪಾಯಂಗಳುಂ ಅಪಾಯಗಳಾನಮೈ ಕಾಣಲಾಕಾತೋ ? – ಜೀವನೇ—

ಅನ್ರಿಯುಂ (ಅದೂ ಇಲ್ಲದೆ)

(ಕನ್ನಡ.ಅ) ಮಂತ್ರವೂ (ವಿಷಹರಗರುಡಪಚ್ಚೆಮೊದಲಾದ) ಮಣಿಗಳೂ, ಮಾಮದ್ದೂ–
ತಂತ್ರವೂ ತಾವು ಕಾಯುವ (ರಕ್ಷಿಸುವ) ಸ್ವಭಾವವುಳ್ಳವುಗಳೇನು ?–ಬೇವ ಬೆಂಕಿಗೆ
ಹಸುರಾದ ಪೈರನ್ನು ಸುತ್ತಿ ಹಾಕಿರುವ ಹೊಸ ಬೇಲಿಯ ಕಾವಲು
ಈ (ಬೆಂಕಿಯ) ಬಾಧೆಯನ್ನು ತಡೆದು ರಕ್ಷಿಸಬಲ್ಲುದೋ ಹೇಳು ||

ಹಸು ಹುಗದಿರುವಂತೆ ಕಾಯುವ ಸ್ವಭಾವ (ಸಾಮರ್ಥ್ಯ) ವುಳ್ಳ ಬೇಲಿಯು ಉರಿಯ ಮುಕದಲ್ಲಿ ನಿಲ್ಲಲಾರದಂತೆ ವೇದನೀಯಕರ್ಮಬಾಧೆಗೆ ಪ್ರತೀಕಾರ ಗೆಯ್ಯುವ [ಎಂದರೆ ರೋಗ ಬಾಧೆಗಳ ನಿವಾರಣೆಗೆ ಮಾಡುವ] ಮಂತ್ರ ತಂತ್ರಗಳು ಯಮರಾಜನಿಂದ ಕಾಯಬಲ್ಲುವೇ ? ಕಾಯುವುವೆಂಬ ಆಸೆಯಿಂದ ಗೆಯ್ಯಲ್ಪಟ್ಟ ಉಪಾಯಗಳು ಅಪಾಯಗಳಾಗಿ ಆದುವನ್ನು ಕಾಣಲಾಗದೋ ?—

ಈ ಪದ್ಯದಲ್ಲಿ ಉತ್ತರಾರ್ಧದ ಬೇಲಿಯ ದೃಷ್ಟಾಂತ ಗದ್ಯದಲ್ಲಿ ಬಂದಿರುವುದರಿಂದ ಕನ್ನಡ ಕವಿಯು ಪೂರ್ವಾರ್ಧದ ವಿಷಯವನ್ನು ಮಾತ್ರ ಒಂದು ಕಂದದಲ್ಲಿ ಅಡಗಿಸಿ ಉತ್ತರಾರ್ಧವನ್ನು ಗದ್ಯದಲ್ಲಿ ಕೊಟ್ಟಿರುವನು ತಮಿಳಿನಲ್ಲಿ ಪುನರುಕ್ತವಾಗುವುದು — [ಪದ್ಯದ ಭಾಗವನ್ನು ಮತ್ತೆ ಗದ್ಯದಲ್ಲಿ ಹೇಳಿದಂತಾಗಿದೆ]

ಈ ಭಾಗದಲ್ಲಿ ಕನ್ನಡಕ್ಕೂ ತಮಿಳಿಗೂ ಎಷ್ಟು ಹೋಲಿಕೆಯಿದೆ ಎಂಬುದನ್ನು ವಾಚಕರೇ ತಿಳಿದುಕೊಳ್ಳಬಹುದು. ಗದ್ಯದಲ್ಲಿ ವಾಕ್ಯವೂ ಶಬ್ದಗಳೂ ಕೂಡ ಒಂದೇ ಆಗಿವೆ—ಬೇಲಿ-ಅಪಾಯ ಉಪಾಯ—ಇತ್ಯಾದಿ ಶಬ್ದಗಳೂ ಒಂದಾಗಿವೆ.

(ಮುಂಡಕೌಶಿಕನ ಕಥಾಭಾಗವನ್ನು ತಮಿಳಿನಲ್ಲಿ ಹೇಳಿರುವುದನ್ನು ಕನ್ನಡದಲ್ಲಿ ಅನುವಾದ ಮಾಡಿ ಕೊಟ್ಟಿದೆ, ತಮಿಳಿನ ವಾಕ್ಯವನ್ನು ಹೆಚ್ಚಾಗುವುದೆಂದು ಕೊಟ್ಟಿಲ್ಲ—)

**ಮುಂಡಕೌಶಿಕ್ (ತಮಿಳ್ ವಾಕ್ಯವನ್ನೂ, ಶಬ್ದಗಳನ್ನೂ ವಿಶೇಷವಾಗಿ ಅನುವಾದಮಾಡಿದೆ)**

ದ್ವೀಪದ ಒಳಗಡೆ ಏಳುನಾಡು ದಕ್ಷಿಣ ಭರತಭೂಮಿ ವಸುಧಾಪುರನಗರವು. ಪ್ರಸಿದ್ಧನಾದ ಸಂಪದ್ಯುಕ್ತವೇದಪತಿಯೆಂದು ಬೆಳಗುವ ಮುಂಡಕೌಶಿಕನೆಂಬ ಪೆಸರಿನ ಪಂಡಿತನುಂಟು(ಗ) ಜಂಬೂ ದ್ವೀಪದಲ್ಲಿ ಭರತಕ್ಷೇತ್ರದಲ್ಲಿ ಧರ್ಮಖಂಡದೊಳಗೆ ವಸುಧಾರೆಯೆಂಬ ನಗರದಲ್ಲಿ ವೇದಪಾರಗನಾದ ಬ್ರಾಹ್ಮಣನು ಮುಂಡಕೌಶಿಕನೆಂಬುವನು. ಅವನ ಬ್ರಾಹ್ಮಣಿ ಮನೋರಮೆಯೆಂಬುವಳು. ಇವರುಗಳಿಗೆ ಧನಧಾನ್ಯದಾಸೀದಾಸಗೋಮಹಿಷ್ಯಾದಿಗಳಿಂದಲೂ ಬನ್ಧುವರ್ಗಗಳಿಂದಲೂ ಸಮೃದ್ಧರಾಗಿ ಇಷ್ಟವಿಷಯಕಾಮಭೋಗಗಳನ್ನು ಅನುಭವಿಸಿಕೊಂಡು ಸಲುತ್ತಿದ್ದ ಕಾಲದಲ್ಲಿ ಮಕ್ಕಳಿಲ್ಲದುದರಿಂದ ಮನಃಖೇದವಾಗಿ ಯಾವುದು ಹೇಳಿ ಯಾವುದು ಗೆಯ್ದರು.

ಈ ನಮ್ಮ ಜನ್ಮವು ಹೀಗೆಯೇ ಕಳೆದುಹೋಗುವುದೋ ಇನ್ನು ಸುಖವಾಗಿ ಸಂದಬಲು ನಮಗೆ ತಾನುಂಟೋ? ಬಂದ ವಿಧಿಯಬಗೆಯಿಂದ ಪುತ್ರನು ಹುಟ್ಟುವ ಬೇಳ್ವಿಗೆ ಗತಿಬಗೆಯುಂಟೊ.

ಪುತ್ರರಿಲ್ಲದುದರಿಂದ ಮನಃಖೇದವಾಗಿ ನಮಗೀಜನ್ಮವು ಬರಿದಾಗಿಯೇ ಕಳೆಯುವುದೋ? ಸಂತತಿಯಿಲ್ಲದಿರುವುದರಿಂದ ಪಿತೃಕಾರ್ಯವನ್ನು ಗೆಯ್ಯುವರಿಲ್ಲ. ಆದರಿಂದ ಪುತ್ರ ಮುಖವನ್ನು ನೋಡದಿದ್ದರೆ ಗತಿಯಿಲ್ಲವೆಂದು ದೇವತೆಗಳಿಗೆ (ಪ್ರಾರ್ಥಿಸಿ) ವರವನ್ನು ಪಡೆದಾದರೂ ಪುತ್ರಸಂಪತ್ತುಂಟಾಗಬೇಕು, ಎಂದು ಆ ನಗರದ ಹೊರಗೆ ಗೃಹಾವಾಸಿನಿ (1. ಬೆಟ್ಟದಲ್ಲಿರುವ ದೇವತೆಯಾದುದರಿಂಡ ಕನ್ನಡದಲ್ಲಿ ಗಿರಿವಾಸಿಸಿನಿ ಎಂದಿದೆ. ಇಲ್ಲಿಯೂ ಗೃಹಶಬ್ದಕ್ಕೆ ಬದಲಾಗಿ ಗುಹಾವಾಸಿನಿ ಎಂದಿರಬಹುದು) ಎಂಬ ದೇವತೆಯನ್ನು ಪ್ರಾರ್ಥಿಸಿ ವರವನ್ನು ಪಡೆದು ಪುತ್ರನನ್ನು ಪೆತ್ತು ಪುತ್ರಮುಖವನ್ನು ಕಂಡು ಸಂತೋಷದಿಂದ ಮಗನನ್ನು ಬಳೆಯಿಸಿ ವೇದಶಾಸ್ತ್ರಗಳನ್ನ ಭ್ಯಾಸಮಾಡಿಸಿ ಷೋಡಶವರ್ಷವುನೆಱೆದಪಿಂತೆ ವಿವಾಹಗೆಯ್ಯಲು ಮಗಳವಿಚಾರವಾಗಿ ಮಾತಾಡಿ ಹೆಣ್ಣನ್ನು ಒಡಂಬಡಿಸಿ ಬಂಧುಗಳೆಲ್ಲರನ್ನೂ ಬರಮಾಡಿ "ನಾಳೆ ಮುಹೂರ್ತವು" ಎಂದಿರುವಾಗ ಯಾವುದು ನೆಗೞ್ದದೋ ಎಂದರೆ—

ಆ ನಗರದಲ್ಲಿ ಮುಂದೊಂದುದಿನ ವಾದದಲ್ಲಿ ಸೋತು ಆಗ ಅವನನ್ನು
ತಳ್ಳಿ ಆ ನಗರವನ್ನು ತೊರೆದಗಲಿಸಿದ ಪಿಂತೆ
ಆ ನಗರದವರಮೇಲೆ ದ್ವೇಷ (ಕೋಪ) ದಿಂದ ಕಾಲಕಳೆದು ಸತ್ತು
ಮತ್ತೊಂದು (ದೋಷದುಷ್ಟ) ಜನ್ಮದಲ್ಲಿ (ರಾಕ್ಷಸನಾಗಿ) ಹುಟ್ಟಿದನು

ಆ ನಗರದಲ್ಲಿ ಮುಂದೊಂದು ನಾಳೊಳ್ ಒಬ್ಬ ಪರಿವ್ರಾಜಕನು(ಯತಿ)ವಾದಿಗಳಿಗೆ ಪತ್ರಾವಲಂಬನಮಾಡೆ ಅವನೊಡನೆ ಅಜಿತನೆಂಬ ರಾಜನು ಜೈನವಾದವನ್ನು ಮಾಡಿ ಜಯಿಸಿದುದನ್ನು ಕಂಡು ನಗರದವರೆಲ್ಲರೂ ಇಳಿದಾಗಿ ತೊರೆಯಲು (ತೊರೆಯಿಸಲು) ಅವರುಗಳ ಮೇಲೆ ಮಡಗಿದ (ವೈತ್ರ) ರೌದ್ರಧ್ಯಾನದಿಂದ ಸತ್ತು ರಾಕ್ಷಸನಾಗಿ ಹುಟ್ಟಿ ಬಹುದೂರ ವಿಹಾರ ಪೋಗಿಬರುತ್ತಿದ್ದವನು, ವಸುಧಾರೆಯೆಂಬ ಆ ನಗರದವರನ್ನು ಕಂಡು ಮುನ್ನಗೆಯ್ದ ಅಪರಾಧಸ್ಮರಣೆಯಾಗಿ ರೌದ್ರಪರಿಣಾಮ ಉದಯಗೆಯ್ಯಲು ಆ ನಗರದವರೆಲ್ಲರನ್ನೂ ಕೋಪದಿಂದಕೊಲ್ಲಬರಲು, ಆನಗರದವರು ರಾಕ್ಷಸನನ್ನು ನಮಸ್ಕರಿಸಿ ಕ್ಷಮೆಗೊಂಡು ಪ್ರಾರ್ಥಿಸಲು ಅವನೂ ಅವರಿಗೆ ಹೇಳುವನು— "ಎಲ್ಲರನ್ನೂ ಒಂದೇಸಲ ಕೊಲ್ಲಬೇಕೆಂದು ಬಂದೆನು; ನಿಮಗಾಗಿ ಕ್ಷಮಿಸಿರುತ್ತೇನೆ; ದಿವಸದಿವಸವೂ (ಪ್ರತಿದಿನವೂ) ಒಬ್ಬನನ್ನು ನೀವು ಕೊಲ್ಲಲು ತರಬೇಕು" ಎಂದು ಹೇಳಲು ನಗರದವರು ನಮಸ್ಕರಿಸಿ "ವರುಷಕ್ಕೊಬ್ಬನನ್ನು ಕೊಡುವೆವು ತೆಗೆದುಕೊ (ಕೊಳ್)" ಎಂದು ಪ್ರಾರ್ಥಿಸಲು ರಾಕ್ಷಸನೂ ಒಡಂಬಟ್ಟು ಅಂದು ಮೊದಲಾಗಿ ವರುಷಕೊಬ್ಬನನ್ನು ತಾವೇ ಕೊಟ್ಟು ಸಲ್ಲುತ್ತಿದ್ದಕಾಲದೊಳಗೆ ಮುಂಡಕೌಶಿಕನೆಂಬ ಬ್ರಾಹ್ಮಣನಿಗೆ (ಮುಱೈ) ಸರದಿ ಬರಲು ಅವನ ಮನೆಗೇ ಬಂದ: ಬಾರಿಯಸನು (ಬಾರಿಕ ಎಂದು ಕನ್ನಡದಲ್ಲಿದೆ) "ನಿಮಗೆ ಈ ವರುಷ ಸರದಿ (ಮುಱೈ) ಬಂದಿದೆ" ಎಂದು ಒರೆದಳವಿಯಲ್ಲಿ ದುಃಖಿತರಾಗಿ ಹೇಗೆ ಹಲುಬಿದರೋ ಎಂದರೆ—

ಮನೆವಾಲ್ತಿಯು ನಿನ್ನನ್ನು ಕೊಟ್ಟರೆ ಮತ್ತೆನಗೆ ಸಲ್ಲದು
ತನಯನನ್ನು ಕೊಟ್ಟರೆ ಧರಿಸಲಾರೆನು ನಿನ್ನಿಲ್ಲ
ಬಟಃ ನಿಲ್ಲಲು ನಿನ್ನ ಮಗನನ್ನು ನೀನು (ವಧುವಿನೊಡನೆ) ಮದುವೆಗೆಯ್ಯಲು
ಅವಕಾಶವಿತ್ತು ಇನ್ನು ನಾನು ಹೋಗುವೆನು—

ಕಾಲವು ಪಲವು ಹೋದಪಿಂತೆ ಪುತ್ರಮುಖವನ್ನು ಕಾಣದಿದ್ದರೆ ಗತಿಯೂ ಮತಿಯೂ ಇಲ್ಲವೆಂದು ವರವನ್ನು ಪಡೆದು ಪೆತ್ತ ಒಂದು ಮಗನನ್ನು ಕೊಟ್ಟರೆ ಹೇಗೆ ಬಾಳುವುದು ? ಎಂದು ಪಿಂತೆಯೂ ಬ್ರಾಹ್ಮಣಿ ಯಾವುದು ಹೇಳಿದಳೆಂದರೆ—

ಪತಿಯನ್ನು (ಆಳರ್)ಕೊಟ್ಟರೆ ಬಾಳಿಲ್ಲ ಅದು ಅಲ್ಲದೆ
ಮಗನನ್ನು ಕೊಟ್ಟರೆ ದೊಡ್ಡ ನಿಂದೆಯಾಗುವುದು
ನನ್ನದು ಹೆಣ್ಣುಹುಟ್ಟು ಅಜ್ಞಾನದ ಮುದ್ದೆ ನಾನು ಹೋಗುವೆನು
ಹೆಣ್ಣಿನ ಬಾಳು ಏತಕ್ಕೋ !

ಇಬ್ಬರನ್ನೂ ಅಗಲಿರಲಾರೆನು ; ಒಬ್ಬರನ್ನು ಕೊಟ್ಟು ಅಪವಾದವನ್ನು ಹೊತ್ತಿರುವುದು ಯೋಗ್ಯವಲ್ಲ, ನಾನೇ ಹೋಗುವೆನು ಎಂದು ಬ್ರಾಹ್ಮಣಿಯೊರೆಯಲು ಮಗನು ಯಾವುದು ಹೇಳಿದನೆಂದರೆ—

ನೀವಿಬ್ಬರೂ ಅಗಲದಿದ್ದರೆ ಉತ್ತಮನಾದ
ಮತ್ತೊಬ್ಬ ಮಗನನ್ನು ಪಿಂತೆ ಹೆರಬಹುದು – ಒದಗಿರುವ
ಪೀಡೆಯನ್ನು ನೀಗಲು ನಾನು ಹೋಗುವೆನು ಬಾಧೆಯುಹೋಗಿ
ಆಯಾಸವನ್ನು ನೀಗಿ ಬಾಳಿರಿ ಅಱುದು—

ಎಂದು ಈ ರೀತಿ ಪುತ್ರನು ಒರೆಯಲು ಕೇಳಿ ಮಹಾಚಿಂತಾಕ್ರಾಂತರಾಗಿ ತಮ್ಮೊಳಗೆಣಿಸಿ ದೈವವನ್ನು ಪ್ರಾರ್ಥಿಸಿ ಪಡೆದವಾದುದರಿಂದ ಆ ದೈವವು ತಾನೇ ಕಾಯುವುದು ಎಂದು ಮಗನನ್ನು ತೆಗೆದುಕೊಂಡುಹೋಗಿ ದೈವಸ್ಥಾನವನ್ನೆಯ್ದಿ ನಮಸ್ಕರಿಸಿ "ನೀನು ಕೊಟ್ಟ ಪುತ್ರನನ್ನು ನಾಳೆ ರಾಕ್ಷಸನು ವಧೆಗೆಯ್ಯಲು ಬರುವನು ನಮ್ಮಿಂದ ಕಾಯಲು ಶಕ್ಯವಿಲ್ಲ; ನೀನೇ ರಕ್ಷಿಸಿಕೊಳ್" ಎಂದು ಅವಳ ಪಕ್ಕದಲ್ಲಿ ಬಿಟ್ಟು ಬಂದು, ಬ್ರಾಹ್ಮಣನು ಬಂಧುಗಳೆಲ್ಲರನ್ನೂ ಕರೆದು ಅವರ್ಗಳಱಿ ವಂತೆ ಸೊಲ್ಲಿಸಿ ನಾನು ಪಡೆದು ಪೊರುಳೆಲ್ಲವೂ ಇದಕ್ಕಾಗಿಯಲ್ಲವೇ ಎಂದು ನೆನೆದು ನನಗೆ ಸಹಾಯವಾಗುವರೆಲ್ಲರೂ ಉಪದ್ರವನಾಶವೂ, ಆಯುರ್ವರ್ಧನವೂ ಆಗಲು ಹೋಮವನ್ನು ಗೆಯ್ಯಬೇಕು ಎಂದು ಗುಣವಂತರನ್ನೂ ವಿದ್ಯಾವಂತರನ್ನೂ ಕೂಡಿಸುತ್ತಿರುವಳವಿನಲ್ಲಿ ಭಟಾರಿಯೂ (ಬಲಹರಿ = ಬಳಾರಿ ಬಟಾರಿ, ಎಂದರೆ ದುರ್ಗಾದೇವಿ) ಯಾವಬಗೆಯಾದಳೋ ಎಂದರೆ—

ನನ್ನನ್ನೆರೆಯಲು (ಎರೆ = ಇರ) ನಾನಿತ್ತ ಪುತ್ರನನ್ನು ಮತ್ತೊರ್ವನು
ಕರ್ಮರಾಕ್ಷಸನು ಬೇಡಿದನಾದರೆ— ಮೊನೆಯಲ್ಲಿ
ಕೊಲ್ಲುವ ಶೂಲದಿಂದ ಸೇರಿ ಅವನನ್ನು ಜಯಿಸುವವಳಾಗಿ
ರೂಪವನ್ನರಿಯಲು ಹೋಗಲು

ದೇವತೆಯು ತನ್ನ ಮನೋಬಲದಿಂದ ಉಬ್ಬಿ(ಪೊಂಗಿ)ಯೆಲ್ದು ಮಲೆಯ ಅಡಿವಾರದಲ್ಲಿ ಪಿರಿಯದಾದಒಂದುಗುಹೆಯೊಳಗೆ ಅವನನ್ನು ಹುಗಿಸಿಟ್ಟು ಬಿಲದ ಬಾಯನ್ನು ಪಿರಿಯ ಶಿಲೆಯಿಟ್ಟು ಅಡಸಿ ರಾಕ್ಷಸನೊಡನೆ ಯುದ್ಧಗೆಯ್ಯಲು ಹೋದಳು. ಈ ಕಡೆ ಬ್ರಾಹ್ಮಣನೂ ಹಲವರನ್ನು ಕೂಡಿಸಿಕೊಂಡು ಬಂದು ಮಗನಿದ್ದ ಬಿಲದ ಪೊಱಗೆ ಸುತ್ತಲೂ ಇದ್ದು ಹೋಮವನ್ನು ತೊಡಗಿ ಆಯುರ್ವರ್ಧನವಾಗಿಯೂ ಶಾಂತ್ಯರ್ಥವಾಗಿಯೂ, ವಿಘ್ನವಿನಾಶವಾಗಿಯೂ, ಯಮನಿಯಮ ಪ್ರಾಣಾಯಾಮ ವಿಧಿಮಾರ್ಗದಿಂದ ಮಂತ್ರಜಪ, ನವಗ್ರಹಶಾಂತಿಯನ್ನೂ ಮಾಡಿಯಿದ್ದನು, ಇದ್ದಪೊಲ್ತು ಏನಾಯಿತೋ! ಎಂದರೆ—

ಆ ದಿವಸ ಆ ಬಗೆಯಲ್ಲಿ ತಾವುತಾವು ಅಱಿತಬಗೆಯಲ್ಲಿ
ಸುತ್ತಲೂ ನೆಱೆದಿದ್ದು ಬಾಧೆಯಗಲುವ ರೀತಿಯಿಂದ
ಆಯುಸ್ಸು ಶಾಂತವು ಅವು ಹೆಚ್ಚುವಂತೆ ಎಣಿಸಿ
ಹೋಗುವಂತೆ ಗೆಯ್ವರು ಇಲ್ಲಿ

ಈ ರೀತಿಯಲ್ಲಿ ಆಯುರ್ವರ್ಧನವೂ ವಿಘ್ನವಿನಾಶವೂ ಆಗಿರುವ ಹೋಮಕ್ರಿಯೆಯನ್ನು ಗೆಯ್ದಿದ್ದರು. ಈ ಕಡೆ ದೇವತೆಯು ವಿಗುರ್ವಣಮಾಯಾ ಬಲದೊಡನೆ ರಾಕ್ಷಸನೊಡನೆ ಯುದ್ಧಂಗೆಯ್ದು ಒಂದು ಹಗಲೆಲ್ಲೆಯಲ್ಲಿ ಜಯಗೊಳ್ಳಲು ರಾಕ್ಷಸನೂ ಪ್ರಸನ್ನನಾಗಿ ನಿನಗಾಗಿ ಇಂದು ತೊಡಗಿ ಕೊಲೆಯನ್ನು ತಪ್ಪಿದೆನು ಎಂದು ಹೋಗಲು ಮಱುದಿವಸ ಮಹಾಘೋರದೊಡನೆ ಭಟಾರಿಯು ಬ್ರಾಹ್ಮಣಸಮೂಹವನ್ನೆಯ್ದಿ ಗುಹೆಯನ್ನೆಯ್ದಿದ್ದು "ನಿನ್ನಮಗನನ್ನು ಕಂಡುಕೊಳ್ಳು" ಎನ್ನಲು ಬ್ರಾಹ್ಮಣನೂ ಮಹಾಸಂತೋಷದೊಡನೆ ಗುಹೆಯೊಳಗೆ ಹುಗುವಳವಿನಲ್ಲಿ ಏನು ನೆಗಲ್ದುದೊ ಎನ್ನಲು—

ಮಲೆಯ ಗುಹೆಯೊಳಗೆ ಬಾಳುತ್ತಿದ್ದೊಂದುಮಾನಾಗವು ಮತ್ತೆ ಆ
ಬಿಲದೆಡೆಯಲ್ಲಿ ಸೇರಿದ್ದವನನ್ನು ಕಂಡು — ತಲೆಯನ್ನು ನೀಡಿ
ಬಾಯಿಂದ ನುಂಗಿಯೇ ಬಾಲ ಆಡಿಸುತ್ತಾ ಸುಯ್ಯುತ್ತಾ
ಬೆಂಕಿಯಂತೆ ಕಣ್ಣು ಬಿಟ್ಟಿತು ಸಂದು—

ಗುಹೆಯೊಳಗೆ ಬಾಳುತ್ತಿದ್ದ ಬಂದು ಮಹಾನಾಗನು ಕ್ಷುಧೆಯಿಂದ ಆಹಾರವನ್ನು ಹುಡುಕಿಕೊಂಡು ಬರುತ್ತಿದ್ದುದು ಇವನನ್ನು ಕಂಡು ನುಂಗಿ ಸುಯ್ದು ಬಾಲವನ್ನಾಡಿಸುತ್ತಾ ಕೆಡೆದಿರುವುದನ್ನು ಕಂಡು ಬ್ರಾಹ್ಮಣನು ಭಯಪಟ್ಟು ಹೊರಗೆ ಬಂದು "ದೈವವೇ, ಹುಲಿಗಂಜಿ ಹುತ್ತೇರಲು ಅದರಲ್ಲಿ ಕೆಡೆದಿದ್ದ ಪಾವುಕಡಿದು ಮರಣಿಸಿದನು ಎನ್ನುವ ಕಥೆಯಾಯಿತು, ರಾಕ್ಷಸನಿಗಂಜಿ ನಿನಗಭಯವನ್ನು ಪೊಕ್ಕು ಕಾವಲೊಡನಿದ್ದ ಎನ್ನ ಮಗನನ್ನು ಪೆರ್ಬಾವು ನುಂಗಿತು" ಎಂದು ಬಾಯ್ಬಿಟ್ಟು ಲರಲು ದೇವತೆಯೂ 'ನಿಯತಿಃಕೇನಲಂಘ್ಯತೆ' ಆಪಮೃತ್ಯುವನ್ನು ಯಾರಿಗೂ ತಪ್ಪಾಗಿ ಆಗಿಸಬಹುದಲ್ಲದೆ ಕಾಲಮೃತ್ಯುವನ್ನು ತೀರಿಸಲು ಬಾರದು ಎಂದು ಹೋಯಿತು—(೨೫)

ಮತ್ತು (ಅನ್ರಿಯುಂ)

ಮರಣವು ತಾನು ಬಂದಕಾಲದಲ್ಲಿ ಮತ್ತೊಂದು ಬಾಳುವ
ಶರಣವುತಾನುಂಟೋ ಹೇಳು – ಬಲವಾದ
ಕರ್ಮವನ್ನು ಕೆಡಿಸುವ ವೀರನಡಿಯಲ್ಲದೆ ಮತ್ತೊಂದು
ನೆನೆವು ಶರಣವುಂಟೋ ನಿನಗೆ – (ಅನ್ರಿಯುಂ)

ಮರವೇಱ ಕೆಯ್ಬಿಟ್ಟರೆ ನೆಲವೇ ಶರಣಾಗುಪವೋಲ್ ಮನುಷ್ಯಗತಿಯಲ್ಲಿ ಹುಟ್ಟಿದವರಿಗೆ ಧರ್ಮವೇ ಶರಣವಲ್ಲದೆ ಪೆಱತುಂಟೋ? ಮರ್ದುಗಳೂ, ಮಂತ್ರಗಳೂ ಉಗ್ರದೇವತೆಗಳೂ, ಕಾಯಬಲ್ಲುವೇ? ಕಾಲನುಬಂದಡರಿದಹೊತ್ತು – ಅಲ್ಲದೆಯುಂ—

ಉದ್ದವಾದ ಮಲೆಯು ಶರಣೋ.......... ?
ಉಕ್ಕುವ ಅಲೆಗಳ ವೇಲೆಯುಳ್ಳ ಸಮುದ್ರ ತಾನು ಶರಣೋ–ಉದ್ದವಾದ
ಬಲವಾದ ಕಾಡುಶರಣವಾಗುವುದೋ ಅಪೇಕ್ಷಿಸುವ ಬಿಲವು ಶರಣೋ ?
ನೀಡಿದ ಶರಣು ಸೊಲ್ಲಿಸು ನಿನಗೆ—

ಯಾವುದೊಂದರಿಂದಲೂ, ಯಾರೊಬ್ಬರಿಂದಲೂ ಶರಣವೂ (ಕಾಪ್ಪು)⁝ ಅರಣವೂ? ಇಲ್ಲದಿರುವುದನ್ನಱದು ಮೆಯ್ವಱಯದಿರ್ಪುದು ಕಾಣ(ಕಣಾ) ಜೀವನೇ—

— ಗದ್ಯ —

ಸಕಲ ವಿಮಲ ಕೇವಲ ಜ್ಞಾನ ಭಗವದರ್ಹತ್ಪರಮೇಶ್ವರ್ರಮುಖೋದ್ಗತಮಾದ
ದ್ವಾದಶಾನುಪ್ರೇಕ್ಷಣೆಯಲ್ಲಿ ಶ್ರೇಣಿಕಮಹಾರಾಜನು ಕೇಳಲು ಗಣಧರ
ಸ್ವಾಮಿಗಳು ದಯೆಗೆಯ್ದು ಎರಡನೆಯದು
ಅಶರಣವೆಂಬ ಅಧಿಕಾರಂ
ಸಮಾಪ್ತಂ....



# ಪ ರಿ ಶಿ ಷ್ಟ ೫

## ಕೆಲವು ವಿಶೇಷ ಪದಗಳ ಅಕಾರಾದ್ಯನುಕ್ರಮಣಿಕೆಯನ್ನನುಸರಿಸಿ ಅರ್ಥವನ್ನು ಕೊಟ್ಟಿದೆ—

| ಶಬ್ದ | ಪು. ಪ. | | ಅರ್ಥ |
|---|---|---|---|
| | ಅ | | |
| ಅಂಕಕಾರ | 50–20 ವ | — | ಯುದ್ಧಶೂರ |
| ಅಗು(ವು)ೞ್ | 110-39 | — | ಒಂದು ಅಕ್ಕಿಕಾಳಿನ ಅನ್ನ |
| ಅಂಗಡಿ | 222–22<br>19–29 | — | ತಳಭಾಗ ಮತ್ತು ಮಾರುವ ಸ್ಥಳ |
| ಅಗ್ಗಳಿಕೆ(ಕ್ಕೆ) | 224–28 ವ | — | ಹೆಚ್ಚಿಗೆ (ಮಹತ್ವ) |
| | 197–30 - | — | ಶ್ರೇಷ್ಠ |
| ಅಜ್ಜಪಜ್ಜರ್<br>ಆರ್ಯಪ್ರಾರ್ಯರ್ (ಸಂ) | 149 32 ವ | — | ತಾತಮುತ್ತಾತಂದಿರು |
| ಅಟ್ಟು | 94–1 ವ | — | ನರಕಲೋಕದಲ್ಲಿರುವ ಸ್ಥಳ |
| ಅಟ್ಟುಂಬರಿ | 221–19 | — | ಆಡಂಬರ, ನಂಬಿಸು ? |
| ಅಡಂಗೊತ್ತು | 190–14 | — | ಅಡಗಿಹೋಗುವಂತೆ ಅಮುಕು |
| ಅಂದುಗೆ | 118–60 | — | ಕಾಲುಬಳೆ |
| ಅಂಧಪಾಷಾಣ | 3–7 ವ | — | ಕುರುಡುಗಲ್ಲು [ಲೋಹಾಂಶವಿಲ್ಲದ ಕಾಡುಗಲ್ಲು] |
| ಅನಿವ | 195–27 ವ | — | ಒತ್ತಾಯ(ನಿರ್ಬಂಧ) ಬಲಾತ್ಕಾರ |
| ಅರೆಗರಿ | 220–18 | — | ಅರ್ಧಬೆಂದಿರುವ |
| ಅಸಿಯ[ದು] | 32–9 | — | ಕೃಶ (ಬಡವ) |
| ಅಸುಂಗೊಳ್ | 49-18 | — | ಭಯಪಡು (ಅಪಾಯ ಶಂಕೆ) |
| ಅಳುರ್ಕೆ | 141–27 ವ | — | ಆವರಿಸಿಕೊಳ್ಳುವಿಕೆ |
| ಅಳ್ಪು (ೞ್ಪು) | 82–14 | — | ಆವರಿಸು |
| ಅಱುನೀರ್ | 81–10 | — | ಒಣಗುವನೀರು |
| ಅಱಿನೀರ್ | 81–10 | — | ಒಣಗುವನೀರು |
| ಅೞ್ಕಾಡು | 27-48 ವ | — | ಸಂಪೂರ್ಣವಾಗಿನಾಶವಾಗು |
| ಅೞ್ಕಿಸು | 104-25 ವ | — | ಜೀರ್ಣಿಸು |
| ಅೞ್ತಿಗಂ | 51–26 | — | ಪ್ರೀತಿಸುವವ |
| | ಆ | | |
| ಆಟಿಸು | 64–1 | — | ಅಪೇಕ್ಷಿಸು |
| [1] ಆಗಳಂತೆ | 89–31 ವ | — | ಸದ್ಯದಲ್ಲೇ |

(1) ತತ್ಕ್ಷಣ, ಏಕಪದ ಸದ್ಯಃ, ಸಪದಿ= ಆಗಳಂತೆ (ಅಭಿಧಾನರತ್ನಮಾಲೆ ಸಾ_ಕಾಂ 124_67)

| ಶಬ್ದ | ಪು. ಪ. | | ಅರ್ಥ |
|---|---|---|---|
| ಆದೇಶ | 144–21 ವ | — | ಮುಂದಾಗುವುದನ್ನು ತಿಳಿಸುವುದು |
| ಆದೇಶಪುರುಷ | 204–46ವ | — | ಮುಂದೆ ಇಲ್ಲಿಗೆ ಬರುವನೆಂದು ಜೋಯಿಸನು ತಿಳಿಸಿದ್ದ ಮಹಾಪುರುಷ |
| ಆಪತ್ತುವಡು | 149-31 ವ | — | ಕಷ್ಟಪಡು (ತೊಂದರೆಪಡು) |
| ಆಯ | 228–38 | — | ಏೞ್ಗೆ(ಅಭಿವೃದ್ಧಿ) (ವಿಶಾಲ) |
| ಆರಯ್ಕೆ | 156–11 ವ | — | ಮೇಲ್ವಿಚಾರಣೆ (ಪೋಷಣೆ ಮತ್ತು ವಿಚಾರಮಾಡುವಿಕೆ) |
| ಆರವೆ (ಆರಾಮ ಸಂ.) | 222–23 | — | ತೋಟ(ಉದ್ಯಾನವನ, ತೋಪು) |
| ಆರ್ಮ | 27–49 | — | ಆಶ್ರಯ (ಆಧಾರ) |
| ಆಸುರ | 229–43 | — | ಭಯಂಕರ (ರೌದ್ರ) |
| ಆಱಡಿ(ಗೊಳ್) | 2–5 | — | ದಾರಿಯಲ್ಲಿ ಅಡ್ಡಬಂದು ಸುಲಿಗೆಮಾಡುವ ಕಳ್ಳ [ದಾರಿಗಳ್ಳ] – ದುಂಬಿ |
| | | ಇ | |
| ಇಡುಕು | 19-24 | — | ವಿರಳ |
| ಇಟ್ಟಳ | 104–25 | — | ಇಕ್ಕಟ್ಟಾದ [ದಟ್ಟವಾದ] |
| ಇರ್ದಲ್ | 220–18 | — | ಅರ್ಥ ಬೆಂದಿರುವ ಸೌದೆ |
| ಇಂಬು | 69–14 | — | [ಅವಕಾಶ] ಉತ್ತಮಸ್ಥಿತಿ |
| ಇಬ್ಬ | 105-31 | — | ವರ್ತಕವಿಶೇಷ |
| ಇಱಿಮುಱಿ | 6-3ವ | — | (ಅನುಕರಣಶಬ್ದ) ತಿರಿಚಿಮುರಿಚಿ ಮುರಿಯುವಿಕೆ |
| ಇೞಯುಂಬೊೞ್ತು | ...... | — | ಸಾಯಂಕಾಲ |
| | | ಉ | |
| ಉಕ್ಕೈವ | 146-25, 175-7ವ, 138-6 | — | ಮೋಸ [ಮಱಿಮಾಚುವುದು] ಉಕ್ಕೈವಮೆಂದು ಪಳಾಳಮೆಂದುತಕ್ಕುಶ.ದ. |
| ಉಡಿಯಿಸು | 59-41 ವ | — | ಹುಣ್ಣಿಗೆ ಮದ್ದು ಮಾಡು |
| ಉತ್ಸರ್ಗ | 153-3 | — | ಮಲಮೂತ್ರಗಳನ್ನು ಬಿಡುವಿಕೆ |
| ಉದ್ಧತಿಕ್ಕೆ | 145–23 | — | ದುರಹಂಕಾರ [ನಮ್ರರಾಗದಿರುವಿಕೆ] |
| [1] ಉರುಗುರಂ | 133-29 | — | ಅಮೇಧ್ಯ [ಮಲ] |
| ಉರುಳಿ | 224-4 | — | ಉಂಡೆ [ಮುದ್ದೆ] |
| ಉರ್ಕಾಳು | 58-40 | — | ಶೂರ |
| ಉರ್ವಿನ | 11-19 | — | ಹೆಚ್ಚಿಗೆ |

(1) ಈ ಶಬ್ದಕ್ಕೆ ಊರಗೂಢಂ ಎಂದು ಪಾಠಾಂತರವುಂಟು. ಅದಕ್ಕೂ ಇದೇ ಅರ್ಥ. ತಮಿಳಿನಲ್ಲಿ ಉರ ಎಂದು ಗೊಬ್ಬರ (ಪ್ರಾಣಿಗಳ ಮಲಮೊದಲಾದುವ) ಕ್ಕೆ ಹೆಸರಿದೆ. [ಉರುಗುವ + ಉರ]

| ಶಬ್ದ | ಪು. ಪ. | | ಅರ್ಥ |
|---|---|---|---|
| ಉಯ್ | 128-16 | — | ಛತ್ರದ ತಪುಡು |
| ಉಳ್ವಾಳು | 58–40 | — | ದಂಡಿನಲ್ಲಿರುವ ಶೂರ |
| ಉಱು | 206–50<br>80–7 | — | ಊರ್ಜಿತವಾಗು [ಬಲವಾಗು] |
| ಉಱಿ | 84-18 | — | ತಂಗುವ ಸ್ಥಳ |
| | ಊ | | |
| ಊಱು | 82–14 | — | ಚುಚ್ಚು [ವ್ಯಾಪಿಸು] |
| | ಎ | | |
| ಎಕ್ಕವಡಂ | 137-4 | — | ಪಾದರಕ್ಷೆ [ಎಕ್ಕಡ] |
| [1]ಎಕ್ಕೆ | 196-22 ವ | — | ಮಂಚದ ಚೌಕಟ್ಟು |
| ಎಗ್ಗ | 13-23 | — | ದಡ್ಡ |
| ಎಡಱು | 201-40<br>119-15 ವ<br>220–17<br>45-5 ವ | | ಬಡತನ, ಹಣದ ನಾಶ, ಅಡ್ಡಿ |
| ಎಡೆ | 229-42 ವ | — | ಅವಕಾಶ [ಸ್ಥಲ, ನಡುವೆ] |
| | ಏ | | |
| ಏತಂ | 152-14 ವ | — | ಭಾವಿಯ ಮಗ್ಗುಲಲ್ಲಿ ಕವಲಗೊಂಬನ್ನು ನೆಟ್ಟು ಅದರಮೇಲೆ ದೊಡ್ಡ ಗಣೆಯನ್ನು ಆಡುವಂತೆ ಜೋಡಿಸಿ ಒಂದು ತುದಿಗೆ ತೊಟ್ಟಿಯನ್ನು ಸೇರಿಸಿ ಅದರಿಂದ ನೀರೆತ್ತುಸುವರು. ನೀರೆತ್ತುವ ಸಾಧನ |
| ಏವ | 110–38<br>177–29 ವ | | [ಹೇವ] ಜುಗುಪ್ಸೆ ಅವಮಾನ |
| ಏಲಗ [ಏಡಕ-ಸಂ] | 105–29 | — | ವರ್ತಕವಿಶೇಷ |
| ಏಱುದಂ | 2–6<br>7–5 | — | ತಿರಸ್ಕಾರಪಡೆದವ |
| ಏಱುದಿಕೆ | 135–84 | — | ತಿರಸ್ಕಾರ |
| | ಐ | | |
| ಐಕಿಲ್ | 148–30 | — | ಮಂಜು [ಹಿಮ] |
| | ಒ | | |
| ಒಟ್ಟೆಯ್ಸು | 154–6 | — | ಅಡಗಿಸು |

(1) ಹರಿಶ್ಚಂದ್ರ ಕಾವ್ಯದಲ್ಲಿ ವೀರಬಾಹುವಿನ ಮಂಚವನ್ನು ವರ್ಣಿಸುವಾಗ ಹಲವೆಲುವಿನೆಕ್ಕೆಗಳ – ಎಂಬ ಪ್ರಯೋಗವಿದೆ. ಎಕ್ಕೆ–ಏಕ ಎಂಬುದರ ತದ್ಭವ, ಎಕ್ಕೆಕ್ಕೆ ಒಂದೊಂದಾಗಿ ಎಂಬ ಅರ್ಥವನ್ನು ಆಧಾರವಾಗಿಟ್ಟುಕೊಂಡು ಏಕ್ಕೆ ಶಬ್ದಕ್ಕೂ ಗುಂಪು ಎಂದು ಅರ್ಥಹೇಳುವರು. ಇಲ್ಲಿರುವ ಪ್ರಯೋಗವನ್ನು ಬಿಟ್ಟರೆ ಎಕ್ಕೆ ಶಬ್ದಕ್ಕೆ ಮಂಚದ ಚೌಕಟ್ಟು ಎಂಬರ್ಥವು ಎಲ್ಲಿಯೂ ದೊರಕದು.

| ಶಬ್ದ | ಪು. ಪ. | | ಅರ್ಥ |
|---|---|---|---|
| ಒಬ್ಬುಳಿ | 91-36<br>105-29 | — | ಒಟ್ಟಾಗಿ |
| ಒಸಗೆ | 73-26 | — | ಮಂಗಳ – ಶುಭ – ಸಂತೋಷ |
| ಒಳ್ಪಾಳು | 58-40 | — | ಶೂರ |
| | | ಓ | |
| ಓಗಡಿಸು | 223-25 | — | ಜಾರಿಕೊಳ್ಳು [ತೊಲಗು] |
| ಓವರಿ | 103-22 ವ | — | ಕೋಣೆ[ಕಿರುಮನೆ] |
| | | ಕ | |
| ಕಟ್ಟಿಪಟ್ಟ | 48-15 ವ | — | ಬಂಧಿಸಲ್ಪಟ್ಟ [ಕರ್ಮಣಿ ಪ್ರಯೋಗ ಗಮನಿಸತಕ್ಕುದು] |
| ಕಟ್ಟಿಱುಂಪೆ | 180-38 | — | ದೊಡ್ಡ ಇರುವೆ (ಕಟ್ಟಿರುವೆ) |
| ಕಡಿತಲೆ | 153-2 ವ | — | ಕತ್ತಿ |
| ಕಣ್ಬಾಡು | 202-41 | — | ಬಯಸು, ಆಸೆಪಡು [ಕಣ್ಣಿಡು] |
| ಕಣ್ಬಾವು | 202-42 ವ | — | ಬಯಸು |
| ಕಡಂಗು | 71-20 | — | ಉತ್ಸಾಹಗೊಳ್ಳು |
| ಕಪ್ಪಡ | 192-34 ವ | — | ಚಿಂದಿಬಟ್ಟೆ |
| ಕಮ್ಮನೆನಾರ್ | 147-26 ವ | — | ಸುವಾಸನೆಯನ್ನು ಬೀರು |
| ಕರ್ಬೊನ್ | 81-11 ವ | — | ಕಬ್ಬಿಣ |
| ಕಲಸಂಗೂೞ್ | 199-35 ವ | — | ಮೊಸರು ಅನ್ನ [ದಾರಿಯ ಬುತ್ತಿ ಅನ್ನ] |
| ಕಲ್ನೆಲೆ | 162-29 ವ<br>144-21 | — | ಕಲ್ಲಿನ ಮೇಲೆ ನಿಂತು ತಪಸ್ಸುಮಾಡುವಿಕೆ |
| ಕಸವರಂ | 8 – 9 ವ | — | ದ್ರವ್ಯ – [ಹಣ] |
| ಕಱುಕುಚಿಗ | 202-42 ವ<br>202-43 ವ | — | ಕರುಗಳನ್ನು ಕಾಯುವ ಆಳು [ವತ್ಸಪಾಲಕ – 203 - 44] |
| ಕಱು | 194-24 | — | ನೊಗದ ರಂಧ್ರದಲ್ಲಿ ಜೋಡಿಸುವ ಮರದ ಗೂಟ [ತಮಿಳ್ ಶಬ್ದ] |
| ಕಾರುಕ | 86-24 | — | ಬಡಗಿ ಅಕ್ಕಸಾಲೆ ಮೊದಲಾದವರು |
| ಕಾಸೆ | 89-32 | — | ಕಾಷಾಯಬಟ್ಟೆ |
| ಕಾಟ್ಪುರ | | | (ಕಾಡ+ಪೂರ)-ಕಾಡಿನಲ್ಲಿ ಹರಿವ ತೊರೆ |
| ಕಿತ್ತಡಿ | 163-29 ವ | — | ಯತಿ-[ವ್ರತವನ್ನು ಹಿಡಿದಿರುವವ] |
| ಕಿತ್ತಯ್ಯ | 91-35 ವ | — | ಚಿಕ್ಕ ಸನ್ಯಾಸಿ |
| ಕಿಂಪಾಕ ಫಲ | 139-9 | — | ವಿಷದಂತೆ ತಿಂದವನನ್ನು ಕೊಲ್ಲುವ ಹಣ್ಣು |
| [1] ಕಿರಿ [ತಲೆ-ಗಿರಿ] | 89-32 | — | ತಲೆಗೂದಲನ್ನು ತೆಗೆದು |

(1) ತಲೆಯಂ ಕಿರಿಯಿಸಿ ದೆವಸಮು। ನಲಸದೆ ಬೆಸಗೊಳ್ವಸಂತುಗಾವಿಲನಕ್ಕುಂ (ಕವಿರಾಜ 3 – 114)

| ಶಬ್ದ | ಪು. ಪ. | | ಅರ್ಥ |
|---|---|---|---|
| ಕಿಸುಗಳ | 48-15 ವ<br>76-31 | — | ಹೇಸಿಗೆ - [ಅಲ್ಪ ಮನುಷ್ಯ] |
| ಕಿಸುಗುಳನಾರು | 147-26 ವ | — | ದುರ್ಗಂಧವನ್ನು ಬೀರುವ |
| ಕೀಲ್ | 153-4 ವ | — | ಬಾಗಿಲಿಗೆ ಹಾಕುವ ಅಗಣಿ [ಮೊಳೆ-ಗೂಟ] |
| ಕೀೞು | 202-42 ವ | — | ಒತ್ತಾಯಮಾಡು |
| ಕೀೞಾಲ್ | 201-40 ವ | — | ಕೆಳಗಡೆ [ಹಿಂದುಗಡೆ] ಮನೆ |
| ಕುಡುಗೋಲ್ | 180-31 | — | ಅರ್ಧಚಂದ್ರನಂತೆ ವಕ್ರವಾಗಿರುವ ಪದಾರ್ಥಗಳನ್ನು ಕುಯ್ಯುವ ಕತ್ತಿ [ಕೊಂಕಾದ + ಕೋಲ್] |
| ಕೂಂಟಣಿ(ಕುಟ್ಟನೀ-ಸಂ) | 147-27 | — | ಸೂಳೆಯರ ಹತ್ತಿರ ಒತ್ತೆಯನ್ನು ತೆಗೆವ ಹೆಣ್ಣಾಳು |
| ಕುದಿೞು | 49-18 ವ | — | ನೆಲದಲ್ಲಿ ಧಾನ್ಯಗಳನ್ನು ತುಂಬಿಡಲು ಮಾಡಿರುವ ಹಳ್ಳ |
| ಕುೞಿ | 161-25<br>156-13 ವ | — | ಹುತ್ತ - [ಹಳ್ಳವಾಗು] |
| ಕೂರ್ಗತ್ತಿಗೆ | 182-43 | — | ಹರಿತವಾದ ಕತ್ತಿ |
| ಕೆಯ್ವಾ[ಕೈ]ವಾರ- | 68-10 | — | ಸ್ತೋತ್ರ |
| ಕೆಯ್ಗಟ್ಟ | 109-38 ವ | — | ಕೈಗೆ ಸವರಿಕೊಳ್ಳುವ ಸುವಾಸನೆವಸ್ತು |
| ಕೂಚಿಪತ್ರ | 197-30 | — | ವಿಷಯವನ್ನು ಬರೆದಿಟ್ಟಿರುವ ಪತ್ರ |
| ಕೆೞಂಕು | 87-28 | — | ಮೈನವೆ |
| ಕೆಲ್ಲಯ್ಸು | 174-23 | — | ಹೆದರಿಕೆಯಿಂದ ನೋಡುವ ನೋಟ |
| ಕೈಪೆ | 172-17 | — | ಕಹಿ ಉಪ್ಪು ಕಾರ ಮೊದಲಾದ ಆರು ರಸಗಳಲ್ಲಿ ಒಂದು ರಸ |
| ಕೊೞ್ಕಿಸೞು | 81-10 | — | ದಟ್ಟವಾದ ಕೆಸರು |
| ಕೋೞ | 196-29 ವ | — | ಮರದಿಂದ ಮಾಡಿದ ಒಂದು ಉಪಕರಣ [ಪೂರ್ವ ಕಾಲದಲ್ಲಿ ಬಂದಿಕಾರನಿಗೆ ಕೈಗೆ ತೊಡಿಸುತ್ತಿದ್ದ ಉಪಕರಣ]— |
| ಕೋಣೆ [ಕೋಣ - ತ್ಸ] | 146-24 | — | ಮೂಲೆಯಲ್ಲಿರುವಮನೆಯಭಾಗ [ಕಿರುಮನೆ] |
| ಕೋೞ್[ೞ್] | 54-31 ವ<br>79-3<br>32-8 ವ | — | ಬೇಟೆಯಾಡಿ ಕೊಲ್ಲುವ ಪ್ರಾಣಿ—ಹೊಡೆತ |
| ಕೋಳ್ಪಡು | 159-21 | — | ದೋಚಲ್ಪಡು [ಕರ್ಮಣಿ ಪ್ರಯೋಗ] ಗಮನಾರ್ಹ |
| ಕ್ರಮ [ಕ್ರಮುದವರ್] | 122-67 ವ | — | ಹಕ್ಕುದಾರರು (ಜ್ಞಾತಿಗಳು) [ಪಾಲುಗಾರರು] |

ಗ

| | | | |
|---|---|---|---|
| ಗಗ್ಗರ | 118-60 | — | ಕಾಲುಬಳೆ |

| ಶಬ್ದ | ಪು. ಪ. | | ಅರ್ಥ |
|---|---|---|---|
| ಗಂಟಿ | 31–5 ವ | — | ಹಸು [ ಸ್ವೇಚ್ಛೆ ತಿರುಗುವ ಹಸು ] [ ಪೋಲೀಹಸು ] |
| ಗಸಟು | 218–12 ವ | — | ದ್ರವವಸ್ತು[ತುಪ್ಪ ಮೊದಲಾದುವು]ವನ್ನು ಶೋಧಿಸಿದರೆ ತಳದಲ್ಲಿ ನಿಲ್ಲುವ ಕೊಳೆ–[ಕಶಂಡು — ತಮಿ — ಗಸ್ಸು —ವ್ಯಾವ] |
| ಗಟಿ | 130–22 | — | ಬಿದಿರ ಬಂಬು |
| ಗಾವಿಲಿಕೆ<br>ಗಾವಿಲ | 125–7 ವ | — | ವಿದ್ಯಾಹೀನತೆ [ಪಾಮರ] [ಹಳ್ಳಿಗಾಡಿನವ] |
| ಗಾವುಂಡಂ | 201–39 | — | ನೆಲವನ್ನುತ್ತು ಜೀವಿಸುವ ಜಾತಿಯವ |
| ಗಾವುಂಡಿ | ,, | — | ಗಾವುಂಡನ ಹೆಂಡಿತಿ |
| ಗುಡಿಸಿಲ್ | 201–40 ವ | — | ಎಲೆವನೆ [ಕುಡಿಶಿಯ್-ತಮಿಳು] |
| ಗುಣ್ಪು | 163–30 ವ | — | ನೀರಿನ ಆಳ |
| ಗುದ್ದು | 7–5 | — | ಗುದ್ದುವಿಕೆ - [ಕೈಮುಷ್ಟಿಯಿಂದ ಹೊಡೆಯುವುದು] |
| ಗೂಱುಮಾಱಾಳಿ | 157–15 ವ | — | [ಒಂದು ವಸ್ತುವನ್ನು ಕೊಟ್ಟು ಮತ್ತೊಂದನ್ನು ಕೊಳ್ಳುವವರು, ವಸ್ತುವಿನಿಮಯಗಾರರು] |
| ಗೊಜ್ಜಗೊಜ್ಜರು | 163–30 ವ | — | [ಅಜ್ಜಪಜ್ಜರ ಜತೆಯಲ್ಲಿ ಅರ್ಥಪೋಷಕ್ಕೆ ಬಂದಿರುವ ನಿರರ್ಥಕ ಶಬ್ದ] ? |
| ಗೊಂದೆ | 81–10 | — | ಹಸು ಅಥವಾ ಎತ್ತು |
| ಗೊಡ್ಡ<br>ಗೊಡ್ಡಾಟ | 91–36<br>199–35ವ | — | ಪುಂಡುತನ – [ದಾರ್ಷ್ಟ್ಯ] |
| ಗೊರವಬ್ಬೆ | 89–32 | — | ಸನ್ಯಾಸಿನಿ |
| ಗೋಸಣೆ | 9–11 | — | [ಘೋಷಣ-ತ್ಸ] ಸಾರಿ ಹೇಳುವಿಕೆ |
| ಗೌತ | 105–30 | — | ವರ್ತಕವಿಶೇಷ |
| ಘಟಿಯಿಸು [ಘಟಿಸು-ತ್ಸ] | 194–24 | — | ಸೇರಿಸು |

ಚ

| | | | |
|---|---|---|---|
| ಚವಸ್ಮಾವುಗೆ | 108-37 ವ | — | ಎಕ್ಕಡ |

ಜ

| | | | |
|---|---|---|---|
| ಜಲ್ಲಮಲ | 50-22 | — | ಮೈಕೊಳೆ |
| ಜಾಮಿಸಿ | 121-66 ವ | — | ಶವವನ್ನು ದಹಿಸಿ–[ಶವಸಂಸ್ಕಾರ ಮಾಡಿ] |
| [1] ಜೂಂಟರ್ | 7-5<br>68-10 | — | ಮೋಸಗಾರರು |

(1) ಆದಿ ಪುರಾಣದಲ್ಲಿ ಜಟಮಟಕರ್ಕಳ್ (ಮೊಂಡಪಕೀರಿ_ವ್ಯಾವ)

| ಶಬ್ದ | ಪು. ಪ. | ಅರ್ಥ |
|---|---|---|
| ಜೋಕುವರ ? | 8-7 | — [ ಯುವಕುಮಾರ - ಯುವರಾಜ— ಇರಬಹುದೇ ? ] |
| | ಝ | |
| ಝುಲ್ಲಱ [ಳ] | 94-1 | — ಜಲಡೆ [ಒಂದರಿ] |
| | ಠ | |
| ಠಕ್ಕ | 30-4 | — ಮೋಸಗಾರ |
| | ಡ | |
| ಡಾವರಿಗ [ಡಾಮರ-ತ್ಸ] | 158-16 | — ರಾಜನುಮಾಡುವ ಪ್ರಜೆಗಳ ಆಸ್ತಿಯ ಸೂರೆಗೆ ಡಾಮರವೆಂದು ಹೆಸರು ಅದನ್ನು ಮಾಡುವವ — ಸೂಱೆಗಾರ, |
| ಡಾಮರ | 73-25ವ | — ರಾಜನಸೂಱೆ |
| ಡಾಳೆಯರ್ | 27-35 ವ | — ಮೋಸಗಾತಿಯರು [ಚತುರೆಯರು] |
| ಡೊಂಬಿಸು | 69-14 | — ಮೋಸಮಾಡು |
| ಡೊಣೆ | 144-21 | -ಬೆಟ್ಟದಮೇಲೆ ತಾನಾಗಿ ನಿಂತಿರುವಭಾವಿನೀರು |
| | ತ | |
| [1] ತಕ್ಕೂರ್ಮೆ | 127-14 | — ಉಚಿತವಾದ ಪ್ರೀತಿ ? [ ಕೃತಜ್ಞತೆ ] |
| ತ(ಟ)ಗರು(ಱು) | 196-28ವ | — ಗಂಡುಗುಱಿ |
| ತಗುಳ್ಪು | 73-26 | — ಸೇರಿಕೊಳ್ಳುವುದು |
| ತಗೆಪು | ......... | — ಸಾಲದ (ಋಣದ) ನಿರ್ಬಂಧ |
| ತಲೆನೀರ್ | 195-26 ವ | —ಋತುವಾದವರು ನಾಲ್ಕನೆದಿನಮಾಡುವಸ್ನಾನ |
| ತವಿಲ್ | 222-24 | — [ತವುಕ್ಷಯೇ ಧಾತು-ಭಾವನಾಮ] ಸ್ನಾನ |
| ತ [ತೆ] ಱಂಬು | 50-22, 113-46 ವ | — ನೊರಜು ಕಲ್ಲಿನ ನೆಲ |
| ತಿಣ್ಣಂ [ತೀಕ್ಷ್ಣ-ತ್ಸ] | 195-27 ವ, 140-12 | — ದಟ್ಟವಾದ, ಪ್ರಬಲವಾದ |
| ತುಡುಗುಣಿ | 141-14 ವ | — ತುಡುಗನ್ನು ಉಣ್ಣುವುದು-ಕದ್ದುತಿನ್ನುವವ |
| ತುಯ್ಯಲ್ | 202-42 | — ಪಾಯಸ |
| ತೂಂಬು | 163-30 ವ | — ಕೆಱೆ ಮೊದಲಾದ ನಿಂತ ನೀರಿನ ಜಲಾಶಯಗಳಲ್ಲಿ ನೀರನ್ನು ಹೊರಗೆ ಗದ್ದೆಗಳಲ್ಲಿ ಹಾಯಿಸಲುಮಾಡಿರುವ ರಂಧ್ರದಕಾಲಿವೆ |

(1) ಕೂರ್ಮೆ, ಕೂರ್‌ಸ್ನೇಹೇ ಎಂಬ ಧಾತುವಿನ ಭಾವನಾಮ, ಸ್ನೇಹವೆಂದೂ ಪ್ರೀತಿಯೆಂದೂ ಅರ್ಥ— ತಕ್ಕೂರ್ಮೆಯುಂ ಕೂರ್ಮೆಯುಂ ಎಂದು ಒಟ್ಟಿಗೆ ಪ್ರಯೋಗವಿದೆ.

| ಶಬ್ದ | ಪು. ಪ. | | ಅರ್ಥ |
|---|---|---|---|
| ತೆ [ನಿಪಾತ] | 104-25 | — | ಛೀ ! ಎಂಬಧಿಕ್ಕಾರಸೂಚಕ |
| ತೆಪ್ಪ | 148-30ವ | — | ನದಿಯನ್ನು ದಾಟುವುದಕ್ಕೆ ಉಪಯೋಗಿಸುವ ಸಾಧನ. |
| ತೆರಳಿ (ತೆರಳಿಯಪುೞು) | 140-10 ವ | — | ರೇಷ್ಮೆದಾರ ಮಾಡುವ ಹುಳು |
| ತೆಳ್ಪು | 264-32 ವ | — | ಕೊಳೆಯು ಹೋಗಿ ತಿಳಿಯಾಗಿರುವಿಕೆ [ಶಾಂತಿ] |
| ತೊಂಗಲು | 212-63 ವ | — | ಹೂವಿನ ಅಥವಾ ಚಿಗುರಿನ ಗೊಂಚಲು |
| ತೌಡು [ತವುಡು] | 225-30 ವ | — | ಭತ್ತದ ಸಣ್ಣ ಹೊಟ್ಟು |
| ತೊಡೞು | 27-49 | — | ಸುತ್ತಿ ಬಿಗಿಯುವಿಕೆ |
| | | ದ | |
| [1] ದಂಡು | 208-53 | — | ಕೋಲು |
| ದರಿ | 6-2 | — | ನೀರಿನ ಕೊಳ್ಳಿ [ನದಿಯ ಆಚೀಈಚೆ ಹಳ್ಳ ಬಿದ್ದಿರುವ ಕೊರಕಲು] |
| ದಸಿ | 150-33 | — | ಚುಚ್ಚುವ ಚಿಕ್ಕದಾದ ಆಯುಧ |
| ದಾರವಂದ | 153-4 | — | [ದ್ವಾರಬಂಧ-ತ್ಸ] ಬಾಗಿಲಚೌಕಟ್ಟು |
| ದೂಸಱು | 8-7 | — | ಕಾರಣ [ನಿಮಿತ್ತ] |
| ದೇಸಿಗ | 86-24 | — | ತಿರಿಪೆಯವ |
| ದೇಹಾರ | 88-31 ವ | — | ದೇವಸ್ಥಾನ |
| | | ನ | |
| ನಣ್ಪು | 68-12 | — | ನಂಟತನ [ಸ್ನೇಹ] |
| ನಾಣಿಲಿ | 82-12 | — | ನಾಚಿಗೆಯೆ ಇಲ್ಲದವ |
| ನಿಬುದ್ಧ | 210-58 | — | ಬುದ್ಧಿಯಿಲ್ಲದವ |
| ನೀಱುಂಬಿ | 121-66 ವ | — | ಸತ್ತವರಿಗಾಗಿ ಮಾಡುವ ಸ್ನಾನ [ಸಂ – ಅಪಸ್ನಾನ – ಎಂದು] |
| ನೀಡಱದು | 10-14<br>118-61 ವ | — | ಹೊತ್ತು [ಕಾಲ] |
| ನೆಲವಟ್ಕೆ | 120-14 | — | ನೆಲದಲ್ಲಿ ಹಾಸಿರುವ ಹಾಸುಗೆ [ಮಂಚ ಮೊದಲಾದ ಎತ್ತರ ಸ್ಥಳದಲ್ಲಿಲ್ಲದಿರುವುದು ಎಂದು ಭಾವ] |
| ನೆಱ | 82-12 | — | ಮರ್ಮಸ್ಥಳ |

(1) ಶಬ್ದಾನುಶಾಸನವೆಂಬ (16 ನೆಯ ಶತಮಾನದ) ಕನ್ನಡ ವ್ಯಾಕರಣದಲ್ಲಿ–ಉದ್ರೂಪದ್ಯ–ಎಂಬ ತದ್ಭವವ ಸೂತ್ರದ ವ್ಯಾಖ್ಯಾನದಲ್ಲಿ ತಥಾದಂಡಬಿರುದ ಶಬ್ದಯೋರಪಿ (ಉತ್–ಉಕಾರಾಂತವಾಗುವಿಕೆ) ದೃಶ್ಯತೇ ಎಂದು ಹೇಳಿ – ದಂಡು ಸೊರೆಭೂತಿ ರುದ್ರಾಕ್ಷಂ – ಎಂಬ ಪಾರ್ಶ್ವನಾಥಪುರಾಣದ ಕಂಡವನ್ನುದಹರಿಸಿರುವರು, ಇದು ಮತ್ತೊಂದು ಉದಾಹರಣವಾಗಿರುವುದು—

| ಶಬ್ದ | ಪು. ಪ. | | ಅರ್ಥ |
| --- | --- | --- | --- |
| ಸೊಚ್ಚಿತು | ………… | — | ಹಗುರ |
| ನೊಂಚವು [ಗಳ್] | 180–39 | — | ನೊಣ [ನೊಂಚವು ಎಂಬ ವುಕಾರಾಂತ ರೂಪವು ಗಮನಾರ್ಹ] |
| | | ಪ | |
| ಪಂಚಶಯ್ಯೆ | 120–14<br>99–9 ವ<br>[ಅಂಡಜ] | — | ಹತ್ತಿ, ಉಣ್ಣೆ ಮೊದಲಾದ ಐದು ಬಗೆ ಮೆತ್ತನೆಯ ವಸ್ತುಗಳಿಂದ ಮಾಡಿದ ಹಾಸುಗೆ [ಸುಪ್ಪತ್ತಿಗೆ] |
| ಪಚ್ಚವಡ | 132–78 ವ | — | ಸ್ನಾನದ ನೀರು ಹೋಗುವ ಬಚ್ಚಲು |
| ಪಚ್ಚಿಕೊಳ್ | 45–6 | — | ಹಂಚಿಕೊಳ್ಳು [ಪಾಲುಮಾಡಿಕೊಳ್ಳು] |
| ಪಟ್ಟೀಸ | 112–44 ವ | — | ಬಟ್ಟೆಗಳನಿಟ್ಟಿರುವ ಪೆಟ್ಟಿಗೆ |
| ಪಡಿ | 153–4 ವ | — | ಬಾಗಿಲ ಕದ |
| ಪಡುಕೆ | 132–74 | — | ಕೆಟ್ಟನಾತ [ದುರ್ವಾಸನೆ] |
| ಪಡೆವಾತು | 116–55 | — | ಜನವಾರ್ತೆ |
| ಪಾರ್ಪ | 56–36 ವ | — | ಒಳ್ಳೆಯ ವಾಸನೆಗುಡುವ |
| ಪಣಿದ | 117–50 ವ | — | ಹೋರಾಟ |
| ಪತಿವ್ರತಿಕ್ಕೆ | 222–38 | — | ಗರತಿತನ [ಇಲ್ಲಿ ಭಾವಾರ್ಥದಲ್ಲಿ ಸಂಸ್ಕೃತ ಶಬ್ದದಮೇಲೆ ಇಕ್ಕೆ ತದ್ಧಿತಪ್ರತ್ಯಯ ಬಂದಿರುವುದು ಗಮನಾರ್ಹ] |
| ಪದುಳ [ಪದುಳಿಗಂ] | 177–29 ವ<br>175-25 ವ | — | ಕ್ಷೇಮ–ಕ್ಷೇಮದಿಂದಿರುವವ |
| ಪರದು | 104–26 ವ | — | ವ್ಯಾಪಾರ |
| [1] ಪಯ | 218–12 ವ | — | ಕರುಹಾಕಿ ಸ್ವಲ್ಪಕಾಲಮಾತ್ರ ಈಗಿರುವ ಹಸು [ಸಂ–ಧೇನುಃನವಸೂತಿಕಾ] |
| ಪರಲ್ | 120-14 | — | ಸಣ್ಣಸಣ್ಣ ಕಲ್ಲುಗಳು [ರತ್ನವೆಂದೂ ಅರ್ಥ] |
| ಪರಿವಿಡಿಗೊಳ್ | | — | ಓದು [ಹೇಳಿದುದನ್ನು ಹೇಳು] |
| ಪರು(ವ)ಣೆ ? | | — | ಕಾದಿ ? |
| ಪರ್ಯುಷ್ಟಿ | 112-44 ವ | — | ಸನ್ಯಸನ ಪ್ರತ್ಯಾಖ್ಯಾನ |
| ಪಸ | 6-3 ವ<br>73-25 ವ | — | ಬಱಗಾಲ [ದುರ್ಭಿಕ್ಷ] |

(1) ಈ ಶಬ್ದವು ಹಳಗನ್ನಡದಲ್ಲಿ ಕ್ರಮೇಣ ಕರುಹಾಕಿರುವ (ಮರಿಹಾಕಿರುವ) ಪಶುಮೃಗಗಳೆಲ್ಲಕ್ಕೂ ವಾಚಕವಾಗಿರುವ ಪ್ರಯೋಗಗಳು ಕಾವ್ಯಗಳಲ್ಲಿ ಉಂಟು ಪಯವುಲಿಗಳ್ (ಕಾವ್ಯಾವಲೋಕ) ಪಯುಗರಡಿಗಳ್ (ಲೀಲಾವತಿ) ಇದರಂತೆ ತಮಿಳಿನಲ್ಲಿಯೂ ವಯಪ್ಪುಲಿ ಪ್ರಯೋಗವಿದೆ. ಅದನ್ನು ಅವರು ವಯಶಬ್ದಕ್ಕೆ ಬಲಶಾಲಿ ಎಂಬರ್ಥದಲ್ಲಿ ವ್ಯವಹರಿಸುವರು– ಆದರೆ ಮರಿಹಾಕಿದ ಹುಲಿ ಎಂದು ಹೇಳುವುದು ನ್ಯಾಯವೆಂದು ತೋರುವುದು. ತಮಿಳಿನಲ್ಲಿ ಪಯಶಬ್ದಕ್ಕೆ ಹೆತ್ತ ಎಂಬರ್ಥವುಂಟು – ದಶರರ್ಥ ಪಯನ್ರ ಕಾಳೆ (ದಶರಥನು ಹೆತ್ತ ಗೂಳಿಯಂತಿರುವ ಮಗ) ಎಂಬ ಪ್ರಯೋಗವಿದೆ—

| ಶಬ್ದ | ಪು. ಪ. | | ಅರ್ಥ |
|---|---|---|---|
| ಪಸು (ಸಿ) | 150-33(2) | — | ವಿಭಾಗಿಸು (ಪಸಿ=ಕತ್ತರಿಸು) |
| ಪಱಿಪಟ್ಟು | 218-12 ವ | — | ಮುದಿಯಾಗಿ ಕೆಳಗೆ ಬಿದ್ದುಹೋಗು [ಉದಿರು] |
| ಪಱುಗೋಲ್ | 91-36 ವ | — | ಚರ್ಮದಿಂದ ಮಾಡಿರುವ ನೀರನ್ನು ದಾಟುವ ಉಪಕರಣ |
| ಪಱೆ | 145-23 ವ | — | ತಮ್ಮಟೆ (ಹೊಲೆಯರಿಗೆ ನಿಯತವಾದ ವಾದ್ಯ) |
| ಪೞಿ | 8-9 | — | ನಿಂದೆ (ಕೆಟ್ಟಹೆಸರು) ಬಯ್ಯುಗುಳ |
| ಪಾಂಗು | 110-40 | — | ರೀತಿ |
| ಪಾೞಿ + ಗೆಡು | 22-39<br>208-55<br>223-27<br>13-23 | — | ಕ್ರಮ [ಹಕ್ಕುಬಾಧ್ಯತೆ] ಮಾಡಲೇಬೇಕಾದ ಕಾರ್ಯಕರ್ತವ್ಯ, ಸಂಪ್ರದಾಯ, ಧರ್ಮ |
| [ಪೆ]ಪಿಲ್ಲಿಸಿ | 38-23 | — | ಹಿಂಸಿಸಿ ? |
| ಪುಟ್ಟಿ | 94-1 ವ | — | ಜೇನುಗೂಡು |
| ಪುಟ್ಟಿಗೆ | 112-44 ವ | — | ಹೂವನ್ನು ತರುವ ಬಿದಿರ ಬುಟ್ಟಿ |
| | 148-30 | — | ಬಟ್ಟೆ [ವಸ್ತ್ರ] |
| ಪುಡಿಕೆ | 226-33 | — | ಭರಣಿ |
| ಪುದುವಾೞಿ | 91-36 ವ<br>194-25 | — | ಸಂಸಾರವಮಾಡಿಕೊಂಡು ಬಾಳು [ಗಂಡನೊಂದಿಗೆ ಜೀವನ ನಡೆಸುತ್ತಿರು] ಒಟ್ಟಿಗೆ ಸೇರಿ ಜೀವಿಸುವುದು |
| ಪುಯ್ಯಲ್ | 20-37 ವ | — | ದುಃಖದಿಂದ ವಿಕಾರಧ್ವನಿಯಲ್ಲಿ ಕೂಗು |
| | 60-44 | — | |
| ಪುಷ್ಪವಾಸ [ಅಕ್ಕಿ] | 107-35 ವ | — | ಹೂವಿನ ವಾಸನೆಕಟ್ಟಿದ [ಅಕ್ಕಿ] |
| ಪುಳ್ಳಿ | 148-30 ವ | — | ಮರದಿಂದ ಉದಿರಿದ ಒಣಗಿದ ಕಡ್ಡಿ |
| ಪೆರ್ಪೈತ್ತಿಕ | 172-17 | — | ದೊಡ್ಡದಾದ ಪಿತ್ತವ್ಯಾಧಿ [ಪಿರಿದಾದ ಪೈತ್ತಿಕ] |
| ಪೆಱಉೞಿ | 220-17 ವ | — | ಬೇಱೊಂದುಕಡೆ |
| ಪೆಱೆ | 31-7 | — | ಒಂದೆರಡು ಕಳೆಯುಳ್ಳ ಚಂದ್ರ |
| ಪೆಪ್ಪು [ಹೊಸ,ಕ-ಹೆಪ್ಪು]. | 218-12 ವ | — | ಹಾಲಿಗೆ ಅದು ಗಟ್ಟಿಯಾಗಿ ಮೊಸರಾಗಲು ಸೇರಿಸುವ ಸ್ವಲ್ಪ ಮಜ್ಜಿಗೆ |
| ಪೊಂಕ | 117-56 | — | ಗರ್ವ [ಶೌರ್ಯ] |
| ಪೊಡರ್ಪು [ಗಿಡಿಸು] | 27-49 | — | ಶಕ್ತಿಯನ್ನು ಕುಂದಿಸು [ಅಡಗಿಸು] |
| ಪೊಚ್ಚಂ | 170-13 | — | ಹೊಸದು |
| ಪೊಟ್ಟು | 26-46 | — | ಭತ್ತ ಮೊದಲಾದ ಧಾನ್ಯಗಳಮೇಲಿರುವ ತೆಳುವಾದ ಪೊರೆ |
| ಪೊರೆ | 98-9 | — | ಪಕ್ಕ [ಪದರ] |
| ಪೊಲಂಬು | 79-4 ವ | — | ದಾಱಿ |

| ಶಬ್ದ | ಪು. ಪ. | | ಅರ್ಥ |
|---|---|---|---|
| ಪೊಲಗೆಟ್ಟು(ಪೊಲಬಂ + ಕೆಟ್ಟು) | 177-30ವ | — | ದಾರಿಗಾಣದೆ [ಮುಂದುಗಾಣದೆ] |
| ಪೋಟಲ್ | 162-29 ವ | — | ಮರದ ಪೊಟ್ಟರೆ |
| | | ಬ | |
| ಬಟ್ಟ(ಸಂ–ವೃತ್ತ) | 81-11 ವ | — | [ವರ್ತುಳ] ಗುಂಡು |
| ಬಂಡಂ | ........... | — | ಪದಾರ್ಥ |
| ಬಮ್ಮೇತಿ [ಸಂ-ಬ್ರಹ್ಮಹತಿ] | 180-37 ವ | — | ಬ್ರಾಹ್ಮಣನನ್ನು ಕೊಂದ ಪಾಪ |
| ಬಯ್ಗಿರುಳ್ | 57-38 | — | ಪ್ರಾತಸ್ಸಂಜೆ |
| ಬರ್ಚು | 84-19 | — | ಬೆಂಕಿ ಆರಿಸು |
| ಬವಣಿಗೆ | 75-30 | — | ಸುತ್ತುವುದು |
| ಬಱಯಿಲ್ | 130-22 | — | ಪಕ್ಕದಮೂಳೆ (ಎಲುಬು) |
| ಬಾಗು | 110–41 ವ | — | ಬೇಯಿಸು (ಬಗ್ಗು) |
| ಬಾಣಸಿಗ | 25–46 ವ | — | ಅಡುಗೆಯವ(ಮಹಾಸನ ಸಂ-ಅಡುಗೆಮನೆ] |
| ಬಾರಿ<br>ಬಾರಿಕ | 38-23 ವ | — | ಸರದಿ<br>ಸರದಿಯನ್ನು ಎಚ್ಚರಿಸುವವ |
| ಬಾವು [ದಿವಸ] | 232-52<br>56-36 | — | ಬಲಿಕೊಡುವ ದಿವಸ-ವ್ರತದ ಪಾರಣೆದಿನ |
| ಬಾೞ್ತೆ | 169-10 ವ | — | ಜೀವನ (ಪ್ರಯೋಜನ) |
| ಬಿಗು(ಗಿ)ಪು | 174-22 | — | ಬಂಧನ (ಗಟ್ಟಿಯಾಗಿರುವಿಕೆ) |
| ಬಿಗುಱು | 228-41 | — | ಹೆದರು |
| ಬಿಗುೞು | 38–24 | — | ಅಳು |
| ಬಿಟ್ಟಿ (ವಿಷ್ಟಿ ಸಂ.) | ........... | — | ಕೂಲಿಯಿಲ್ಲದೆ ದಾಕ್ಷಿಣ್ಯಕ್ಕೆ ಕೆಲಸಮಾಡುವವ |
| ಬಿಣ್ಪು | 157-15 | – | ಕಾಠಿನ್ಯ[ಗಟ್ಟಿಯಾಗಿರುವಿಕೆ,ಭಾರವಾಗಿರುವಿಕೆ] |
| ಬಿರ್ದಿನ | 199-34 ವ | – | ಔತಣಕ್ಕೆ ಬಂದವ [ಅಭ್ಯಾಗತ] |
| ಬೆಂಕೆ | 25-45<br>100-4 | — | (ಬೇ ಧಾತುವಿನ ಕೃದಂತ) ಉಷ್ಣ–ತಾಪ |
| ಬೆಟ್ಟಿದಂ | 219-14 | — | ಕಠಿನ [ಕ್ರೂರ] |
| ಬೆಜ್ಜ | 36-19 | — | [ಭೇಷಜ-ಸಂ] ಔಷಧ, ರೋಗ ಚಿಕಿತ್ಸೆ |
| ಬೆಬ್ಬರ [ಬೆಸೆ] | 145-23 ವ | — | (ಅನುಕರಣ ಶಬ್ದ-) ಸೇರಿಸಿಕೊಳ್ಳುವುದು<br>ಹೆಮ್ಮೆಪಡುವುದು |
| ಬೆಬ್ಬಳ | 144–20 | — | [ಅನುಕರಣ ಶಬ್ದ] ದಿಗ್ಭ್ರಾಂತನಾಗುವಿಕೆ |
| ಬೆಮ್ಮರ [ಬೆನ್ನ + ಮರ] | 130–22 | — | ಮನೆಯ ಮೇಲ್ಛಾವಣಿಗೆ<br>ನಡುವೆ ಹಾಕುವ ದೊಡ್ಡ ಮರದ ತುಂಡು<br>(ತೊಲೆ – ಸರ) |
| ಬೆಸ | 200-37 | — | ಕೆಲಸ [ಕಾರ್ಯ] |

| ಶಬ್ದ | ಪು. ಪ. | | ಅರ್ಥ |
|---|---|---|---|
| | 23-39 ವ | — | ಒಡೆಯನ ಅಪ್ಪಣೆ |
| ಬೆಸೆದಿರು | 7-6 | — | ಹೆಮ್ಮೆಯಿಂದಿರು [ಒಣಹೆಮ್ಮೆಯಿಂದಿರು] |
| [1] ಬೆಳ್ಗಂಡರ್ | 102-21 ವ | — | ಅಂಜುಪುರುಕರು |
| ಬೆಳ್ಮೃಗಂ | 84-18 | — | ಜಿಂಕೆ ಮೊದಲಾದ ಸಾಧುಮೃಗ |
| [2] ಬೆಳ್ಳವಾಸ | 162-29 ವ | — | ನೀರಿನ ಪ್ರವಾಹದಲ್ಲಿದ್ದುಕೊಂಡು ತಪಸ್ಸು ಮಾಡುವುದು[ಬೆಳ್ಳದಲ್ಲಿ + ವಾಸ-ಅರಿಸಮಾ] |
| ಬೆಬ್ಬಳು | 82-14 | — | ಭಯಪಡು |
| ಬೇಹು | 58-39 ವ | — | ಗೂಢಚಾರ |
| ಬೈಕಂಗುಳಿ ಭಿಕ್ಷಾ॥ ಬೈಕಂ | 48-15 ವ | — | ಬೈಕವನ್ನು ಮಾಡುವಸ್ವಭಾವದವ-ತಿರಿಪೆಯುವ |
| ಬೊಡ್ಡಣಭಾವಿ | 198-33 ವ | — | ಒಕ್ಕರಣೆ ಭಾವಿ - ಎಂದರೆ ತುಂಬಾ ಆಳವಾಗಿ ನೀರು ಹರಿಯುವ ತೂಬುಳ್ಳ ಸೇದುವ ಭಾವಿ |
| ಬೋದಂ ಭೌತ-ಸಂ=ಭೌತಿಕ | 171-64 | — | ಶೈವ ಸನ್ಯಾಸಿ- [ಜಂಗಮಯ್ಯ] |
| ಬೋನ | 109-38 ವ | — | ಅನ್ನ |
| ಬೀಯ[ಬಿಯ][ವ್ಯಯ-ಸಂ] | 195-27 ವ | — | ಖರ್ಚು [ಪದಾರ್ಥಗಳನ್ನು ಪಯೋಗಿಸಿ ಮುಗಿಸು] |
| | ಭ | | |
| ಭಂಡ[ಬಂಡ] | 158-18 ವ | — | ವ್ಯಾಪಾರಕ್ಕಾಗಿ ಮೊದಲು ಹಾಕುವ ಹಣ ಬಂಡವಾಳ - ಇದಕ್ಕೆ ಈ ಗ್ರಂಥದಲ್ಲಿ ಮೊದಲ್ ಎಂದೂ ಪ್ರಯೋಗವಿದೆ— |
| [3] ಭೈತ್ರಂ[ವಹಿತ್ರ-ಸಂ] | 49-18 | — | ಹಡಗು [ತೆಪ್ಪ] |
| | ಮ | | |
| ಮಂದಸು (ಸ) | 134-31 | — | ಮರದ ಪೆಟ್ಟಿಗೆ |
| ಮದಿಲ್ | 133-29 ವ | — | ಗೋಡೆ |
| ಮದ್ದುಗ[ಗು]ಣಿಕೆ | 125-6 ವ | — | ಉಮ್ಮತ್ತದ ಗಿಡ |
| ಮನಮಿಕ್ಕು | 175-26 ವ | — | [ಮನಮಂ + ಇಕ್ಕು] ಎಂದರೆ ಉತ್ಸಾಹ ಹೀನನಾಗು ಎಂದು ತಾತ್ಪರ್ಯ |

---

(1) ಬೆಳ್ ಶಬ್ದಕ್ಕೆ ಶೂನ್ಯ ಎಂದರ್ಥ, ಇದು ಬೇರೆ ಶಬ್ದದೊಡನೆ ಸಮಾಸವಾಗಿ ಇಲ್ಲ ಎಂಬ ತಾತ್ಪರ್ಯವನ್ನು ಕೊಡುವುದು — ಬೆಳ್ವಯಲ್ - ಮರ ಮೊದಲಾದುವೊಂದೂ ಇಲ್ಲದ ಮೈದಾನ.

(2) ತಮಿಳಿನಲ್ಲಿ ವಳ್ಳಂ ಎಂದರೆ ನದಿಯ ನೀರಿನ ಪ್ರವಾಹವೆಂದು ಅರ್ಥ, ಆ ಶಬ್ದವೇ ಕನ್ನಡದಲ್ಲಿ ಬೆಳ್ಳ ಎಂದು ಮಾರ್ಪಟ್ಟಿದೆ. ಬೆಳ್ಳಂಗೆಡೆ ಪ್ರವಾಹರೂಪದಲ್ಲಿ ಹರಿದುಹೋಗು, ಬೆಳ್ಳವಾಸ, ಈ ಎರಡು ಶಬ್ದಗಳಲ್ಲೇ ಕನ್ನಡದಲ್ಲಿ ಹೆಚ್ಚು ಪ್ರಯೋಗವಿದೆ—

(3) ವಹಿತ್ರ ಎಂಬ ಶಬ್ದದ ವಹಿ ಎಂಬೆರಡು ಅಕ್ಷರಗಳು ತದ್ಭವವಾದಾಗ ಭೈ ಎಂಬ ಮಹಾಪ್ರಾಣಾಕ್ಷರವಾಗುವುದೆಂದು ಶಬ್ದಮಣಿದರ್ಪಣಕಾರನು (ತದ್ಭವ ಪ್ರಕರಣದಲ್ಲಿ - ಉದಾಹರಿಸಿರುವರು)

| ಶಬ್ದ | ಪು. ಪ. | | ಅರ್ಥ |
|---|---|---|---|
| ಮರಮೊದಲ್ | 162-29 ವ | — | ಮರದ ಬುಡದಲ್ಲಿದ್ದು ಮಾಡುವ ತಪಸ್ಸು |
| ಮಹೋದ್ಯ | 230-45 | — | ತುಂಬಾ ಪ್ರಯತ್ನಶಾಲಿ [ಮಹಾಶಯ] |
| ಮಱುಕಣಿಸು | 72-24 | — | ಮತ್ತೆ [ಒದಗು] ಕಾಣಿಸಿಕೊಳ್ಳು |
| ಮಱಿವಾೞ್ | 56-35 | — | ವ್ಯಭಿಚಾರ |
| ಮಾಗೆ[ಗಿ] [ಮಾಘ-ಸಂ.] | 13-25 ವ | — | ಚಳಿಗಾಲ |
| ಮಾಣಿಕಚಟ್ಟ | 220-18 ವ | — | ರತ್ನಪರೀಕ್ಷಕ [ರತ್ನಗಳ ಬೆಲೆಯನ್ನು ಕಂಡುಹಿಡಿಯುವ] |
| ಮಾಯ್ದ | 10-13 | — | ಕೆಟ್ಟ[ನೀಚ]ಹಾಳಾದ [ಸಂ-ಹತಕ ಉ-ಕೃತಾಂತಹತಕ] |
| ಮಿಾಂಟಿ | 134-31 ವ | — | ಮಣ್ಣುಹೆಂಟೆ [ಬಂದೂಕದ ಗುಂಡು] |
| ಮುಯ್ಯು | 109-38 ವ | — | ಭುಜದ ತುದಿ [ಹೆಗಲು] |
| ಮುರುಡು | 61-45 ವ | — | ಬಿದಿರಹಿಂಡಲು |
| ಮುಸುಱು | 143-18 } 180-38 } | — | ಮುತ್ತಿಕೊಳ್ಳು [ಮುಚ್ಚಿಕೊಳ್ಳು] |
| [1]ಮೆಲ್ಪಡು | 7-1 ವ | — | ಭ್ರಾಂತಿಪಡು |
| ಮೇಗೆಯ್ | 148-30 ವ | — | ಮೇಲುಗಡೆ ಚಾಚಿರುವ ಕೆಯ್ |
| ಮೊಡೆನಾತ | 134-32 | — | ಒಂದು ಬಗೆಯ ಹೊಲಸುವಾಸನೆ [ಕೀವಿನವಾಸನೆ, ವಿಸ್ರಗಂಧಿ-ಸಂ] |
| ಮೇಳಿ | 199-34 | — | ಉಳುವ ನೇಗಿಲಿನ ಮೇಲುಗಡೆಯ ಹಿಡಿ [ನೇಗಲನ್ನಮುಕಲು ಹಿಡಿಯುವ ಭಾಗ] |
| ಮೊದಲ್ | 205-48 | — | ಬಂಡವಾಳ [ಮೂಲಧನ] ಮರಮೊದಲ್ ಎಂಬಲ್ಲಿ ಮರದ ಬುಡ ಎಂದರ್ಥ |
| | ಲ | | |
| ಲಾವುಕ | 155-32[2] | — | ವಿಟಪುರುಷ |
| ಲೆಪ್ಪ | 25-45 ವ | — | [ಲೇಪ್ಯ-ಸಂ] ಮಣ್ಣುಬಟ್ಟೆ ಮತ್ತು ಗಂಜಿ ಮೊದಲಾದುವುಗಳಿಂದ ಮಾಡುವ ಬೊಂಬೆ |
| | ವ | | |
| ವಾಸಿ | 164-31 | — | ಪ್ರಸಿದ್ಧ |
| ವಿಗುರ್ವಿಸು | 163-30 ವ | — | ವಿಕಾರಹೊಂದು, ಮಾರ್ಪಾಡನ್ನು ಪಡೆವುದು [ಇಚ್ಛೆಗೆ ಬಂದ ಆಕಾರವನ್ನು ತಾಳುವ ಸಾಮರ್ಥ್ಯ] |
| ವೆಗ್ಗಳ | 226-33 | — | ಶ್ರೇಷ್ಠ [ಮೇಲಾದವ] |
| ವೆಜ್ಜ | 155-10 | — | ರಂಧ್ರ [ತೂತು] |

(1) ಈ ಶಬ್ದವು ಈ ಗ್ರಂಥದಲ್ಲಿ ಹಲವುಕಡೆ ಬಂದಿದೆ.

| ಶಬ್ದ | ಪು. ಪ. | | ಅರ್ಥ |
|---|---|---|---|
| ವೇತ್ರಾಸನ | 91-1 | — | ಕುರ್ಚಿ [ಬೆತ್ತದ ಆಸನ] |
| [1] ವೇಳೆ | 211-61 | — | ಒಡೆಯನಲ್ಲಿ ಅವನಿಗಾಗಿ ತನ್ನ ಪ್ರಾಣವನ್ನು ಕೊಡುವುದಾಗಿ ಪ್ರತಿಜ್ಞೆಮಾಡಿ ಸೇರಿ ಆಳಾಗಿ ಸೇವಿಸುವಿಕೆ |
| + ಗೊಳ್ | 160-24 ವ, 12-21 | — | ವೇಳೆಯನಿಯಮದ ಸೇವೆಯನ್ನು ಸ್ವೀಕರಿಸು |
| ವೇಳೆವಡಿಚ | 10-3 ವ | — | ಊಳಿಗದವ |
| | | ಶ | |
| ಶಲ್ಯ | 129-20 | — | ಮೂಳೆ |
| ಶೌಚ | 22-39 | — | ಪರಸ್ತ್ರೀಯನ್ನಪೇಕ್ಷಿಸದ ಬ್ರಹ್ಮಚರ್ಯವ್ರತ |
| | | ಸ | |
| ಸಂಬಳ | 122-68, 217-11 ವ | — | ದಾರಿಗರು ಕೈಯಲ್ಲಿ ಕೊಂಡೊಯ್ಯುಬುತ್ತಿಯ ಅನ್ನ |
| ಸಕಲೀಕರಣ | 150-20 ವ, 40-20 ವ | — | ಮಂತ್ರಶಾಸ್ತ್ರದ ಒಂದು ಕಾರ್ಯ ? |
| ಸಣ್ಣಿಗೆ | 154-33 | — | ಪದಾರ್ಥವನ್ನು ಸಣ್ಣಗೆಮಾಡುವ ಉಪಕರಣ |
| ಸಾವನಿಗ | 205-48 ವ | — | ಚಿತ್ರಗಳನ್ನು ಬರೆದು ಮಾರುವವ ? |
| ಸಂತ | 168-6, 229-43 | — | [ಸಾಂತ್ವ-ಸಂ] ಸಮಾಧಾನ |
| ಸಜ್ಜಾಯಿಗ | 10ಎ-36 ವ | — | ರತ್ನಗಂಬಳಿ ಮಾಡುವವ |
| ಸಂತ್ರಾಸಕ | 31-5 | — | ಭಯವನ್ನುಂಟುಮಾಡುವವ [ಸಂತ್ರಾಸ |
| | 51-26 | — | ಮೆನೆಭಯುಂ. ಎಂದು ಒಂದುಓಲೆ ಪ್ರತಿಯಲ್ಲಿ ಬರೆದಿದೆ] |
| ಸನ್ನಣಂ (ಸನ್ನಾಹ-ಸಂ.) | 165-33 ವ | — | ಕವಚ |
| ಸಬ್ಬವ | 227-35 ವ | — | [ವಿನೋದ] ನಕಲಿಮಾಡುವವ-ನಗಿಸುವವ |
| ಸಮಕಟ್ಟು | 227-35 ವ | — | (ಸಿದ್ಧನಾಗು) ಸನ್ನಾಹವಾಗು |
| ಸವಣ್ತಿ | 91-36 | — | ಜೈನಸನ್ಯಾಸಿನಿ |
| ಸವಿದೆ [ಕಂತೆ] | 196-28 ವ | — | [ಸಮಿತ್ ಸಂ] ಕಟ್ಟಿಗೆ |
| ಸಂವೇಗ | 171-15 | — | ದೃಢಸಂಕಲ್ಪ |
| ಸಾವಟಿ | 82-14 | — | ಹೆಣದ ಮುಂದೆ ಬಾರಿಸುವ ವಾದ್ಯ |
| ಸಿದ್ಧಾಯ | 155-9 ವ | — | ರಾಜನಿಗೆ ಸಲ್ಲಿಸಬೇಕಾಗಿರುವ ಭೂಮಿಯ ತೆಱಿಗೆ (ಶಾಸನಗಳಲ್ಲಿ ಈ ಶಬ್ದವುಹೆಚ್ಚಾಗಿ ಬರುವುದು] |

(1) ಈ ಶಬ್ದಕ್ಕೆ ಒಡೆಯನು ಹೇಗಿರುವನೋ ಹಾಗೆಯೇ ತಾನೂ ಇರುವೆನು ಎಂಬ ನಿಯಮದಿಂದಿರುವ ಊಳಿಗತನ ಎಂದು ಅರ್ಥ ಆದಿ-ಪಂ-ಪು ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ (ಆ 11-ಪ 110)

| ಶಬ್ದ | ಪು. ಪ. | | ಅರ್ಥ |
|---|---|---|---|
| ಸುಂಕ | 158-18 ವ | — | ಮಾರುವ ಪದಾರ್ಥಗಳಿಗಾಗಿ ಸರಕಾರಕ್ಕೆ ಕೊಡಬೇಕಾದ ತೆರುಗೆ [ಶುಲ್ಕ-ಸಂ] |
| ಸುದ್ದಗೆ | 162-29 ವ | — | ವರ್ಣಮಾಲೆ [¹ಶುದ್ಧಕಸಂ] [64ಅಕ್ಷರ-ಮತಾಂತರಗಳು 51.52 ಅಕ್ಷರಗಳು] |
| ಸುರುಳಿ | 92-37 | — | ಕೆಟ್ಟಹೆಂಗಸು |
| ಸುರ್ವು | 120-10 | — | ಪೊದರು ಮುಖಾಂತರ50.51 ಸಂ |
| ಸೂರುಳ್ | 178-31 ವ | — | ಪ್ರತಿಜ್ಞೆ [ಶಪಥ] |
| ಸೆಜ್ಜೆ | 89-32 ವ | — | ಸನ್ಯಾಸಿಯ ಉಪಕರಣ[ಕಂತೆ-ಕೌದಿ] |
| ಸೆರಗು | 164-32 ವ | — | ಒತ್ತಾಸೆ |
| ಸೈಪು | 73-26<br>200-38<br>8-2 ವ | — | ಪುಣ್ಯ |
| ಸೋಂಬ | 104-26 ವ | — | ಸೋಮಾರಿ |
| ಸೋವತ | 55-34 ವ | — | ಬಲಿಕೊಡುವುದು [ಪ್ರಾಣವನ್ನು ಬಿಡಿಸುವುದು-ಆಹಾರ] |

ಱ

| | | | |
|---|---|---|---|
| ಱಂಡೆ | 141-14 | — | ವಿಧವೆ [ಸೂಳೆ] |
| ಱೋಡಾಡು | 144-21 ವ | — | ವಿಕಾರವಾದ ಅಂಗದಿಂದ ನಗಿಸು |
| ಱುಂಜೆ | 44-21 | — | ಹೊಲೆಯರ ವಾದ್ಯ |



(1) ಸಿದ್ಧಾಹಿಶುದ್ಧಕಾಃ (ಶ.ಶಾಸನ – ಸೂ–೧)

# ಶುದ್ಧಿ ಪತ್ರಿಕೆ

| ಪು. ಪ. | ಅಶುದ್ಧ | | ಶುದ್ಧ |
|---|---|---|---|
| 12 — 20 | ಮಂದಿದರ್ಾ | — | ಮುಂದಿದರ್ಾ |
| 22 — 38 ವ | ಒಳರ್ | — | ಒಳರ್. |
| ,, — 40 | 40 | — | 39 ಹೀಗೆ |
| [ಪದ್ಯಸಂಖ್ಯೆ] | ಕೊನೆಯವರೆಗೂ ಪದ್ಯಸಂಖ್ಯೆ ಹೆಚ್ಚುವುದು | | |
| 28 — 51 [ಪ.ಸಂ] | 51 | — | 50 [ಪದ್ಯಸಂಖ್ಯೆ] |
| 30 — 3 | ವೊಡಲುಂ | — | ಮೊಡಲುಂ |
| 35 — 1 | ಝುಲ್ಲರಿ | — | ಝುಲ್ಲಱಿ |
| 50 — 21 ವ | ಕ್ಪೆಪೆ | — | ಕೃಪೆ |
| 61 — 44 [ಪ.ಸಂ] | 44 | — | 45 ಹೀಗೆಯೇ |
| | | | ಪದ್ಯಸಂಖ್ಯೆ ಹೆಚ್ಚುವುದು |
| 63 — 49 [ಪ.ಸಂ] | 49 | — | 50 |
| 81 — 9 ವ | ಕೆಟ್ಟ್ಯಯಿ | — | ಕೆಟ್ಟೈಯಿ |
| 85 — 21 | ಅಱಿಸುಖ | — | ಅಱಿಸೊಗ |
| 93 — 11 [ಪ.ಸಂ] | 11 | — | 39 |
| 108 — 37 ವ | ಮಾಕೊರ್ಂಡು | — | ಮಾಱುಗೊಂಡು |
| 126 — 15 | ತಿಂಬೆಬದು | — | ತಿಂಬೊಂದು |
| 155 — 8 | ಜ್ಜಳ | — | ಜ್ಜ್ವಳ |
| ,, — 9 | ಪೆರಿಣಾಮ | — | ಪರಿಮಾಣ |
| 156 — 12 | ದರುಶನಸುಧ್ಧಿ | — | ದರುಸನಸುದ್ದಿ |
| 170 — 13 | ತಗುಲಿತ್ಗೊ | — | ತಗುಳ್ಗೊ |
| 201 — 40 ವ | ಬಸಿರಂ | — | ಬಸಿಱಂ |
| 223 — 26 ವ | ಕ್ಕುಱಿ | — | ಕ್ಕಾಱಿ |
| | ಪುಣ | — | ಪುಣ್ಯ |
| 226 — 32 ವ | ನುಪ್ಪ | — | ನಪ್ಪ |